# ಸಮಕಾಲೀನ ಕನ್ನಡ ಕಾವ್ಯ: ಸ್ವರೂಪ ಮತ್ತು ಧೋರಣೆಗಳು
## (೨೦೦೦-೨೦೧೦)

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ(ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ನರಸಿಂಹಮೂರ್ತಿ ಜಿ.

ಮಾರ್ಗದರ್ಶಕರು
ಡಾ. ಮಾಧವ ಪೆರಾಜೆ
ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭

# ಸಮಕಾಲೀನ ಕನ್ನಡ ಕಾವ್ಯ: ಸ್ವರೂಪ ಮತ್ತು ಧೋರಣೆಗಳು
## (೨೦೦೦-೨೦೧೦)

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ(ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು
**ನರಸಿಂಹಮೂರ್ತಿ ಜಿ.**

ಮಾರ್ಗದರ್ಶಕರು
**ಡಾ. ಮಾಧವ ಪೆರಾಜೆ**
ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೭



# ಮಾರ್ಗದರ್ಶಕರ ದೃಢೀಕರಣ ಪತ್ರ

**ನರಸಿಂಹಮೂರ್ತಿ ಜಿ.** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಸಮಕಾಲೀನ ಕನ್ನಡ ಕಾವ್ಯ: ಸ್ವರೂಪ ಮತ್ತು ಧೋರಣೆಗಳು(೨೦೦೦-೨೦೧೦)"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ದಿನಾಂಕ :**
**ಸ್ಥಳ : ವಿದ್ಯಾರಣ್ಯ**

**ಡಾ. ಮಾಧವ ಪೆರಾಜೆ**
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಸಂಶೋಧಕರ ಘೋಷಣಾ ಪತ್ರ

**"ಸಮಕಾಲೀನ ಕನ್ನಡ ಕಾವ್ಯ: ಸ್ವರೂಪ ಮತ್ತು ಧೋರಣೆಗಳು (೨೦೦೦-೨೦೧೦)"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಮಾಧವ ಪೆರಾಜೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ನರಸಿಂಹಮೂರ್ತಿ ಜಿ.**
ಪಿಎಚ್.ಡಿ. ಸಂಶೋಧನ ವಿದ್ಯಾರ್ಥಿ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

**ದಿನಾಂಕ :** 07-8-17
**ಸ್ಥಳ :** ವಿದ್ಯಾರಣ್ಯ

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಸಾಹಿತ್ಯ-ಸಂಸ್ಕೃತಿ ಚಿಂತನೆಯಲ್ಲಿ ಕಾವ್ಯ ಪ್ರಕಾರಕ್ಕೆ ಅಗ್ರಸ್ಥಾನವಿದೆ. ಕುವೆಂಪು ಅವರು ಎಲ್ಲ ಸಾಹಿತ್ಯ ಪ್ರಕಾರಗಳಿಗಿಂತ ಕಾವ್ಯ ಸರ್ವಶ್ರೇಷ್ಠವಾದುದು ಎಂದು ಹೇಳಿದ್ದಾರೆ. ಅಂದರೆ ಕಾವ್ಯವು ಇತರ ಕಲೆಗಳಿಗಿಂತ ಅತಿಶಯವಾದುದು ಎಂಬುದು ಇದರರ್ಥ. ಮುದ್ದಣನ ತರುವಾಯ ಕನ್ನಡ ಸಾಹಿತ್ಯದಲ್ಲಿ ಗದ್ಯದ ಸಾಧ್ಯತೆ ಮತ್ತು ಪ್ರಯೋಗಗಳು ವಿಸ್ತರಿಸಿದವು. ಇಲ್ಲಿಂದ ಮುಂದೆ ಕಥನ ಮತ್ತು ಕಾವ್ಯ ಪರಂಪರೆಗಳೆರಡೂ ಉಳಿದ ಸಾಹಿತ್ಯಪ್ರಕಾರಗಳಿಗಿಂತ ಶಕ್ತವಾಗಿ ಬೆಳೆಯಲಾರಂಭಿಸಿದವು. ಆಧುನಿಕ ಕನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ, ಸ್ತ್ರೀವಾದಿ ಹಾಗೂ ಮುಸ್ಲಿಂ ಸಂವೇದನೆ ಎಂಬುದಾಗಿ ಗುರುತಿಸುತ್ತಿದ್ದು ಈಗಲೂ ಅದೇ ಮಾದರಿಯಲ್ಲಿ ಅಧ್ಯಯನ ನಡೆಸಲಾಗುತ್ತಿದೆ.

ಪ್ರಸ್ತುತ ೨೧ನೆಯ ಶತಮಾನದ ಸಾಹಿತ್ಯವು ಈಗಾಗಲೇ ರೂಢಿಗತವಾಗಿರುವ ಮೇಲಿನ ಸಿದ್ಧಮಾದರಿಯ ಚೌಕಟ್ಟುಗಳನ್ನು ಪುನರ್ ಮೌಲ್ಯೀಕರಿಸುತ್ತಾ ಹೊಸ ರೀತಿಯ ಓದಿಗೆ ಒಳಗು ಮಾಡುತ್ತಿದೆ.

ಇಂದಿನ ಜಾಗತೀಕರಣ ಸಂದರ್ಭದಲ್ಲಿ ಸಾಹಿತ್ಯವನ್ನು ಹಿಂದಿನ ಚೌಕಟ್ಟುಗಳಂತೆ ಅಧ್ಯಯನ ಮಾಡಲು ಹೊರಟರೆ, ಸಾಹಿತ್ಯದ ಬೇರೆ ಬೇರೆ ಅರ್ಥಸಾಧ್ಯತೆಗಳನ್ನು ಮರೆಮಾಚಿದಂತಾಗುತ್ತದೆ. ಪ್ರತಿಯೊಂದು ಸಾಹಿತ್ಯಕೃತಿಯ ರಚನೆಯ ಹಿಂದೆ ತನ್ನ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಸಂರಚನೆಗಳು ಅಂತರ್ಗತವಾಗಿರುತ್ತವೆ ಎಂಬುದನ್ನು ಮರೆಯುವಂತಿಲ್ಲ. ಕಾವ್ಯವೂ ಇದಕ್ಕೆ ಹೊರತಲ್ಲ.

ಆಧುನಿಕ ಸಂದರ್ಭದ ಸಾಹಿತ್ಯ ಚರಿತ್ರೆಕಾರರು ಹಾಗೂ ಮೀಮಾಂಸಕಾರರು ವಿಭಾಗಿಸಿರುವ ಸಾಹಿತ್ಯ ಚರಿತ್ರೆಯ ಕಾಲಘಟ್ಟಗಳನ್ನು ಅದೇ ರೀತಿಯಲ್ಲಿ ಈಗಲೂ ಅಭ್ಯಸಿಸಬೇಕಾಗಿಲ್ಲ. ಕಾಲಘಟ್ಟ ಆಧಾರಿತ ಅಧ್ಯಯನಗಳಲ್ಲಿ ಕೆಲವು ಮಿತಿಗಳಿರುತ್ತವೆ. ಇಂಥ ಮಿತಿಗಳನ್ನು ನಂತರದ ಅಧ್ಯಯನಗಳು ನೀಗಿಸಿಕೊಳ್ಳಬೇಕಾದುದು ತುಂಬಾ ಅತ್ಯಗತ್ಯ. ವಿಪರ್ಯಾಸವೆಂದರೆ ಕನ್ನಡ ಸಾಹಿತ್ಯದ ಮೊದಲ ತಲೆಮಾರಿನ ಸಾಹಿತ್ಯ ಚರಿತ್ರೆಕಾರರು, ಮೀಮಾಂಸಕಾರರು ರೂಪಿಸಿರುವ

ಸಾಹಿತ್ಯ ಚರಿತ್ರೆಯ ಪಡಿನೆಳಲಿನಲ್ಲಿಯೇ ಈಗಲೂ ಬಹುಪಾಲು ಅಧ್ಯಯನಗಳು ನಡೆಯುತ್ತಿವೆ. ೭೦–೮೦ರ ದಶಕದ ನಂತರ ದಲಿತ, ಮಹಿಳಾ, ಭಾಷಾಂತರ ಇತ್ಯಾದಿ ಸಾಹಿತ್ಯ ಚರಿತ್ರೆಗಳನ್ನು ಕಟ್ಟುವ ಪ್ರಯತ್ನಗಳು ನಡೆಯುತ್ತಿವೆ. ಇವು ಸಾಹಿತ್ಯ–ಸಂಸ್ಕೃತಿ ಚರ್ಚೆಗಳನ್ನು ಪುನರ್ ಮೌಲ್ಯೀಕರಿಸಲು ಒತ್ತಾಯಿಸುತ್ತವೆ. ಇಡೀ ಕನ್ನಡ ಸಾಹಿತ್ಯ ಚರಿತ್ರೆಯೇ ಕಾವ್ಯ ಪ್ರಕಾರವನ್ನಾಧರಿಸಿದ ವಿಭಾಗಕ್ರಮ. ಈ ವಿಭಾಗಕ್ರಮಗಳು ಉಳಿದ ಸಾಹಿತ್ಯ ಪ್ರಕಾರಗಳಿಗೆ ಅಷ್ಟಾಗಿ ಅನ್ವಯವಾಗುವುದಿಲ್ಲ. ಅಷ್ಟೇ ಯಾಕೆ, 'ಮಹಿಳಾಕಾವ್ಯ'ವನ್ನು ಆಧುನಿಕ ಸಂದರ್ಭದ ನವೋದಯ, ನವ್ಯ, ಬಂಡಾಯ, ದಲಿತ ಎಂಬ ವರ್ಗೀಕರಣಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಹೊರಟರೆ ಅನೇಕ ತೊಡಕುಗಳು ಎದುರಾಗುತ್ತವೆ. ಎಲ್ಲಕ್ಕಿಂತ ಮುಖ್ಯವಾಗಿ ಪುರುಷಕೇಂದ್ರಿತ ಅಧ್ಯಯನಕ್ರಮವು ಸ್ತ್ರೀಯರ ಪ್ರಾತಿನಿಧ್ಯವನ್ನು ಮರೆಮಾಚಿರುವ ಅಂಶವೂ ಇಲ್ಲಿ ಬೆಳಕಿಗೆ ಬರುತ್ತದೆ.

ಕಾವ್ಯಕೇಂದ್ರಿತ ಸಾಹಿತ್ಯ ಚರಿತ್ರೆ ಕಾವ್ಯಪ್ರಕಾರಕ್ಕೇ ಸಂಪೂರ್ಣವಾಗಿ ಅನ್ವಯಿಸದಿರುವಾಗ, ಈ ಸಾಹಿತ್ಯ ಚರಿತ್ರೆಯ ಹಿನ್ನೆಲೆಯಲ್ಲಿ ಉಳಿದ ಪ್ರಕಾರಗಳನ್ನು ಅಧ್ಯಯನ ಮಾಡಲು ಹೊರಟಾಗ ಅನೇಕ ವೈರುಧ್ಯಗಳು ನಮಗೆ ಎದುರಾಗುತ್ತವೆ. ಈ ಪ್ರಶ್ನೆಯನ್ನು ಕೇಳಿಕೊಂಡಾಗ ಹೊಸದಾರಿಗಳು ಕಾಣಿಸುತ್ತವೆ. ಅಂದರೆ ಸಿದ್ಧಮಾದರಿಯ ವಿಭಾಗಕ್ರಮಗಳು ಹಾಗೂ ಅಧ್ಯಯನ ಕ್ರಮಗಳನ್ನು ಮೀರುವ ಒತ್ತಾಸೆಯನ್ನು ಇತ್ತೀಚಿನ ಕಾವ್ಯ ಅಪೇಕ್ಷಿಸುತ್ತದೆ. ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ ಈ ರೀತಿಯ ಸೂಕ್ಷ್ಮ ಒಳನೋಟಗಳು ಮತ್ತು ಪ್ರಶ್ನೆಗಳು ೨೦ನೇ ಶತಮಾನದ ಸಾಹಿತ್ಯ, ಸಂಸ್ಕೃತಿ ಚಿಂತನೆಯಲ್ಲಿ ಕಂಡುಬಂದರೂ ಅವು ಹೆಚ್ಚು ಮುನ್ನೆಲೆಗೆ ಬರಲಿಲ್ಲ.

ಇತ್ತೀಚೆಗೆ ಸಾಹಿತ್ಯವನ್ನು ಅಧ್ಯಯನ ಮಾಡುವ ಕ್ರಮಗಳು ಬದಲಾಗುತ್ತಿವೆ. ಅಷ್ಟೇ ಅಲ್ಲ, ಇಂದಿನ ಅವಸರದ ಸಂದರ್ಭದಲ್ಲಿ ಅದರ ಒಳನೋಟಗಳು ಅತ್ಯಂತ ತೀವ್ರತೆಯನ್ನು ಪಡೆಯಲೆತ್ನಿಸಿವೆ. ಕಾವ್ಯವೂ ಒಳಗೊಂಡಂತೆ ಸಾಹಿತ್ಯದ ವಸ್ತು, ಅಭಿವ್ಯಕ್ತಿ ವಿಧಾನಗಳು, ಬರಹಗಾರ ಮತ್ತು ಓದುಗರ ನಡುವೆ ತೀವ್ರವಾದ ಪಲ್ಲಟಗಳು ಸಂಭವಿಸುತ್ತಿವೆ. ಸಾಮಾಜಿಕ ಮಾಧ್ಯಮಗಳು ಮತ್ತು ತಂತ್ರಜ್ಞಾನದಂಥ ಆಧುನಿಕ ಪ್ರಕ್ರಿಯೆಗಳು ಜಗತ್ತನ್ನು ಅತಿವೇಗವಾಗಿ ಬದಲಾವಣೆಗೆ ಒಳಗುಮಾಡುತ್ತಿವೆ. ಇಂಥ ಬೆಳವಣಿಗೆಗಳು ಹಾಗೂ ಬದಲಾವಣೆಗಳು ಸಾಹಿತ್ಯದ ಸಂವಹನ ವಿಧಾನವನ್ನು ಬದಲಾಯಿಸುತ್ತಿವೆ.

ಈಗ ದಲಿತ-ಬಂಡಾಯೋತ್ತರ ಸಂದರ್ಭದಲ್ಲಿ ರಚನೆಯಾಗುತ್ತಿರುವ ಕನ್ನಡ ಸಾಹಿತ್ಯವನ್ನು ಯಾವ ಸಂವೇದನೆಗಳು ಪ್ರಭಾವಿಸುತ್ತಿವೆ? ಈ ರೀತಿಯ ಸಂವೇದನೆಗಳನ್ನು ಯಾವ ಹೆಸರಿನಿಂದ ಗುರುತಿಸಬಹುದು? ಇಂಥ ಅನೇಕ ಪ್ರಶ್ನೆಗಳು ನಮಗೆ ಎದುರಾಗುತ್ತವೆ. ಎಲ್ಲಕ್ಕಿಂತ ಮುಖ್ಯವಾಗಿ ಒಂದು ನಿರ್ದಿಷ್ಟ ಹಾಗೂ ಖಚಿತವಾದ 'ಸಾಹಿತ್ಯಿಕ ಕಾಲಘಟ್ಟ'ವನ್ನು ಗುರುತಿಸಿಕೊಳ್ಳಲಾರದ ಸ್ಥಿತಿಯಲ್ಲಿ ನಾವಿದ್ದೇವೆ. ಹೀಗಿರುವಾಗ ಕಾವ್ಯವನ್ನು ಅಧ್ಯಯನ ಮಾಡಲು ಹೊರಟಾಗ ಅನೇಕ ಸವಾಲುಗಳು ನಮ್ಮ ಮುಂದಿವೆ ಅನ್ನಿಸುತ್ತದೆ.

ಇಂಗ್ಲಿಷ್‌ನ ದಬ್ಬಾಳಿಕೆ, ದೇಶೀಯ ಭಾಷೆಗಳ ಅಸ್ತಿತ್ವದ ಪ್ರಶ್ನೆಗಳು, ಕನ್ನಡ ಮಾಧ್ಯಮ ಶಾಲೆಗಳನ್ನು ಮುಚ್ಚುತ್ತಿರುವ ಆತಂಕ, ಎಸ್.ಇ.ಜೆಡ್. ವಿರುದ್ಧದ ಹೋರಾಟಗಳು, ಜಾಗತೀಕರಣ, ಖಾಸಗೀಕರಣ, ನಗರೀಕರಣ, ಉದಾರೀಕರಣಗಳು ಮೂರನೇ ಜಗತ್ತಿನ ರಾಷ್ಟ್ರಗಳ ಮೇಲೆ ತೀವ್ರವಾದ ಪ್ರಭಾವ ಮತ್ತು ಪರಿಣಾಮಗಳನ್ನು ಉಂಟುಮಾಡುತ್ತಿವೆ. ರೈತರು, ದಲಿತರು, ಹಿಂದುಳಿದವರು, ಮಹಿಳೆಯರು, ಅಲೆಮಾರಿ ಮತ್ತು ಬುಡಕಟ್ಟು ಸಮುದಾಯಗಳು ಹಾಗೂ ಕೂಲಿ ಕಾರ್ಮಿಕರ ಮೇಲೆ ಪ್ರಭುತ್ವ ಸವಾರಿ ಮಾಡುತ್ತಿದೆ. ನಮ್ಮ ಭಾಷೆ, ಸಂಸ್ಕೃತಿ ಹಾಗೂ ಜೀವನವಿಧಾನಗಳ ಮೇಲೆ ದಿನದಿಂದ ದಿನಕ್ಕೆ ವಿವಿಧ ಬಗೆಯ ಆಕ್ರಮಣಗಳಾಗುತ್ತಿವೆ. ಇಂಥ ಆಕ್ರಮಣಗಳನ್ನು ಎದುರಿಸಲು ಹೊಸ ವಿಚಾರ, ಸೈದ್ಧಾಂತಿಕ ಆಲೋಚನೆ ಹಾಗೂ ಹೊಸ ನುಡಿಗಟ್ಟುಗಳು ಬೇಕಾಗಿವೆ ಎನಿಸುತ್ತದೆ. ಮತೀಯ ಸಂಘರ್ಷಗಳು, ಕೋಮುವಾದದ ಹಿಂಸೆ, ಪರಿಸರ ನಾಶ, ನಿರಂತರವಾದ ಬರಗಾಲ, ವಲಸೆ ಹೋಗುವುದು, ರೈತರ ಆತ್ಮಹತ್ಯೆ, ದಲಿತರು ಮತ್ತು ಮಹಿಳೆಯರ ಮೇಲಿನ ದೌರ್ಜನ್ಯಗಳು ಇನ್ನೂ ಮುಂತಾದ ಸಮಸ್ಯೆಗಳು ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ನಮ್ಮ ಕಣ್ಣೆದುರಿನ ಪ್ರಶ್ನೆಗಳಾಗಿವೆ.

ಸಮಕಾಲೀನ ಸಾಹಿತ್ಯ-ಸಂಸ್ಕೃತಿ ಚರ್ಚೆಗಳು ತಾತ್ವಿಕ ಸಂಘರ್ಷದಿಂದ ದೂರವಾಗುತ್ತಿರುವ ಒಂದು ರೀತಿಯ ವಿಷಮ ಸನ್ನಿವೇಶದಲ್ಲಿ ಸಮಕಾಲೀನ ಕವಿಗಳ ಕಾಳಜಿ ಮತ್ತು ಜವಾಬ್ದಾರಿಗಳು ತುಂಬಾ ಇವೆ. ಗೂಗಿ ವಾ ಥಿಯಾಂಗೋ ಹೇಳುವ ಹಾಗೆ "ರಾಜಕಾರಣ ಮತ್ತು ಲೇಖಕ ಇಬ್ಬರೂ ನೈತಿಕ ಭ್ರಷ್ಟರಾಗಿರುವ ಕಾಲದಲ್ಲಿ ಬದುಕುತ್ತಿರುವ ಈ ಸಂಕ್ರಮಣ ಸನ್ನಿವೇಶದಲ್ಲಿ ನುಡಿಗಳ ಶಕ್ತಿ ಮತ್ತು ಶಕ್ತಿಶಾಲಿ ನುಡಿ"[೧] ಕುರಿತು ಕವಿಗಳು ಚಿಂತಿಸಬೇಕಾಗಿದೆ.

### ೧.೧. ಅಧ್ಯಯನದ ಉದ್ದೇಶ

೧. ಒಟ್ಟು ಸಮಕಾಲೀನ ಕನ್ನಡ ಕಾವ್ಯದ ಸ್ವರೂಪ ಮತ್ತು ಧೋರಣೆಗಳನ್ನು ಕುರಿತು ಇಡಿಯಾಗಿ ಕೈಗೊಂಡಿರುವ ಮೊದಲ ಅಧ್ಯಯನ ಇದು. ಆದ್ದರಿಂದ ಇಲ್ಲಿ ಇತ್ತೀಚಿನ ಕಾವ್ಯದ ವಸ್ತು, ಅದು ಅಭಿವ್ಯಕ್ತಿಸುತ್ತಿರುವ ಸಾಮಾಜಿಕ, ಸಾಹಿತ್ಯಕ ಧೋರಣೆಗಳು ಮತ್ತು ಈ ಕಾಲದ ಪ್ರಮುಖ ಕಾಳಜಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

೨. ಇತ್ತೀಚೆಗೆ-ತರುಣಕವಿಗಳೇ ಹೆಚ್ಚು ಕಾವ್ಯವನ್ನು ರಚಿಸುತ್ತಿದ್ದರೂ ಹಿರಿಯರು ಬರೆದಿರುವ ಕಾವ್ಯದ ಮೌಲ್ಯವನ್ನು ಇಲ್ಲಿ ವಿವೇಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ತರುಣಕವಿಗಳು ಮತ್ತು ಹಿರಿಯ ಕವಿಗಳ ಕಾವ್ಯದ ಅಂತರ್‌ಸಂಬಂಧದ ನೆಲೆಗಳನ್ನು ಚರ್ಚಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು.

೩. ಇಲ್ಲಿಯವರೆಗೂ ಅಕ್ಷರಲೋಕದಿಂದ ದೂರವಿದ್ದ ವಿವಿಧ ಸಮುದಾಯಗಳ ಕವಿಗಳು ಕಾವ್ಯರಚನೆಯಲ್ಲಿ ತೊಡಗಿದ್ದಾರೆ. ಸಮಕಾಲೀನ ಕವಿಗಳು ಮುಖ್ಯವಾಗಿ ನೊಂದವರ, ತುಳಿತಕ್ಕೆ ಒಳಗಾದವರ ನೋವನ್ನು ಕಾವ್ಯದಲ್ಲಿ ಅಭಿವ್ಯಕ್ತಿಸುತ್ತಿದ್ದಾರೆ. ಹೀಗೆ ಕಾವ್ಯದಲ್ಲಿ

ವ್ಯಕ್ತವಾಗಿರುವ ನೋವು, ಸಂಕಟಗಳ ಸ್ವರೂಪವನ್ನು ಕುರಿತು ಅಧ್ಯಯನ ಮಾಡುವುದು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿದೆ.

೪. ದಲಿತ–ಬಂಡಾಯೋತ್ತರ ಸಂದರ್ಭದಲ್ಲಿ ರಚನೆಯಾಗುತ್ತಿರುವ ಸಮಕಾಲೀನ ಕನ್ನಡ ಕಾವ್ಯ ಒಂದು ರೀತಿಯ ಕವಲುಹಾದಿಯ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ. ಹೀಗೆ ಸಂಕೀರ್ಣ ರೂಪಗಳಲ್ಲಿ ರಚನೆಯಾಗುತ್ತಿರುವ ಕಾವ್ಯದ ವಿಶಿಷ್ಟತೆಯನ್ನು ಕುರಿತು ಚರ್ಚಿಸುವ ಉದ್ದೇಶ ಇಲ್ಲಿನದು.

೫. ಸಮಕಾಲೀನ ಕನ್ನಡ ಕಾವ್ಯವನ್ನು ಕುರಿತು ರಚನೆಗೊಂಡಿರುವ ವಿಮರ್ಶಾ ಲೇಖನಗಳ ಹಿಂದಿನ ಧೋರಣೆ ಮತ್ತು ಅವುಗಳ ನಿರ್ವಚನೆಯಿಂದ ದಕ್ಕಿರುವ ಸಾಧ್ಯತೆಗಳನ್ನು ವಿವೇಚಿಸುತ್ತಲೇ ಅವುಗಳನ್ನು ಪುನರ್ ಮೌಲ್ಯೀಕರಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು.

೬. ಕನ್ನಡ ಕಾವ್ಯ ಏಕತಾನತೆಯ ಬೆನ್ನೇರಿ ವಿಶಿಷ್ಟವಾಗಿ ಮೂಡಿಬರುತ್ತಿಲ್ಲ. ಪ್ರಯೋಗಶೀಲತೆ, ಹೊಸ ನುಡಿಗಟ್ಟು ಮತ್ತು ವಿಶಿಷ್ಟ ಕಾವ್ಯಭಾಷೆ ಸಂಯೋಗಗೊಳ್ಳದಿರುವ ಕಾರಣಕ್ಕೆ ಇತ್ತೀಚಿನ ಕಾವ್ಯ ಸೊರಗಿದಂತೆ ಕಾಣಿಸುತ್ತಿದೆ ಎಂಬ ಮಾತುಗಳು, ಟೀಕೆಗಳು ಕೇಳಿಬರುತ್ತಿವೆ. ಇವುಗಳ ಹಿನ್ನೆಲೆಯಲ್ಲಿ ಸಮಕಾಲೀನ ಕನ್ನಡ ಕಾವ್ಯದ ಪ್ರಯೋಗಶೀಲತೆ ಮತ್ತು ಅನನ್ಯತೆಗಳನ್ನು ಕುರಿತು ಚಿಂತಿಸುವುದು ಈ ಅಧ್ಯಯನದ ಮುಖ್ಯ ಆಶಯವಾಗಿದೆ. ಸಮಕಾಲೀನ ಸಂದರ್ಭದಲ್ಲಿ ಬರೆಯುತ್ತಿರುವ ಕವಿಗಳ ಮುಖ್ಯ ಕಾಳಜಿಗಳೇನು? ಅವರ ಅಭಿವ್ಯಕ್ತಿ ಮಾರ್ಗಗಳು ಯಾವುವು? ಎಂಬುದನ್ನು ಅರಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಮಹಾಪ್ರಬಂಧದ ವ್ಯಾಪ್ತಿಯನ್ನು ೨೦೦೦ರಿಂದ ೨೦೧೦ರವರೆಗಿನ ಒಂದು ನಿರ್ದಿಷ್ಟ ಕಾಲಾವಧಿಗೆ ಖಚಿತಪಡಿಸಿಕೊಳ್ಳಲಾಗಿದೆ. ಅಂದರೆ ೨೧ನೆಯ ಶತಮಾನದ ಮೊದಲ ದಶಕದ ಕಾವ್ಯವನ್ನು ಕುರಿತು ಇಲ್ಲಿ ಅಭ್ಯಸಿಸಲಾಗಿದೆ. ಹಾಗೆ ನೋಡಿದರೆ ಸಮಕಾಲೀನ ಕನ್ನಡ ಕವಿಗಳು ರಚಿಸಿರುವ ಕಾವ್ಯವನ್ನು ಕುರಿತು ಒಂದು ನಿರ್ದಿಷ್ಟ ಕಾಲಾವಧಿಯ ವ್ಯಾಪ್ತಿಯಲ್ಲಿ ಸಮಗ್ರವಾಗಿ ಅಧ್ಯಯನ ಮಾಡುವುದಕ್ಕೆ ಹೆಚ್ಚು ಸಮಯ ಬೇಕಾಗುತ್ತದೆ. ಏಕೆಂದರೆ ಎಂದಿಗಿಂತಲೂ ಹೆಚ್ಚು ಜನ ಕವಿಗಳು ಈಗ ಕಾವ್ಯರಚನೆಯಲ್ಲಿ ತೊಡಗಿದ್ದಾರೆ. ಹೀಗಿರುವಾಗ ಪ್ರತಿಯೊಬ್ಬ ಕವಿಯ ಕಾವ್ಯವನ್ನು ಕುರಿತು ಪ್ರತ್ಯೇಕ ಪ್ರಬಂಧಗಳನ್ನೇ ರಚನೆ ಮಾಡಲು ಸಾಧ್ಯ. ಆ ಹಿನ್ನೆಲೆಯಲ್ಲಿ ಒಂದು ಸೀಮಿತ ಅವಧಿಯಲ್ಲಿ ಎಲ್ಲಾ ಕವಿಗಳ ಪ್ರಕಟಿತ ಕವಿತೆಗಳನ್ನು ಅಧ್ಯಯನ ಮಾಡಲು ಹೊರಟರೆ, ಅದು ಕೇವಲ ಮೇಲ್ನೋಟದ ಸಮೀಕ್ಷೆಯೋ, ಸಾರಾಂಶೀಕರಣವೋ ಆಗುವ ಅಪಾಯವಿದೆ. ಆದ್ದರಿಂದ ಪ್ರಾತಿನಿಧಿಕ ಕವಿಗಳ ಆಯ್ದ ಕವಿತೆಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಹೀಗೆ ಅಧ್ಯಯನ ಮಾಡುವಾಗ ಒಬ್ಬನೇ ಕವಿಯ ಬೇರೆ ಬೇರೆ ಸಂಕಲನಗಳು ಬೇರೆ ಬೇರೆ ಕಾಲಘಟ್ಟದಲ್ಲಿ ಪ್ರಕಟವಾಗಿವೆ. ಆದ್ದರಿಂದ ಇಲ್ಲಿ ೨೧ನೆಯ ಶತಮಾನದ ಮೊದಲ ದಶಕದ ಕವಿತೆಗಳನ್ನು ಅಧ್ಯಯನದ ಕೇಂದ್ರಭಿತ್ತಿಯಲ್ಲಿ ಚರ್ಚಿಸಿದ್ದರೂ ಅಧ್ಯಯನದ ಅನುಕೂಲ ಹಾಗೂ ತೌಲನಿಕ ದೃಷ್ಟಿಯಿಂದ ಅಧ್ಯಯನ ಮಾಡುವಾಗ ಒಂದು ನಿರ್ದಿಷ್ಟ ದಶಕದ ಆಚೆ-ಈಚೆಗಿನ ಕವಿತೆಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಇದು ವ್ಯಾಪ್ತಿಯ ದೃಷ್ಟಿಯಿಂದ ಸ್ವಲ್ಪ ತೊಡಕು ಎನಿಸಿದರೂ; ಅನಿವಾರ್ಯ ಮತ್ತು ಅಗತ್ಯ ಆಗಿದೆ. ಏಕೆಂದರೆ ಯಾವುದೇ ಬಗೆಯ ಸಾಹಿತ್ಯ-ಸಂಸ್ಕೃತಿಯ ವಿಚಾರಗಳನ್ನು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಗೆರೆ ಕೊರೆದಂತೆ ಅಧ್ಯಯನ ಮಾಡಲಾಗದು.

ಹಾಗೆಯೇ ಸಾಮಾಜಿಕ ಜಾಲತಾಣಗಳು ಸಹ ಇತ್ತೀಚಿನ ಅಭಿವ್ಯಕ್ತಿ ಮಾಧ್ಯಮಗಳಾಗಿರುವುದರಿಂದ ಫೇಸ್‌ಬುಕ್, ವಾಟ್ಸಪ್, ಬ್ಲಾಗ್ ಮುಂತಾದ ಸಾಮಾಜಿಕ ಜಾಲತಾಣಗಳಲ್ಲಿ ಪ್ರಕಟವಾಗಿರುವ ಹೊಸ ತಲೆಮಾರಿನ ಕವಿಗಳ ಕವಿತೆಗಳನ್ನು ಪ್ರಾಸಂಗಿಕವಾಗಿ ಇಲ್ಲಿ ಚರ್ಚಿಸಲಾಗಿದೆ.

### ೧.೩. ಅಧ್ಯಯನದ ವಿಧಾನ

ಜಾಗತೀಕರಣ ಅಥವಾ ವಸಾಹತೋತ್ತರ ಸಂದರ್ಭದ ಈ ಸಂಕೀರ್ಣ ಸನ್ನಿವೇಶದಲ್ಲಿ ರಚಿತವಾದ ಕಾವ್ಯವು ಹಲವು ಆಯಾಮಗಳನ್ನು ತನ್ನ ಆಂತರ್ಯದಲ್ಲಿ ಹುದುಗಿಸಿಟ್ಟುಕೊಂಡಿದೆ. ಜಾಗತೀಕರಣ ಉಂಟುಮಾಡಿದ ಆಕ್ರಮಣಗಳು ಮತ್ತು ಅದರಿಂದ ಉಂಟಾದ ಪರಿಣಾಮಗಳನ್ನು ಕನ್ನಡ ಕಾವ್ಯ ಜೀರ್ಣಿಸಿಕೊಳ್ಳುತ್ತಲೇ ಹೊಸಹುಟ್ಟು ಪಡೆದ ಬಗೆಯನ್ನು ಹುಡುಕಾಟ ಮಾಡುವುದು ಈ ಸಂಶೋಧನೆಯ ಮುಖ್ಯ ಅಪೇಕ್ಷೆಯಾಗಿದೆ.

ಕನ್ನಡ ಕಾವ್ಯಚಿಂತನೆಗೆ ಸಂಬಂಧಿಸಿದಂತೆ ಸುದೀರ್ಘವಾದ ಪರಂಪರೆಯೇ ನಮ್ಮಲ್ಲಿ ಬೆಳೆದುಬಂದಿದೆ. ಆ ಹಿನ್ನೆಲೆಯಲ್ಲಿ ಸಮಕಾಲೀನ ಕಾವ್ಯಕೃತಿಗಳಲ್ಲಿ ವ್ಯಕ್ತವಾಗುತ್ತಿರುವ ವಸ್ತು, ವಿಷಯ ಮತ್ತು ಅದನ್ನು ಯಾವ ನೆಲೆಯಿಂದ ಗ್ರಹಿಸಲಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಜೊತೆಗೆ ಈ ಕಾವ್ಯಪ್ರಕಾರ ಭಾಷಿಕ ರಚನೆಯಾಗಿರುವುದರಿಂದ ಇವುಗಳ ತಾತ್ವಿಕ ವಿನ್ಯಾಸವನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಧ್ಯೇಯವಾಗಿದೆ. ಅದರ ಹಿನ್ನೆಲೆಯಲ್ಲಿ ವಸ್ತುವಿನ ಆಯ್ಕೆ, ನಿರೂಪಣಾಕ್ರಮ ಹಾಗೂ ರಚನಾವಿಧಾನ ಇನ್ನೂ ಮುಂತಾದ ಅಂಶಗಳಿಂದ ಕೂಡಿದ ಕಾವ್ಯಪ್ರಕಾರದ ವಿವಿಧ ವಿನ್ಯಾಸಗಳನ್ನು ವಿಶ್ಲೇಷಣಾತ್ಮಕ ಮತ್ತು ವಿಮರ್ಶಾತ್ಮಕ ನೆಲೆಯಲ್ಲಿ ಗುರುತಿಸಲಾಗಿದೆ. ಇತ್ತೀಚಿನ ಕಾವ್ಯದ ಮುಖ್ಯ ಒಲವುಗಳನ್ನು ಆಶಯಕೇಂದ್ರಿತ ನೆಲೆಯಲ್ಲಿ ಗುರುತಿಸುವ ಹಂಬಲ ಈ ಅಧ್ಯಯನದ್ದು. ಆದ್ದರಿಂದ ಕೆಲವು ಕವಿಗಳು ಮತ್ತು ಅವರ ಕವಿತೆಗಳು ಇಲ್ಲಿ ಚರ್ಚೆಗೆ ಒಳಗಾಗಿಲ್ಲ. ಇದರ ಹೊರತಾಗಿಯೂ ಒಟ್ಟಾರೆ ಸಮಕಾಲೀನ ಕನ್ನಡ ಕಾವ್ಯದ ಮುಖ್ಯ ಧಾರೆಗಳ ಬಗೆಗೆ ದರ್ಶನವೊಂದನ್ನು ರೂಪಿಸುವ ಪ್ರಯತ್ನವಂತೂ ಇಲ್ಲಿ ಆಗಿದೆ.

## ೧.೪. ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಒಟ್ಟು ಏಳು ಅಧ್ಯಾಯಗಳಾಗಿ ವಿಭಾಗಿಸಿಕೊಂಡಿದ್ದು, ಅದರ ಸ್ವರೂಪವನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

ಅಧ್ಯಾಯ ಒಂದು: 'ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ'. ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಅಧ್ಯಯನಕ್ಕೆ ಗುರುತು ಮಾಡಿಕೊಂಡ ವ್ಯಾಪ್ತಿಯನ್ನು ವಿವರಿಸಲಾಗಿದೆ. ಜೊತೆಗೆ ಪ್ರಸ್ತುತ ಅಧ್ಯಯನವು ಯಾವ ವೈಧಾನಿಕತೆಯನ್ನು ಅಳವಡಿಸಿಕೊಂಡಿದೆ ಎಂಬುದನ್ನು ವಿವರಿಸಲಾಗಿದೆ.

ಅಧ್ಯಾಯ ಎರಡು: 'ಅಧ್ಯಯನದ ಸಮೀಕ್ಷೆ'. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ನಡೆದ ಅಧ್ಯಯನಗಳ ವಿಮರ್ಶಾತ್ಮಕ ಸಮೀಕ್ಷೆಯನ್ನು ಇಲ್ಲಿ ನೀಡಲಾಗಿದೆ.

ಅಧ್ಯಾಯ ಮೂರು: 'ಸಮಕಾಲೀನ ಸಾಹಿತ್ಯ ಸಂದರ್ಭ: ವರ್ತಮಾನದ ಬಿಕ್ಕಟ್ಟುಗಳು'. ಈ ಅಧ್ಯಾಯದಲ್ಲಿ ಎಲ್ಲಾ ಕಾಲದ ಸಮಕಾಲೀನ ಕಾವ್ಯದ ಧೋರಣೆಗಳ ಸ್ವರೂಪ ಯಾವ ಬಗೆಯದು? ಎಂಬ ಸ್ಥೂಲ ಪರಿಚಯವನ್ನು ನೀಡಲಾಗಿದೆ. ಹಾಗೆಯೇ ಹೊಸತಲೆಮಾರಿನ ಕವಿಗಳು ಮತ್ತು ತಂತ್ರಜ್ಞಾನದ ನಡುವಿನ ಸಂಬಂಧದ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಇದರ ಜೊತೆಗೆ 'ಸಮಕಾಲೀನ' ಪರಿಕಲ್ಪನೆಯ ಬಗೆಗಿನ ತೊಡಕನ್ನು ನಿರ್ವಚಿಸಲಾಗಿದೆ.

ಅಧ್ಯಾಯ ನಾಲ್ಕು: 'ಸಮಕಾಲೀನ ಕನ್ನಡ ಕಾವ್ಯ: ಪ್ರತಿರೋಧದ ನೆಲೆಗಳು'. ಪ್ರಸ್ತುತ ಅಧ್ಯಾಯದಲ್ಲಿ ಜಾಗತೀಕರಣ, ಕೋಮುವಾದ ಮತ್ತು ಮತೀಯ ಸಂಘರ್ಷಕ್ಕೆ ಕನ್ನಡ ಕಾವ್ಯ ತೋರಿದ ಪ್ರತಿಕ್ರಿಯೆಯ ಸ್ವರೂಪದ ಬಗ್ಗೆ ಚರ್ಚಿಸಲಾಗಿದೆ. ಪುರಾಣ ಮತ್ತು ಚರಿತ್ರೆಯ ಅನುಸಂಧಾನದ ಬಗ್ಗೆ ವಿವೇಚಿಸಲಾಗಿದೆ. ಈ ಅಧ್ಯಾಯದ ಕೊನೆಯಲ್ಲಿ ಕನ್ನಡ ಕಾವ್ಯವು ಅಭಿವ್ಯಕ್ತಿಸಿರುವ ಪ್ರತಿರೋಧದ ನೆಲೆಗಳ ಬಗೆಗೆ ಹುಡುಕಾಟ ಮಾಡಲಾಗಿದೆ.

ಅಧ್ಯಾಯ ಐದು: 'ಸಮಕಾಲೀನ ಕನ್ನಡ ಕಾವ್ಯ: ಬಹುತ್ವದ ಮಾದರಿಗಳು'. ಇಲ್ಲಿ ಇತ್ತೀಚಿನ ಕನ್ನಡ ಕಾವ್ಯದ ಸಂಕೀರ್ಣ ಮಾದರಿಗಳಾದ ಆಧುನಿಕ ವಚನಗಳು, ಗಜಲ್‌ಗಳು, ಹೋರಾಟದ ಹಾಡುಗಳ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯ ಆರು: 'ಸಮಕಾಲೀನ ಕನ್ನಡ ಕಾವ್ಯ ಮತ್ತು ಅಸ್ಮಿತೆಯ ಹುಡುಕಾಟ'. ಪ್ರಸ್ತುತ ಅಧ್ಯಾಯದಲ್ಲಿ ಸಮಕಾಲೀನ ಕನ್ನಡ ಕಾವ್ಯದ ಪ್ರಯೋಗಶೀಲತೆ ಮತ್ತು ಅಸ್ಮಿತೆಯ ಹುಡುಕಾಟದ ಮಾದರಿಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಏಳು: 'ಅಂದಂದಿನ ನುಡಿಯ ಅಂದೇ ಅರಿಯಬಾರದು'. ಇದು ಈ ಅಧ್ಯಯನದ ಸಮಾರೋಪ ಭಾಗ. ಈ ಅಧ್ಯಾಯದಲ್ಲಿ ಪ್ರಸ್ತುತ ಪ್ರಬಂಧದ ಫಲಿತಗಳು, ಅಧ್ಯಯನದ ಮಿತಿಗಳು ಮತ್ತು ಸಾಧ್ಯತೆಗಳ ಬಗೆಗೆ ವಿವೇಚಿಸಲಾಗಿದೆ.

ಅನುಬಂಧದಲ್ಲಿ ಮೂಲ ಆಕರಗಳು, ಪರಾಮರ್ಶನ ಗ್ರಂಥಗಳು, ನಿಯತಕಾಲಿಕೆಗಳು, ಬ್ಲಾಗ್‌ಗಳು ಮತ್ತು ಈ ಅಧ್ಯಯನಕ್ಕೆ ಬಳಸಿಕೊಂಡಿರುವ ಪತ್ರಿಕೆಗಳ ಪಟ್ಟಿಯನ್ನು ನೀಡಲಾಗಿದೆ.

**ಕೊನೆ ಟಿಪ್ಪಣಿ**

೧. ಕೇಶವ ಮಳಗಿ, ಸಿಂಹದ ಮುಖಕ್ಕೆ ನವಿಲಿನ ಸೋಗೆ; ಶಕ್ತಿ ಶಾರದೆಯ ಮೇಳದ ಹಾಗೆ, **ಆದಿಮ ಲಿವಿಂಗ್ ಟೈಮ್ಸ್,** ಜನವರಿ–ಫೆಬ್ರವರಿ ೨೦೧೩, ಪುಟ ೧೦.



ಅಧ್ಯಾಯ : ಎರಡು

# ಈವರೆಗೆ ನಡೆದ ಅಧ್ಯಯನಗಳ ವಿಮರ್ಶಾತ್ಮಕ ಸಮೀಕ್ಷೆ

ಕನ್ನಡವೂ ಒಳಗೊಂಡಂತೆ ಜಗತ್ತಿನ ಯಾವುದೇ ಭಾಷೆಯ ಕಾವ್ಯಪರಂಪರೆಯನ್ನು ಪರಿಶೀಲಿಸಿದರೆ ಅದು ಆಯಾ ಕಾಲಕ್ಕೆ ತಕ್ಕಂತೆ ಹಲವು ಪರಿವರ್ತನೆಗಳಿಗೆ ಒಳಗಾಗಿ ಬೆಳೆಯುತ್ತ ಬಂದಿರುವುದನ್ನು ಕಾಣಬಹುದು. ಪ್ರತಿಯೊಂದು ಕವಿತೆ, ಕೃತಿಯೂ ಕೂಡ ತನ್ನ ಸುತ್ತಣ ಸಮಾಜದ ವಿದ್ಯಮಾನಗಳಿಗೆ ಕಳಕಳಿ ಅಥವಾ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಲೇ ತನ್ನ ಸಮಕಾಲೀನ ಆಗುಹೋಗುಗಳಿಗೂ ಸಹ ಪ್ರತಿಸ್ಪಂದಿಸಿರುವುದನ್ನು ನಾವು ಗಮನಿಸಬಹುದು.

ಪ್ರಸುತ ವಿಷಯದ ಬಗ್ಗೆ ಹೇಳುವುದಾದರೆ, ಸಮಕಾಲೀನ ಅಥವಾ ಇತ್ತೀಚಿನ ಕಾವ್ಯದ ಬಗೆಗೆ ವ್ಯಾಪಕವಾದ ಅಧ್ಯಯನಗಳಾಗಿಲ್ಲವೆಂದೇ ಹೇಳಬೇಕು. ಆಂಶಿಕವಾಗಿ ಮುನ್ನುಡಿ-ಬೆನ್ನುಡಿ ರೂಪದಲ್ಲಿ ಮೇಲ್ನೋಟದ ಅಭಿಪ್ರಾಯ, ಅನಿಸಿಕೆ, ವಾರ್ಷಿಕ ವಿಶೇಷ ಸಂಚಿಕೆಗಳಲ್ಲಿನ ಕೆಲವು ಲೇಖನಗಳು ಹಾಗೂ ಬಿಡಿ ಬಿಡಿ ಪದ್ಯ ಕುರಿತ ವಿಶ್ಲೇಷಣೆಗಳಲ್ಲಿ ಸಮಕಾಲೀನ ಕನ್ನಡ ಕಾವ್ಯವನ್ನು ಕುರಿತು ಅಲ್ಲಲ್ಲಿ ಚರ್ಚಿಸಿರುವುದನ್ನು ಕಾಣಬಹುದು.

ಅವುಗಳಲ್ಲಿ ಮುಖ್ಯವಾದ ಕೆಲವು ಲೇಖನ ಮತ್ತು ಕೃತಿಗಳನ್ನು ಈ ಕೆಳಗೆ ವಿಶ್ಲೇಷಣೆಗೊಳಪಡಿಸಲಾಗಿದೆ.

ಜಿ.ಕೆ. ರವೀಂದ್ರಕುಮಾರ್ ಅವರು 'ಕಾವ್ಯ ಸಮೃದ್ಧವಾಗಿದೆ! ಆದರೆ'... ಎಂಬ ಲೇಖನದಲ್ಲಿ ಕಳೆದ ಈ ಇಪ್ಪತ್ತು ವರ್ಷಗಳಲ್ಲಿ ಅಂದರೆ ೯೦ರ ದಶಕದಿಂದೀಚೆಗೆ ಜಾಗತೀಕರಣ ಮತ್ತು ಉದಾರೀಕರಣಗಳ ಫಲವಾಗಿ ನಮ್ಮ ಗ್ರಾಮಗಳು ಕೇವಲ ಗ್ರಾಮಗಳಾಗಿ ಉಳಿಯದೆ ಉಪನಗರ ಸಂಸ್ಕೃತಿಯಾಗಿ ರೂಪಾಂತರಗೊಳ್ಳುತ್ತಿವೆ ಎಂದು ಆತಂಕ ವ್ಯಕ್ತಪಡಿಸಿದ್ದಾರೆ. ಇದರ ಪರಿಣಾಮವಾಗಿ "ಬರಹಗಾರರ ಪ್ರಾದೇಶಿಕ ಬನಿಯು ನೆನಪಿನ ಗಣಿಗೆ ಸರಿದುಹೋಗುವ ಅಪಾಯ ಉಂಟಾಗಿದೆ. ಯಾವುದೂ ಜೀವಂತ ಸತ್ವವಾಗಿರದ ಸನ್ನಿವೇಶದಲ್ಲಿ ಬರಹಗಾರರು ಸ್ಥಾಪಿಸಬಹುದಾಗಿರುವ ಮೌಲ್ಯದ ಬಗ್ಗೆ ಅವರಲ್ಲಿಯೇ ದ್ವಂದ್ವ ಶುರುವಾಗಿದೆ"[೧] ಎಂದು ಸಮಕಾಲೀನ ಕಾವ್ಯದ ರಚನೆಯ ಹಿಂದಿರುವ ತಾತ್ವಿಕ ಜಿಜ್ಞಾಸೆಯನ್ನು ಇವರು ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

ಇವರ ಚರ್ಚೆ ಕಾವ್ಯಕೇಂದ್ರವನ್ನು ದಾಟಿ ಕವಿ, ವಿಮರ್ಶಕ, ಸಹೃದಯ ಈ ಮೂರು ಕೊಂಡಿಗಳ ಅಂತರ್‌ಸಂಬಂಧಗಳನ್ನು ಕುರಿತು ಯೋಚಿಸುತ್ತಲೇ ಮಾಧ್ಯಮಗಳು, ಮಾರುಕಟ್ಟೆ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಬದಲಾವಣೆಯ ಗಾಳಿ ಸಮಕಾಲೀನ ಕವಿ ಮತ್ತು ಕಾವ್ಯದ ಮೇಲೆ ಯಾವ ರೀತಿ ಪ್ರಭಾವ ಬೀರುತ್ತಿದೆ ಎಂಬ ಅಂಶಗಳ ಬಗ್ಗೆಯೂ ಬೆಳಕು ಚೆಲ್ಲಿದೆ.

ನಟರಾಜ್ ಹುಳಿಯಾರ್ ಅವರು 'ದಲಿತ ಕಾವ್ಯದ ಹೊಸ ತಲೆಮಾರು' ಎಂಬ ಲೇಖನದಲ್ಲಿ ಇತ್ತೀಚಿನ ದಲಿತ ಕಾವ್ಯದ ದಿಕ್ಕು ದಿಸೆಗಳನ್ನು ಕುರಿತು ಚಿಂತಿಸುತ್ತ, ೭೦ರ ದಶಕದ ಸಂದರ್ಭದ ದಲಿತ ಕವಿಗಳಿಗೆ ಅಂಬೇಡ್ಕರ್ ಮೇಲಿದ್ದ ಅಪಾರ ಪ್ರೀತಿ ಮತ್ತು ಗಾಂಧೀಜಿ ಬಗೆಗಿನ ತಿರಸ್ಕಾರ ಭಾವನೆಗಳು ಇತ್ತೀಚೆಗೆ ಬೆಸೆಯಲ್ಪಟ್ಟಿವೆ ಎಂಬ ಅಂಶವನ್ನು ಗುರುತಿಸಿದ್ದಾರೆ. ಜೊತೆಗೆ "ಮೂರು ದಶಕಕ್ಕಿಂತಲೂ ಹೆಚ್ಚು ಕಾಲ ಹರಿದಿರುವ ದಲಿತ ಕಾವ್ಯದಲ್ಲಿ ಮಹಿಳಾ ದನಿಗಳು ತೀರಾ ಕಡಿಮೆ ಎಂಬ ಅಂಶ ಏಕಕಾಲಕ್ಕೆ ಸ್ತ್ರೀವಾದಿ ಚಿಂತನೆ ಹಾಗೂ ದಲಿತ ಚಿಂತನೆಗಳೆರಡೂ ದಲಿತ ಮಹಿಳೆಯರನ್ನು ದೊಡ್ಡ ಮಟ್ಟದಲ್ಲಿ ಮುಟ್ಟಲು ಆಗದಿರುವ ಕೊರತೆಯನ್ನು ಎತ್ತಿ ಹೇಳುತ್ತದೆ"[೨] ಎಂದಿದ್ದಾರೆ.

ಜನಪದ ಲಯ ಹಾಗೂ ವಸ್ತುಗಳನ್ನು ಸಮಕಾಲೀನ ಅಥವಾ ಇತ್ತೀಚಿನ ಕವಿಗಳು ಕಾವ್ಯದಲ್ಲಿ ಪ್ರಯೋಗಿಸಿರುವ ರೀತಿ 'ಅಂಬೇಡ್ಕರ್ ರೂಪಿಸಿಕೊಟ್ಟ ನವಬೌದ್ಧಮಾರ್ಗ' ಮತ್ತು ವಿಸ್ಮೃತಿಗೆ ಒಳಗಾಗಿದ್ದ ದಲಿತ ಪುರಾಣ, ಆಚರಣಾಪರಂಪರೆಗಳನ್ನು ಮರುಹುಡುಕಾಟ ಮಾಡುತ್ತಿರುವ ಬಗೆಗಳನ್ನು ಸೂಚ್ಯವಾಗಿ ಈ ಲೇಖನದಲ್ಲಿ ಗುರುತಿಸಲಾಗಿದೆ.

ಆಧುನಿಕ ಕನ್ನಡದ ಪ್ರಮುಖ ಕವಿಗಳ ಕಾವ್ಯದಲ್ಲಿ ಕಂಡುಬರುವ ಭಾಷಿಕ ಪ್ರಯೋಗಗಳು ಹಾಗೂ ಅವರದೇ ಆದ ಕಾವ್ಯಭಾಷೆಯ ವಿಭಿನ್ನ ಸ್ವರೂಪವನ್ನು ಗುರುತಿಸುವ ಹಾಗೆ ಸಮಕಾಲೀನ ಅಥವಾ ಇತ್ತೀಚಿನ ಕವಿಗಳ ಭಾಷಿಕ ಪ್ರಯೋಗಗಳು ಮತ್ತು ಕಾವ್ಯಭಾಷೆಯನ್ನು ಹೋಲಿಕೆ ಮಾಡಿ ನೋಡಿದರೆ ಸೊರಗಿದಂತೆ ಕಾಣುತ್ತದೆ. ಜೊತೆಗೆ 'ದಲಿತ ಕಾವ್ಯ' ಎಂಬ ಸಿದ್ಧಮಾದರಿಗಳಾಚೆ ನಿಂತು ಕಾವ್ಯಕೃಷಿ ಮಾಡುತ್ತಿರುವ ಇತ್ತೀಚಿನ ದಲಿತ ಕಾವ್ಯ ಒಟ್ಟು ಕನ್ನಡ ಕಾವ್ಯದ ಕೇಂದ್ರಪ್ರಜ್ಞೆಯಲ್ಲಿ ಬೆಸೆದುಕೊಳ್ಳುವ ಹವಣಿಕೆಯಲ್ಲಿರುವಂತೆ ತೋರುತ್ತದೆ ಎಂಬ ಅಭಿಪ್ರಾಯವನ್ನು ನಟರಾಜ್ ಹುಳಿಯಾರ್ ವ್ಯಕ್ತಪಡಿಸಿದ್ದಾರೆ.

'ಕನ್ನಡ ಸಾಹಿತ್ಯದ ಇತ್ತೀಚಿನ ಒಲವುಗಳು' ಎಂಬ ಲೇಖನದಲ್ಲಿ ರಂಗನಾಥ ಕಂಟನಕುಂಟೆ ಅವರು ಒಟ್ಟಾರೆ ಕನ್ನಡ ಸಾಹಿತ್ಯದ ಇತ್ತೀಚಿನ ಬೆಳವಣಿಗೆಗಳನ್ನು ಕುರಿತು ಚಿಂತಿಸಿರುವುದನ್ನು ಕಾಣಬಹುದು. ಜೊತೆಗೆ ಸಾಹಿತ್ಯರಚನೆಯ ಹಿಂದಿನ ತೊಡಕಿನ ಬಗ್ಗೆ ಇಲ್ಲಿ ಹೆಚ್ಚು ಬೆಳಕು ಚೆಲ್ಲಲಾಗಿದೆ. ಇವರು ಮುಖ್ಯವಾಗಿ ಚರ್ಚಿಸಿರುವ ಅಂಶವೆಂದರೆ ಇತ್ತೀಚಿನ ಕನ್ನಡ ಸಾಹಿತ್ಯ ಯಾವುದೇ ಬಗೆಯ ಸೈದ್ಧಾಂತಿಕ ಗೊತ್ತು ಗುರಿ ಇಲ್ಲದೆ ಸೃಷ್ಟಿಯಾಗುತ್ತಿರುವುದರಿಂದ ಒಂದು

ಖಚಿತವಾದಆಯಾಮ ಅಥವಾ ರೂಪವನ್ನು ವ್ಯಕ್ತಪಡಿಸಲು ಸಾಧ್ಯವಾಗಿಲ್ಲ ಎಂದು ತಮ್ಮ ಲೇಖನದಲ್ಲಿ ಚರ್ಚಿಸಿದ್ದಾರೆ.

ಜೊತೆಗೆ ಇಂದಿನ ಸಾಹಿತ್ಯದಲ್ಲಿ ಗಟ್ಟಿತನವಿಲ್ಲ, ಕಾವ್ಯ ತನ್ನ ಮೂಲ ಗೇಯತೆಯನ್ನು ಕಳೆದುಕೊಂಡು ಗದ್ಯವಾಗುವುದರತ್ತ ಸಾಗಿದೆ ಎಂದು ಹೇಳಿದ್ದಾರೆ. "ಜಾಗತೀಕರಣದ ಪ್ರಭಾವದಿಂದ ಮಾನವೀಯತೆಗೆ ಧಕ್ಕೆಯುಂಟಾಗಿದೆ. ಇದರಿಂದ ಮನುಷ್ಯ ಸಂಬಂಧಗಳು ವಿಭಜಿಸಲ್ಪಡುತ್ತಿವೆ. ಅಷ್ಟೇ ಅಲ್ಲ, 'ಜಮೀನ್ದಾರಿ ವ್ಯವಸ್ಥೆಯ ದೊರೆಯನ್ನು ಬೆತ್ತಲಾಗಿಸಿದಂತೆ ಬಂಡವಾಳಶಾಹಿ 'ದೊರೆ'ಯನ್ನು ನಮ್ಮ ಸಾಹಿತ್ಯ ಇನ್ನೂ ಬೆತ್ತಲಾಗಿಸಿಲ್ಲ. ಇದು ಈಚಿನ ಕನ್ನಡ ಸಾಹಿತ್ಯಕ್ಕೆ ಇನ್ನೂ ಸರಿಯಾಗಿ ಗ್ರಹಿಸಲು ಸಾಧ್ಯವಾಗಿಲ್ಲವೆನಿಸುತ್ತದೆ'"[೨] ಎಂದು ಚರ್ಚಿಸುತ್ತ ಯಾವುದೇ ನಿರ್ದಿಷ್ಟ ಸಾಹಿತ್ಯ ಕೃತಿ ಮತ್ತು ಸಾಹಿತ್ಯ ಪ್ರಕಾರಗಳ ಬಗ್ಗೆ ಉದಾಹರಣೆಯೊಂದಿಗೆ ಚರ್ಚಿಸದೆ ಸಾಹಿತ್ಯ ರಚನೆಯ ಹಿಂದಿನ ಧೋರಣೆಗಳನ್ನಷ್ಟೇ ರಂಗನಾಥ ಕಂಟನಕುಂಟೆ ಅವರು ಪ್ರಸ್ತುತ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ.

ಓ.ಎಲ್. ನಾಗಭೂಷಣಸ್ವಾಮಿ ಅವರು 'ಕಡಲಿನಂತೆ ಕವಿತೆ, ದಿನವೂ ಹೊಸತು' ಎಂಬ ಲೇಖನದಲ್ಲಿ 'ಸಮಕಾಲೀನ ಸಾಹಿತ್ಯ ಎಂದರೆ ಕೊನೆಯ ಪಕ್ಷ ಇಪ್ಪತ್ತೈದು ವರ್ಷಗಳಷ್ಟು ಹಳೆಯ ಕಾಲಮಾನದ ಪ್ರತಿನಿಧಿಯೇ ಆಗಿರುತ್ತದೆ' ಎಂದು ಹೇಳಿದ್ದಾರೆ. ಲೇಖಕರ ಬಾಲ್ಯದ, ಹದಿಹರೆಯದ ಅನುಭವಗಳೇ ಸಾಹಿತ್ಯದಲ್ಲಿ ಒಡಮೂಡಿದರೂ ಅವು ಆಯಾ ಲೇಖಕರ ಸಮಕಾಲೀನ ಬದುಕಿನ ಚಿತ್ರಣಗಳೇ ಅಥವಾ ಸಮಕಾಲೀನ ಬದುಕಿಗೆ ಹತ್ತಿರದ ಅನುಭವಗಳಾಗಿರುವುದರಿಂದ ಹಾಗೆ ಬರೆಯುವ ಲೇಖಕರ ಬರವಣಿಗೆಗಳು ಸಮಕಾಲೀನತೆಯಿಂದ ಕೂಡಿರುತ್ತವೆ ಎಂದು ಓ.ಎಲ್. ನಾಗಭೂಷಣಸ್ವಾಮಿ ಹೇಳಿದ್ದಾರೆ. ಕಾವ್ಯದ ಬಗೆಗಿನ ಚರ್ಚೆಗಳು ಉತ್ಸಾಹ ಹುಟ್ಟಿಸುವುದಿಲ್ಲ. ಪರಂಪರೆಯ ಅರಿವು ಕವಿ ಮತ್ತು ಓದುಗರಿಗೆ ಬೇಕೋ? ಬೇಡವೋ? ಎಂಬ ಮೂಲಭೂತ ಪ್ರಶ್ನೆ ಇಂದು ಸಾಹಿತ್ಯವಲಯದಲ್ಲಿ ಮನೆ ಮಾಡಿದೆ ಎಂಬ ನಿಲುವು ಓ.ಎಲ್. ನಾಗಭೂಷಣಸ್ವಾಮಿ ಅವರದು.

"ಇತ್ತೀಚೆಗೆ ಬರುತ್ತಿರುವ ಕವನಗಳೆಲ್ಲವೂ ಒಂದೇ ಥರ ಕಾಣುತ್ತವೆ, ಯಾವ ಕವನವೂ ನೆನಪಿನಲ್ಲಿ ಉಳಿಯುವುದಿಲ್ಲ. ಕನ್ನಡ ಕಾವ್ಯಜಗತ್ತು ಕಾಮನಬಿಲ್ಲಿನ ಹಾಗೆ ಆಕರ್ಷಕವಾಗಿದೆ ಎಂದೆನಿಸಿದರೂ ಕವಿಗಳ ಸಾಮಾಜಿಕ, ಆರ್ಥಿಕ ಹಿನ್ನೆಲೆಯ ದೃಷ್ಟಿಯಿಂದ ಈ ಮಾತು ಸರಿ. ಆದರೆ ಕಾವ್ಯರಚನೆಗೆ ಬೇಕಾದ ಕಸುಬುದಾರಿಕೆ, ತಾಳ್ಮೆ, ಬದುಕನ್ನು ಹೊಸದಾಗಿ ಕಂಡು ಕಾಣಿಸುವ ಬಯಕೆ, ಕನ್ನಡ ಕಾವ್ಯಭಾಷೆಯ ಹಲವು ಬಗೆಗಳು ಪರಿಣತ ಓದುಗ ಬಯಸುವಷ್ಟು ಪ್ರಮಾಣದಲ್ಲಿ ತೃಪ್ತಿಕರವಾಗಿಲ್ಲ"[೩] ಎಂದು ಓ.ಎಲ್. ನಾಗಭೂಷಣಸ್ವಾಮಿ ಅವರು ಸಮಕಾಲೀನ ಕನ್ನಡ ಕಾವ್ಯದ ಬಗ್ಗೆ ನಿರಾಶದಾಯಕ ನಿಲುವನ್ನು ತಾಳಿದ್ದಾರೆ. ಇಲ್ಲಿ ಓದುಗರ ದೃಷ್ಟಿಕೋನ ಬದಲಾಗಿಲ್ಲವೋ ಅಥವಾ ಬರೆಯುವವರ ದೃಷ್ಟಿಕೋನದ ಸಮಸ್ಯೆಯೋ ಎಂದು ಬಿಡಿಸಿ ಹೇಳುವುದು ಕಷ್ಟದ ಕೆಲಸ ಎಂಬುದು ಅವರ ಅಭಿಪ್ರಾಯವಾಗಿದೆ.

‘ಹೊಸ ಶತಮಾನದ ಮೊದಲ ವರ್ಷದ ಸಾಹಿತ್ಯದ ಸುಗ್ಗಿ’ ಎಂಬ ಲೇಖನದಲ್ಲಿ ಮಲ್ಲಿಕಾ ಘಂಟಿ ಅವರು ೨೦ನೆಯ ಶತಮಾನದ ಕೊನೆಯ ಮತ್ತು ೨೧ನೆಯ ಶತಮಾನದ ಮೊದಲ ದಶಕದ ಆರಂಭದ ಸಾಹಿತ್ಯದ ಒಟ್ಟು ಬೆಳವಣಿಗೆಯ ಪರಿಚಯವನ್ನು ನೀಡಿದ್ದಾರೆ. ಸಾಹಿತ್ಯದ ಎಲ್ಲಾ ಪ್ರಕಾರಗಳ ಸಮಗ್ರ ಪರಿಚಯವನ್ನು ಮಾಡಿಕೊಟ್ಟಿರುವ ಕಾರಣದಿಂದ ಕಾವ್ಯ ಪ್ರಕಾರದ ಬೆಳವಣಿಗೆ ಬಗ್ಗೆ ಹೆಚ್ಚು ಆಳವಾಗಿ ವಿವೇಚನೆ ಮಾಡಲಾಗಿಲ್ಲ. ಆದರೂ ಆ ಒಂದು ಸೀಮಿತ ಸಂದರ್ಭದಲ್ಲಿ ಪ್ರಕಟವಾಗಿರುವ ಕಾವ್ಯಸಂಕಲನಗಳ ಬಗೆಗಿನ ವಿವೇಚನೆಯನ್ನು ಇಲ್ಲಿ ಕಾಣಬಹುದು.

ಹಳೆಯ ಮತ್ತು ಹೊಸ ತಲೆಮಾರಿನ ಕವಿಗಳು ಕಾವ್ಯವನ್ನು ಶ್ರದ್ಧೆ ಮತ್ತು ಮಹತ್ವಾಕಾಂಕ್ಷೆಯಿಂದ ರಚಿಸುತ್ತಿರುವುದು ಆಶಾದಾಯಕ ಬೆಳವಣಿಗೆ ಎನ್ನುವ ಇವರು, ಕಾವ್ಯಕ್ಕೆ ಓದುಗರಿಲ್ಲ ಹಾಗೂ ಕವನಸಂಕಲನಗಳು ಹೆಚ್ಚು ಮಾರಾಟವಾಗುವುದಿಲ್ಲ ಎಂಬ ನಿರಾಶಾದಾಯಕ ಮಾತನ್ನು ಒಪ್ಪುವುದಿಲ್ಲ. ಪುಸ್ತಕೋದ್ಯಮದಲ್ಲಿ ಸಾಹಿತ್ಯದ ಎಲ್ಲಾ ಪ್ರಕಾರಗಳಿಗಿಂತ ಅತಿ ಹೆಚ್ಚು ಪುಸ್ತಕಗಳು ಮುದ್ರಣಗೊಳ್ಳುವುದು ಕವನಗಳೇ ಎಂಬುದು ಇವರ ನಿಲುವು.

ಮಲ್ಲಿಕಾ ಘಂಟಿ ಅವರು ೧೯೯೦ರ ನಂತರ ಮತ್ತು ೨೦೧೧ರ ನಡುವೆ ಈ ಸಂದರ್ಭದಲ್ಲಿ ಹೊರಬಂದ ಕವನಗಳ ಸಂಪಾದಿತ ಕೃತಿಗಳ ಲೋಪ-ದೋಷಗಳನ್ನು ಈ ಲೇಖನದಲ್ಲಿ ಗುರುತಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯು ಎಚ್.ಎಸ್. ವೆಂಕಟೇಶಮೂರ್ತಿ ಅವರ ಸಂಪಾದಕತ್ವದಲ್ಲಿ ಹೊರತಂದ ‘ಶತಮಾನದ ಕಾವ್ಯ’ ಸಂಕಲನವು ಸಾಮಾಜಿಕ ನ್ಯಾಯದ ಪ್ರಶ್ನೆಯನ್ನು ಗಾಳಿಗೆ ತೂರಿದೆ. ಅಷ್ಟೇ ಅಲ್ಲ; ಈ ಸಂಕಲಿತ ಕೃತಿಯಲ್ಲಿ ಬರಗೂರು ರಾಮಚಂದ್ರಪ್ಪ, ಶಾಂತರಸ ಹಾಗೂ ದಲಿತ-ಬಂಡಾಯ ಸಂದರ್ಭದ ಪ್ರಮುಖ ಕವಿಗಳು ಸೇರಿಲ್ಲ ಎಂದು ‘ಶತಮಾನದ ಕಾವ್ಯ’ ಸಂಕಲನದ ಮಿತಿಗಳನ್ನು ಇಲ್ಲಿ ಗುರುತಿಸಿದ್ದಾರೆ.

‘ದಕ್ಷಿಣ ಕನ್ನಡದ ಶತಮಾನದ ಕಾವ್ಯ’ ಎಂಬ ಸಂಪಾದಿತ ಕೃತಿಯು ಕೂಡ ಇಂಥ ಮಿತಿಗೊಳಪಟ್ಟಿದೆ ಎಂಬುದು ಮಲ್ಲಿಕಾ ಘಂಟಿಯವರ ಅಭಿಪ್ರಾಯ. ಅಂದರೆ ಒಂದು ಜಿಲ್ಲೆಯ ಕವಿಗಳು ರಚಿಸಿದ ಕಾವ್ಯವೆಂದು ಆಯ್ಕೆ ಮಾಡಿಕೊಳ್ಳುವಾಗ ಮೂಲತಃ ಅದೇ ಜಿಲ್ಲೆಯವರಾಗಿರಬೇಕೊ? ಅಥವಾ ಬೇರೆ ಬೇರೆ ಕಾರಣಗಳಿಂದ ಆ ಜಿಲ್ಲೆಯಲ್ಲಿ ವಾಸವಿರುವ ಕವಿಗಳು ರಚಿಸಿದ ಕಾವ್ಯವಾಗಿರಬೇಕೊ? ಎಂದು ವ್ಯಾಪ್ತಿಗೆ ಸಂಬಂಧಿಸಿದ ಮೂಲಭೂತ ಪ್ರಶ್ನೆಯನ್ನು ಎತ್ತಿದ್ದಾರೆ. ಇದೇ ಸಂದರ್ಭದಲ್ಲಿ ಪ್ರಕಟವಾಗಿರುವ ಬರಗೂರು ರಾಮಚಂದ್ರಪ್ಪ ಅವರ ‘ಕಾಂಟೆಸ್ಸಾದಲ್ಲಿ ಕಾವ್ಯ’, ಅಲ್ಲಮಪ್ರಭು ಬೆಟ್ಟದೂರು ಅವರ ‘ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು’, ಸತೀಶ ಕುಲಕರ್ಣಿ ಅವರ ‘ಗಾಂಧಿಗಿಡ’, ‘ಕಣ್ಣ ಮುಂದಿನ ಬೆಳಕು’ ದಸ್ತಗೀರಸಾಬ್ ದಿನ್ನಿ ಅವರ ಕವನಗಳು, ಸಮತೀಂದ್ರ ನಾಡಿಗರ ‘ಪಂಚಭೂತಗಳು’,

ಸೋಮಶೇಖರ ಇಮ್ರಾಪುರ ಅವರ 'ಜಲತರಂಗ' ಇನ್ನೂ ಮುಂತಾದ ಕವನ ಸಂಕಲನಗಳ ಬಗ್ಗೆ ಇಲ್ಲಿ ವಿವೇಚಿಸಿದ್ದಾರೆ.

"ಮಹಿಳಾ ಕಾವ್ಯದ ಸಂದರ್ಭದಲ್ಲಿ ಈ ತಲೆಮಾರಿನ ದೈತ್ಯಶಕ್ತಿಯಾಗಿ ಪ್ರತಿಭಾ ನಂದಕುಮಾರ್ ಕಂಡುಬರುತ್ತಾರೆ. ಅವರ 'ಆಹಾ ಪುರುಷಾಕಾರಂ' ಕೃತಿ ಸ್ತ್ರೀಯಾತ್ಮಕತೆಗೆ ಭಾಷ್ಯ ಬರೆದ ಮೂವತ್ತೊಂಬತ್ತು ಪದ್ಯಗಳನ್ನು ಒಳಗೊಂಡಿದೆ. ಪುರುಷಪ್ರಧಾನ ಸಮಾಜ ಮತ್ತು ವ್ಯಕ್ತಿಯ ಅಹಮಿಕೆ ಬೆಚ್ಚಿ ಬೀಳುವಂತೆ, ಕರಗಿ ಸೋರಿ ಹೋಗುವಂತೆ ಪ್ರಶ್ನಿಸುತ್ತಾರೆ. ಪರ್ಯಾಯ ಸ್ತ್ರೀ ಬದುಕಿನ ಸಾಧ್ಯತೆಯ ಕಡೆಗೂ ನಡೆಯುವ ಧೀಮಂತಿಕೆ ಧ್ವನಿ ಇಲ್ಲಿಯ ಕವನಗಳಲ್ಲಿದೆ"[೫] ಎನ್ನುವ ಮಲ್ಲಿಕಾ ಘಂಟಿಯವರು ಕೆ. ಷರೀಫಾ ಅವರ 'ಪಾಂಚಾಲಿ' ಮತ್ತು 'ಮುಮ್ತಾಜಳ ಮಹಲು', ರೂಪಾ ಹಾಸನ ಅವರ 'ಒಂದಿಷ್ಟು ಹಸಿಮಣ್ಣು, ಗೀತಾ ಹೆಗಡೆಯವರ 'ಅಕ್ಷರ ಚೈತನ್ಯ' ಮುಂತಾದ ಕವನಸಂಕಲನಗಳ ಬಗ್ಗೆ ಈ ಲೇಖನದಲ್ಲಿ ಚರ್ಚಿಸಿದ್ದಾರೆ.

ಬರಗೂರು ರಾಮಚಂದ್ರಪ್ಪ ಅವರು 'ಹೊರಳುದಾರಿಯಲ್ಲಿ ಕನ್ನಡ ಸಾಹಿತ್ಯ' ಎಂಬ ಲೇಖನದಲ್ಲಿ ಇತ್ತೀಚಿನ ಕನ್ನಡ ಸಾಹಿತ್ಯದ ದಿಕ್ಕು-ದಿಸೆಗಳು ವಿಸ್ತರಣೆಗೊಂಡಿರುವ ಅನೇಕ ಕುರುಹುಗಳು ನಮಗೆ ಗೋಚರಿಸುತ್ತವೆ ಎಂದಿದ್ದಾರೆ. ಈ ಲೇಖನದ ಮುಖೇನ ಅವರು ಹಲವು ತಾತ್ವಿಕ ಪ್ರಶ್ನೆಗಳನ್ನು ಎತ್ತಿರುವುದು ಗಮನಾರ್ಹ. ಭಾರತದ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಚರಿತ್ರೆಯಲ್ಲಿ ಜಾಗತೀಕರಣಕ್ಕೆ ಬುನಾದಿ ಹಾಕಿದ 'ಗ್ಯಾಟ್ ಒಪ್ಪಂದ' ಹಾಗೂ ಖಾಸಗೀಕರಣ, ಉದಾರೀಕರಣ ಪ್ರಕ್ರಿಯೆಗಳು ನಮ್ಮ 'ಗ್ರಾಮಭಾರತ'ದ ಮೇಲೆ ತೀವ್ರ ಪರಿಣಾಮವನ್ನು ಉಂಟುಮಾಡಿದವು. ಇದರಿಂದ ಭಾರತವು ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಹೊಸ ಬಗೆಯ ಗುಲಾಮತನವನ್ನು ಅನುಭವಿಸುವಂತಾಯಿತು ಎಂಬುದು ಇವರ ನಿಲುವು.

ಅಂದರೆ ೧೯೯೨ರ ಸಂದರ್ಭದಲ್ಲಿ ಭಾರತದ ಪ್ರಧಾನ ಮಂತ್ರಿಯಾಗಿದ್ದ ಪಿ.ವಿ. ನರಸಿಂಹರಾವ್ ಮತ್ತು ಹಣಕಾಸು ಮಂತ್ರಿಯಾಗಿದ್ದ ಮನಮೋಹನಸಿಂಗ್ ಅವರ ಕೃಪೆಯಿಂದ ಭಾರತಕ್ಕೆ ಪ್ರವೇಶವಾದ ಜಾಗತೀಕರಣ ಹಾಗೂ ಅಟಲ್‌ಬಿಹಾರಿ ವಾಜಪೇಯಿ ಅವರು ಜಾರಿಗೆ ತಂದ 'ಗ್ಯಾಟ್ ಒಪ್ಪಂದ'ಗಳು ನವವಸಾಹತುಶಾಹಿ ಸಂದರ್ಭದಲ್ಲಿ ಸೃಷ್ಟಿಯಾಗುತ್ತಿರುವ ಸಾಹಿತ್ಯ-ಸಂಸ್ಕೃತಿ ಚಿಂತನೆಯ ಮೇಲೆ ಅನೇಕ ಪ್ರಭಾವಗಳನ್ನು ಬೀರಿದವು.

"ಇಪ್ಪತ್ತನೆಯ ಶತಮಾನದಲ್ಲಿದ್ದ ಸಾಮಾಜಿಕ ವಿವೇಕದ ಜಾಗವನ್ನು ಆರ್ಥಿಕ ಅವಿವೇಕ ಆವರಿಸಿಕೊಂಡಿದೆ. ಇಪ್ಪತ್ತನೆಯ ಶತಮಾನದ ಕೋಮು ಸೌಹಾರ್ದದ ಜಾಗದಲ್ಲಿ ಕೋಮು ಸಂಘರ್ಷ ಆವರಿಸಿಕೊಂಡಿದೆ. ಮಾನವೀಯತೆಯ ಜಾಗವನ್ನು ಮತೀಯತೆ ಆವರಿಸಿಕೊಂಡಿದೆ. ಸಾಮಾಜಿಕತೆಯ ಜಾಗವನ್ನು ವೈಯಕ್ತಿಕತೆ ಆವರಿಸಿಕೊಳ್ಳುತ್ತಿದೆ. ಸಂವೇದನೆಯ ಜಾಗವನ್ನು ಸಂಪಾದನೆ ಆವರಿಸಿಕೊಂಡಿದೆ. ಇಪ್ಪತ್ತರಿಂದ ಇಪ್ಪತ್ತೊಂದರ ಶತಮಾನದ ಈ ಸ್ಥಿತ್ಯಂತರದ

ಹೊತ್ತಿಗೆ ಇಷ್ಟು ಬದಲಾವಣೆಗಳಾಗಿರುವುದನ್ನು ಕಾಣಬಹುದು".[೬] ಇಲ್ಲಿನ ಮಾತುಗಳು ಸಮಕಾಲೀನ ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ವಲಯಗಳಲ್ಲಿನ ವಿಪ್ಲವಗಳನ್ನು ಸೂಚಿಸುತ್ತವೆ. ಇವೇ ಮುಂತಾದ ಅಂಶಗಳು ಇತ್ತೀಚಿನ ಚಿಂತನಾವಲಯ ಮತ್ತು ಆಲೋಚನಾ ವಿಧಾನಗಳನ್ನು ದಿಕ್ಕೆಡಿಸಿವೆ.

ಸಿ.ಎನ್. ರಾಮಚಂದ್ರನ್ ಅವರು 'ಕನ್ನಡ ಸಾಹಿತ್ಯದ ಇತ್ತೀಚಿನ ಒಲವುಗಳು: ಮಾದರಿಗಳ ಪಲ್ಲಟ' ಎಂಬ ಲೇಖನದಲ್ಲಿ ಕನ್ನಡ ಸಾಹಿತ್ಯವು ೧೯೯೦ರ ದಶಕದಿಂದ ಈಚೆಗೆ ಹಲವು ಮಾರ್ಪಾಡುಗಳಿಗೆ ಒಳಗಾದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ಅವರು ಮುಖ್ಯವಾಗಿ ಈ ಸಂದರ್ಭದ ಸಾಹಿತ್ಯಕೃತಿಗಳ ಕೆಲವು ಪ್ರಮುಖ ಆಶಯಗಳು ಹಾಗೂ ಮಾದರಿಗಳಲ್ಲಾದ ಪಲ್ಲಟಗಳನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಕುರಿತು ವಿವೇಚಿಸುವ ಪ್ರಯತ್ನ ಮಾಡಿರುವುದರಿಂದ ಇದು ಪರಿಚಯಾತ್ಮಕವಾದ ಹೊಳಹುಗಳನ್ನಷ್ಟೇ ನೀಡುತ್ತದೆ. ಇತ್ತೀಚಿನ ಕನ್ನಡ ಸಾಹಿತ್ಯದ ಒಲವುಗಳನ್ನು ಅದರಲ್ಲೂ ಆಶಯ ಮತ್ತು ಮಾದರಿಗಳನ್ನು ಕುರಿತು ಚರ್ಚಿಸಿದ್ದರೂ ಅದು ವಿವರಣೆಗಳ ಹಂತಕ್ಕೆ ನಿಂತುಬಿಟ್ಟಿದೆ. ಆದರೂ ಸಮಕಾಲೀನ ಕನ್ನಡ ಸಾಹಿತ್ಯ ರಚನೆಯ ಬಗೆಗಿರುವ ಆತಂಕಗಳನ್ನು ಸರಳೀಕೃತ ತೀರ್ಮಾನಗಳು ಹಾಗೂ ಕನ್ನಡ ಭಾಷೆ ಮತ್ತು ಸಾಹಿತ್ಯದ ಬಗೆಗಿನ ಆತಂಕಗಳನ್ನು ಅಲ್ಲಗಳೆದು, ಮಹತ್ವಾಕಾಂಕ್ಷೆಯ ನಿಲುವನ್ನು ತಾಳುತ್ತಾರೆ. ಮುಂದುವರಿದು "...ಕಳೆದ ಒಂದೂವರೆ ದಶಕಗಳ ಕಾಲಾವಧಿಯನ್ನು ನೂತನ ಪ್ರಯೋಗಗಳ ಕಾಲ, ನೂತನ ವೈಚಾರಿಕತೆಯ ಕಾಲ ಮತ್ತು ಸಿದ್ಧಮಾದರಿಗಳನ್ನು ಸಿದ್ಧವೈಚಾರಿಕ ಚೌಕಟ್ಟುಗಳನ್ನು ಮೀರುವ ಕಾಲ"[೭] ಎಂದು ಇತ್ತೀಚಿನ ಸಾಹಿತ್ಯದ ಗುಣಲಕ್ಷಣಗಳ ಬಗ್ಗೆ ಹೇಳುವ ಮಾತನ್ನು ಸಂಪೂರ್ಣವಾಗಿ ಒಪ್ಪಲಾಗದು. ಎಲ್ಲಾ ಕಾಲವು ನೂತನ ಪ್ರಯೋಗಗಳಿಗೆ ಹಂಬಲಿಸುತ್ತ ಸಿದ್ಧಚೌಕಟ್ಟುಗಳನ್ನು ಮೀರುವ ತಹ ತಹ ಹೊಂದಿರುತ್ತವೆ ಎಂಬ ಮಾತನ್ನು ಇಲ್ಲಿ ನೆನಪಿಡಬೇಕು. ಸಿ.ಎನ್. ರಾಮಚಂದ್ರನ್ ಅವರು ಇತ್ತೀಚಿನ ಸಾಹಿತ್ಯದ ಒಲವುಗಳನ್ನು ಗುರುತಿಸುವಾಗ ಕಾವ್ಯದ ಆಶಯ ಮತ್ತು ಮಾದರಿಗಳನ್ನು ಮೂರು ಭಾಗಗಳಾಗಿ ವಿಭಾಗಿಸಿದ್ದಾರೆ.

೧. ಆದರ್ಶ ಸಾಮಾಜಿಕ ಶೋಧ

೨. ಅವ್ಯಕ್ತದ ಶೋಧ

೩. ಮಾದರಿಗಳ ಪಲ್ಲಟ

ಇದರಲ್ಲಿ ಮುಖ್ಯವಾಗಿ ಚಂದ್ರಶೇಖರ ಕಂಬಾರ, ಎಚ್.ಎಸ್. ಶಿವಪ್ರಕಾಶ, ವೀರಪ್ಪ ಮೊಯಿಲಿ, ಲತಾ ರಾಜಶೇಖರ, ಎಚ್.ಎಸ್. ವೆಂಕಟೇಶ್‌ಮೂರ್ತಿ, ಯು.ಆರ್. ಅನಂತಮೂರ್ತಿ, ಸಿದ್ಧಲಿಂಗಯ್ಯ, ಎಸ್.ಜಿ. ಸಿದ್ದರಾಮಯ್ಯ, ಅರವಿಂದ ಮಾಲಗತ್ತಿ, ಪ್ರತಿಭಾ ನಂದಕುಮಾರ್, ಸವಿತಾ ನಾಗಭೂಷಣ, ಎಚ್.ಎಲ್. ಪುಷ್ಪ ಇವರ ಕಾವ್ಯವನ್ನು ಪರಿಚಯದ ರೂಪದಲ್ಲಿ ವಿವರಿಸುತ್ತಾರೆ. ಇವರಲ್ಲಿ ಬಹುತೇಕರು ಹಿರಿಯ ಕವಿಗಳೇ ಆಗಿರುವುದು ವಿಶೇಷ. ಇವರಷ್ಟೇ

ಸತ್ವಶಾಲಿಯಾದ ಯುವಕವಿಗಳ ಕಾವ್ಯರಚನೆಯ ಬಗ್ಗೆ ರಾಮಚಂದ್ರನ್ ಅವರು ವಿಮರ್ಶೆ ಮಾಡುವುದಿರಲಿ, ಉಲ್ಲೇಖಗಳನ್ನು ಮಾಡದಿರುವುದು ಈ ಲೇಖನದ ದೊಡ್ಡ ಕೊರತೆಯಾಗಿದೆ. ಅಷ್ಟೇ ಅಲ್ಲ, ಇಲ್ಲಿ ಹೆಸರಿಸಿರುವ ಕವಿಗಳ ಹಿಂದಿನ ಕಾವ್ಯಕ್ಕೂ ಇತ್ತೀಚಿನ ಕಾವ್ಯದ ರಚನೆಗಳಿಗೂ ಇರುವ ನಡುವಿನ ವ್ಯತ್ಯಾಸಗಳನ್ನು ಗುರುತಿಸುವ ಪ್ರಯತ್ನ ಮಾಡಿರುವುದು ಕಡಿಮೆ. ಸಾಮಾನ್ಯವಾಗಿ ಹಿರಿಯ ಕವಿಗಳನ್ನು ಹೊಗಳುವ ರೂಢಿ ಇಲ್ಲಿಯೂ ಮುಂದುವರಿದಿದೆ.

'ಹೊಸಕಾವ್ಯ ಹೊರಗಣ ಒಳಗಾದ ಬಗೆ' ಎಂಬ ಲೇಖನದಲ್ಲಿ ಬಿ. ಪೀರ್‌ಬಾಷ ಅವರು ಹೊಸ ತಲೆಮಾರಿನ ಕಾವ್ಯದ ಗೊತ್ತು-ಗುರಿಗಳನ್ನು ಕುರಿತು ಚರ್ಚಿಸಿದ್ದಾರೆ. ಇತ್ತೀಚಿನ ಕವಿಗಳು ಕೋಮುವಾದ ಮತ್ತು ಜಾಗತೀಕರಣಕ್ಕೆ ಮುಖಾಮುಖಿಯಾಗುವ ಬಗೆಯನ್ನು ಕುರಿತು ಈ ಲೇಖನದಲ್ಲಿ ವಿವೇಚಿಸಿದ್ದಾರೆ. ಹೊಸ ಕಾವ್ಯವನ್ನು ಅರ್ಥೈಸಿಕೊಳ್ಳುವ ಬಗೆ ಹಾಗೂ ಖಚಿತ ಧೋರಣೆಗಳನ್ನು ಗುರುತಿಸುವಾಗ ಎದುರಾಗುವ ಸವಾಲು ಮತ್ತು ಸಾಧ್ಯತೆಗಳ ಬಗ್ಗೆ ಸೂಕ್ಷ್ಮ ಒಳನೋಟಗಳನ್ನು ನೀಡುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ.

"ವಸಾಹತುಶಾಹಿಗೆ ಮುಖಾಮುಖಿಯಾದ ರಾಷ್ಟ್ರೀಯವಾದಿ ನವೋದಯ ಕಾವ್ಯಕ್ಕಿಂತ, ನವ್ಯಕ್ಕಿಂತ, ಬಂಡಾಯಕ್ಕಿಂತ, ಭಿನ್ನವಾದ ಸಾಮ್ರಾಜ್ಯಶಾಹಿ ಸಾಂಸ್ಕೃತಿಕ ಜೋಡುಕಾಯದ ಮಾಯಾವಿತನ ಗೆಲ್ಲುವ ರೂಹಿಲ್ಲದ ಚೈತನ್ಯವನ್ನು ಕಟ್ಟಿಕೊಳ್ಳುವ ಅಗತ್ಯವನ್ನು ಈ ಹೊತ್ತಿನ ಕಾವ್ಯ ಮನಗಾಣಿಸುತ್ತದೆ."[೮] ಉದಾರ ಮಾನವತಾವಾದಿ ನೆಲೆಯ ಕಾವ್ಯದ ಸ್ವರೂಪವನ್ನು ಗುರುತಿಸುತ್ತಲೇ 'ಜಾಗತೀಕರಣವನ್ನು ಇಡಿಯಾಗಿ ಅರ್ಥೈಸಿಕೊಳ್ಳುವಲ್ಲಿ ಮತ್ತು ಪ್ರತಿಕ್ರಿಯಿಸುತ್ತಿರುವಲ್ಲಿ ಕನ್ನಡ ಕಾವ್ಯ ಇನ್ನೂ ತಡವರಿಸುತ್ತಿದೆ' ಎಂಬ ನಿಲುವನ್ನು ತಾಳುತ್ತಾರೆ.

ಮಹಿಳಾ ಕಾವ್ಯದಲ್ಲಿ ಚರಿತ್ರೆ ಮತ್ತು ಪುರಾಣಗಳೆಂಬ ಸಂಕಥನಗಳು ಹೇಗೆ ಮರುಸೃಷ್ಟಿಗೊಂಡಿವೆ ಎಂಬುದನ್ನು ರಾಮಲಿಂಗಪ್ಪ ಟಿ. ಬೇಗೂರು ಅವರು 'ಮಹಿಳೆ: ಚರಿತ್ರೆ–ಪುರಾಣ' ಎಂಬ ಕೃತಿಯಲ್ಲಿ ನಿರ್ವಚಿಸಿದ್ದಾರೆ. ಸಾಹಿತ್ಯಕೃತಿಗಳಲ್ಲಿ ಅಭಿವ್ಯಕ್ತಗೊಳ್ಳುವ ಚರಿತ್ರೆ ಮತ್ತು ಪುರಾಣಗಳ ಆಳದಲ್ಲಿಯೇ ಒಂದು 'ವರ್ಗಹಿತಾಸಕ್ತಿ' ಪ್ರಬಲವಾಗಿರುತ್ತದೆ ಎನ್ನುವ ಇವರು ಸ್ಥಾಪಿತಪುರಾಣ ಮತ್ತು ಚರಿತ್ರೆಗಳ ವಿರುದ್ಧ ಕಾವ್ಯದಲ್ಲಿ ಪ್ರತಿರೋಧ ವ್ಯಕ್ತಪಡಿಸಿರುವ ಹಲವು ಆಯಾಮಗಳನ್ನು ಗುರುತಿಸಿದ್ದಾರೆ.

ರಾಮಲಿಂಗಪ್ಪ ಟಿ. ಬೇಗೂರು ಅವರು 'ಹೊಸಗನ್ನಡ ಮಹಿಳಾ ಕಾವ್ಯ: ಪ್ರತಿರೋಧದ ನೆಲೆ' ಎಂಬ ಲೇಖನದಲ್ಲಿ ಹಿಂದಿನಿಂದಲೂ ಹೆಣ್ಣನ್ನು ಪುರುಷವ್ಯವಸ್ಥೆ ಕಂಡ ಬಗೆ ಮತ್ತು ಈಗ ಅವಳನ್ನು ಹೇಗೆ ನೋಡುತ್ತಿದೆ ಎಂಬುದರ ಬಗ್ಗೆ ಮಹಿಳಾಕಾವ್ಯ ದನಿ ಎತ್ತುತ್ತಲೇ ಬಂದಿದೆ ಎಂಬುದನ್ನು ಗುರುತಿಸುತ್ತಾರೆ. ಹೆಣ್ಣನ್ನು ಲಿಂಗ ಮತ್ತು ಅಧಿಕಾರ ರಾಜಕಾರಣದ ಕೈಗೊಂಬೆಯಾಗಿ ಕಾಣುತ್ತಿದೆ. ಇಂಥ ವಾಸ್ತವಗಳ ನಡುವೆ ಮಹಿಳಾಕಾವ್ಯ ತನ್ನ ಜವಾಬ್ದಾರಿಯನ್ನು ಹೇಗೆ ನಿರ್ವಹಿಸುತ್ತಿದೆ ಎಂದೂ ಮಹಿಳಾಕಾವ್ಯದಲ್ಲಿ ಶೋಧಿಸುವ ಪ್ರಯತ್ನ ಇಲ್ಲಿ ಮಾಡಿದ್ದಾರೆ.

"ಈಗಿನ ಮಹಿಳಾಕಾವ್ಯ ತನ್ನ ಹಕ್ಕನ್ನು ಮಂಡಿಸುವಾಗ ಕಟುವಾಗಿಯೇ ಕಾಣುತ್ತದೆ. ಖಂಡಿತಾ ಇದು ಹಕ್ಕೊತ್ತಾಯದ ಕಾವ್ಯ. ಶತಶತಮಾನದಿಂದ ದನಿಯೇ ಇಲ್ಲದ ಕೊರಳುಗಳು ಚಕ್ಕನೆ ದನ ಪಡೆದುಕೊಂಡಾಗ ಉಂಟಾಗುವ ಉತ್ಸಾಹ, ರೋಷ, ಜೋರುದನಿ, ಕಟುತನ, ರಾನೆಸ್ ಎಲ್ಲವನ್ನೂ ಈ ಕಾವ್ಯ ಒಳಗೊಂಡಿದೆ. ಸಮಾಜದಲ್ಲಿ ತನ್ನ ಹಕ್ಕುಗಳಿಗಾಗಿ ದನಿಯೆತ್ತುವ ಜೊತೆ ಜೊತೆಗೇ ಇಡೀ ಗಂಡು ಕುಲವನ್ನೇ(ಅಮೂರ್ತವಾದ) ಕಟಕಟೆಯಲ್ಲಿ ನಿಲ್ಲಿಸಿ ಕೊರಳಪಟ್ಟಿ ಹಿಡಿದು ಪ್ರಶ್ನೆ ಕೇಳುವ ಹಾಗೆ ಈ ಕಾವ್ಯ ಬರೆಯಲ್ಪಟ್ಟಿದೆ. ಹೀಗೆ ಪ್ರಶ್ನಿಸುವಾಗ ನ್ಯಾಯ ಕೇಳುವ, ದಂಡಿಸುವ, ನಿಂದಿಸುವ, ದಾಳಿ ಮಾಡುವ ಧಾಟಿಗಳೆಲ್ಲ ಈ ಒಕ್ಕೊರಳಿನ ದನಿಗೆ ಒದಗಿದೆ."[೯]

ಮಹಿಳಾಕಾವ್ಯದಲ್ಲಿ ವ್ಯಕ್ತವಾಗಿರುವ ಪ್ರತಿರೋಧದ ನೆಲೆಗಳ ವಿವಿಧ ಆಯಾಮಗಳನ್ನು ಪ್ರಾತಿನಿಧಿಕ ಕವಿತೆಗಳನ್ನಾಧರಿಸಿ ಈ ಲೇಖನದಲ್ಲಿ ವಿವೇಚಿಸಿದ್ದಾರೆ. ಜೊತೆಗೆ ಮಹಿಳಾಕಾವ್ಯ ತನ್ನ ಪರಂಪರೆಯನ್ನು ನಿರ್ವಚಿಸಿಕೊಂಡಿರುವ  ಬಗೆಯನ್ನು ಸಹ ಶೋಧಿಸಿದ್ದಾರೆ.

"ಆಧುನಿಕ ಮಹಿಳಾ ಕಾವ್ಯದ ಪ್ರಕಾರ ಪರಂಪರೆ ಎಂದರೆ ಹೆಣ್ಣಿನ ಶೋಷಣೆಯ ಗತ. ಚರಿತ್ರೆಯೆಂದರೆ ಹೆಣ್ಣು ಗಂಡುಗಳ ಅಸಮಾನ ಸಂಬಂಧಗಳ ಭೂತ. ಪರಂಪರೆಯೆಂದರೆ ನಿತ್ಯ ನಿರಂತರವಾಗಿ ಗಂಡು ಸಮುದಾಯ ಹೆಣ್ಣು ಸಮುದಾಯವನ್ನು ದಬ್ಬಾಳಿಕೆಯಿಂದ ಎರಡನೆ ದರ್ಜೆಯ ಜೀವಿಯನ್ನಾಗಿ ನಡೆಸಿಕೊಂಡು ಬಂದ ಕಥನ. ವರ್ತಮಾನವನ್ನು ಪುರಾಣೀಕರಣ ಮಾಡುತ್ತಾ; ಪವಿತ್ರೀಕರಣ ಮಾಡುತ್ತಾ; ಆ ಮೂಲಕ ಪುರಾಣ-ಚರಿತ್ರೆಗಳನ್ನೆ ಸ್ಥಿರೀಕರಿಸುತ್ತಾ; ಲಿಂಗ ನೆಲೆಯ ಅಸಮಾನ ಸ್ಥಿತಿಯಲ್ಲಿಡುತ್ತ ಬಂದದ್ದೆ ಚರಿತ್ರೆ. ಹೆಣ್ಣು ಮತ್ತು ಗಂಡುಗಳ ಅಸಮಾನ ಚರಿತ್ರೆಯೆ ನಮ್ಮ ಪರಂಪರೆಯಾಗಿದೆ. ಈಗ ಹೆಣ್ಣು ಇರುವ ಸ್ಥಿತಿಯಲ್ಲೆ ಇರಬೇಕು ಎಂದು ಸಾಹಿತ್ಯಕಥನಗಳು ಸಂಸ್ಕೃತಿಕಥನಗಳು ಹೆಣ್ಣನ್ನು ನಿರಂತರ ನಂಬಿಸುತ್ತ ಬಂದಿವೆ ಎಂದು ಆಧುನಿಕ ಮಹಿಳಾಕಾವ್ಯ ಬಲವಾಗಿ ಪ್ರತಿಪಾದಿಸುತ್ತದೆ."[೧೦]

ಹೀಗೆ ಗಂಡು-ಹೆಣ್ಣಿನ ನಡುವೆ ಇರುವ ಅಸಮಾನ ಧೋರಣೆ  ಪರಂಪರೆಯ ಉದ್ದಕ್ಕೂ ಯಾವ ಯಾವ ಬಗೆಗಳಲ್ಲಿ ಮುಂದುವರಿದುಕೊಂಡು ಬಂದಿದೆ ಎಂಬುದು ಈ ಲೇಖನದಲ್ಲಿ ಸೂಚ್ಯವಾಗಿ ಗಮನಿಸಬಹುದು. ಜೊತೆಗೆ ಸದ್ಯದ ವರ್ತಮಾನದಲ್ಲಿ ಹೆಣ್ಣು-ಗಂಡಿನ ಸಂಬಂಧಗಳ ಸ್ವರೂಪವನ್ನು ಸಹ ಪುನರ್ ಮೌಲ್ಯೀಕರಿಸಲಾಗಿದೆ.

ಎಲ್. ಹನುಮಂತಯ್ಯ ಅವರು 'ಕನ್ನಡ ಸಾಹಿತ್ಯದ ಮುಂದಿನ ಹೆಜ್ಜೆಗಳು-ಒಂದು ಚಿಂತನ' ಎಂಬ ಲೇಖನದಲ್ಲಿ ಕನ್ನಡ ಸಾಹಿತ್ಯದ ಮುಂದಿನ ಸವಾಲು ಮತ್ತು ಸಾಧ್ಯತೆಗಳ ಬಗ್ಗೆ ಚರ್ಚಿಸಿದ್ದಾರೆ. 'ರಕ್ತ ಒಸರುವ ಹೃದಯಗಳಿಗೆ ಮಾನವೀಯ ಸಾಂತ್ವನ ಹೇಳುವ ಕೃತಿಗಳ ಅಗತ್ಯವಿದೆ' ಎನ್ನುವ ಎಲ್. ಹನುಮಂತಯ್ಯ ಅವರು ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಹಾಗೂ ಕೋಮು ಸಂಘರ್ಷಗಳು ಮುಂದೆ ತಂದೊಡ್ಡಬಹುದಾದ ಅಪಾಯದ ಬಗ್ಗೆ ಇಲ್ಲಿ ವಿವೇಚಿಸಿದ್ದಾರೆ. ಜೊತೆಗೆ ಸಮಕಾಲೀನ ಸಾಹಿತ್ಯದ ಮುಂದಿನ ನಡೆಯ ಬಗ್ಗೆ ಇಲ್ಲಿ ಸೂಚ್ಯವಾಗಿ ಹೇಳಿದ್ದಾರೆ.

"ಸಮಕಾಲೀನ ಕನ್ನಡ ಸಾಹಿತ್ಯದ ಮೂಲಗುಣ ನೆಲಮೂಲ ಸಂಸ್ಕೃತಿ. ಇದು ಜಾಗತೀಕರಣದ ನಡುವೆಯೂ ಅನಾಥವಾಗಿ ಅನಾಮಧೇಯವಾಗಿ ಉಳಿದಿರುವ ಅನೇಕ ಜನಾಂಗಗಳ ಬದುಕನ್ನು ಅನಾವರಣ ಮಾಡುತ್ತಿದೆ. ತಮ್ಮ ಪೂರ್ವಜರ ಬದುಕಿನ ದಾಖಲೆ ಮಾಡುತ್ತಲೇ ಮುಂದಿನ ದಿನಗಳಲ್ಲಿ ನಮ್ಮ ಜವಾಬ್ದಾರಿಯೇನು ಎಂಬುದನ್ನು ಸಮಕಾಲೀನ ಸಾಹಿತ್ಯ ಚರ್ಚಿಸುತ್ತದೆ; ದಾಖಲಿಸುತ್ತಿದೆ. ದಲಿತ-ಬಂಡಾಯ ಸಾಹಿತ್ಯ ಎರಡು ದಶಕಗಳ ಹಿಂದಿನ ತೀವ್ರತೆಯನ್ನು ಪ್ರದರ್ಶಿಸುತ್ತಿಲ್ಲವೆಂದು ಹೇಳಲಾಗುತ್ತಿದೆ. ಇದು ನಿಜವಾದ ಸಂಗತಿ. ಯಾವುದೇ ಸಾಹಿತ್ಯ ಚಳುವಳಿ ತನ್ನ ಪ್ರಾರಂಭದಿಂದ ಕೊನೆಯವರೆಗೆ ಒಂದೇ ರೀತಿಯ ಮೌಲ್ಯಗಳನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಒಂದು ವೇಳೆ ಸಮಾನ ಹಿತಾಸಕ್ತಿಗಳನ್ನು ಕಾಯುವ ಕೆಲಸವನ್ನು ಸಾಹಿತ್ಯ ಮಾಡಿದರೆ ಅದು ಜನರ ಹೃದಯಗಳಿಗೆ ಸ್ಪಂದಿಸುವ ಸಾಹಿತ್ಯವಾಗಲಾರದು. ನಿಂತ ನೀರಾಗದೆ, ಜಡ ಮೌಲ್ಯಗಳ ಪ್ರತಿನಿಧಿಯಾಗದೆ, ವಂದಿಮಾಗಧರ ದನಿಯಾಗದೆ ಇರುವ ಸಾಹಿತ್ಯವೇ ಜೀವಂತವಾದದ್ದು. ಕಾಲಕಾಲಕ್ಕೆ ಬದಲಾಗುವ ಮೌಲ್ಯಗಳಿಗೆ ಪ್ರತಿಸ್ಪಂದನೆ ಮಾಡಿ, ಆ ವಿಚಾರಗಳ ಜೊತೆ ಸಂವಾದ ಮಾಡುವ ಮೂಲಕ ಹೊಸದಾರಿ, ಹೊಸ ಹೊಳುಹುಗಳನ್ನು ಕಂಡುಕೊಳ್ಳುವುದೇ ನಿಜವಾದ ಅರ್ಥದಲ್ಲಿ ಸಮಕಾಲೀನ ಸಾಹಿತ್ಯ."[೧೧]

ಅಂದರೆ ಸಮಕಾಲೀನ ಸಾಹಿತ್ಯವೆಂದರೆ ಕಾಲದ ದೃಷ್ಟಿಯಿಂದ ಇತ್ತೀಚಿನದ್ದು ಎಂಬುದಷ್ಟೇ ಅಲ್ಲ; ಸಾರ್ವಕಾಲಿಕ ಸಂವೇದನೆಗಳಿಂದ ಕೂಡಿದ ಸಾಹಿತ್ಯ ಎಂಬರ್ಥದಲ್ಲಿ ಈ ಲೇಖನದಲ್ಲಿ ವಿವೇಚಿಸಲಾಗಿದೆ. ಮಾಹಿತಿ ತಂತ್ರಜ್ಞಾನ, ಆಧುನಿಕ ಚಿಂತನೆಗೆ ಮುಖ ಮಾಡುತ್ತಿರುವ ಸಂದರ್ಭಗಳಲ್ಲಿಯೇ ಧರ್ಮ ಮತ್ತು ಜಾತಿಗಳು ಇನ್ನಷ್ಟು ಆಳಕ್ಕೆ ಬೇರೂರುತ್ತಿರುವ ಅಪಾಯವೂ ನಮ್ಮ ಮುಂದಿದೆ. ಇಂಥ ಅಪಾಯಗಳಿಂದ ಪಾರಾಗುವ ಮಾರ್ಗಗಳನ್ನು ಸಹ ಬರಹಗಾರರು ಮತ್ತು ಓದುಗರು ಮಾಡಬೇಕು ಎಂದು ಈ ಲೇಖನದಲ್ಲಿ ವಿವೇಚಿಸಿದ್ದಾರೆ. ಸಾಹಿತ್ಯರಚನೆಯ ಸಂದರ್ಭದಲ್ಲಿ ಎದುರಾಗುವ ಸೃಜನಶೀಲ ಬಿಕ್ಕಟ್ಟುಗಳ ಬಗ್ಗೆ ಇಲ್ಲಿ ಒತ್ತುಕೊಟ್ಟಿರುವ ಕಾರಣಕ್ಕೆ ಕಾವ್ಯದ ರಚನಾವಿನ್ಯಾಸಗಳ ಬಗೆಗಾಗಲಿ, ಕಾವ್ಯದ ಸ್ವರೂಪ ಮತ್ತು ಧೋರಣೆಗಳ ಬಗೆಗಾಗಲಿ ಹೆಚ್ಚು ಚರ್ಚಿಸಲು ಇಲ್ಲಿ ಸಾಧ್ಯವಾಗಿಲ್ಲ.

ರಾಜಶೇಖರ ಹತಗುಂದಿ ಅವರು 'ಕನ್ನಡ ದಲಿತ ಕಾವ್ಯ: ಇತ್ತೀಚಿನ ಒಲವು' ಎಂಬ ಲೇಖನದಲ್ಲಿ ದಲಿತ ಕಾವ್ಯದ ಇತ್ತೀಚಿನ ಚಹರೆಗಳ ಬಗ್ಗೆ ವಿವೇಚಿಸಿದ್ದಾರೆ. ಕನ್ನಡ ಕಾವ್ಯಪರಂಪರೆಯಲ್ಲಿ ದಲಿತ ಚಿತ್ರಣವನ್ನು ಪಂಪ ಮತ್ತು ವಚನಕಾರರಿಂದ ಹಿಡಿದು ಇಲ್ಲಿಯವರೆಗೆ ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ದಲಿತ ಕಾವ್ಯದ ಇತ್ತೀಚಿನ ಮಾದರಿಗಳಲ್ಲಿ ಹೊಸ ಹುಡುಕಾಟವಿದೆ; ಆದರೆ ಈ ಹೊತ್ತಿನ ದಲಿತ ಕವಿಗಳ ತಾತ್ವಿಕ ನೆಲೆ ಒಂದು ನಿರ್ದಿಷ್ಟ ಸಿದ್ಧಾಂತ ಮತ್ತು ಚೌಕಟ್ಟಿಗೆ ಸೀಮಿತವಾಗಿಲ್ಲ.

ಬಹುಮುಖಿ ಆಯಾಮಗಳಲ್ಲಿ ತನ್ನ ನೆಲೆಗಳನ್ನು ವಿಸ್ತರಿಸಿಕೊಳ್ಳುತ್ತಿದೆ ಎಂಬುದು ಇವರ ಅಭಿಪ್ರಾಯ.

"ಕನ್ನಡ ದಲಿತ ಕಾವ್ಯದ ಇತ್ತೀಚಿನ ತಲೆಮಾರು ಒಟ್ಟು ಕನ್ನಡ ಕಾವ್ಯದ ನಡಿಗೆಗೇ 'ಮಾದರಿ' ಎನಿಸುವಂತಿದೆ. ಹೊಸತಲೆಮಾರಿನ ದಲಿತ ಕವಿಗಳು ಸಿದ್ಧಲಿಂಗಯ್ಯನವರು ಸೇರಿದಂತೆ ಕನ್ನಡ ಕಾವ್ಯದೊಂದಿಗೆ ಸೃಜನಶೀಲ ಅನುಸಂಧಾನ ನಡೆಸುತ್ತಾ ಅತ್ಯುತ್ತಮ ಕಾವ್ಯಕೃಷಿಯಲ್ಲಿ ನಿರತರಾಗಿದ್ದಾರೆ. ಹೊಸತಲೆಮಾರಿನ ದಲಿತ ಕಾವ್ಯ ಗಾಢ ವಿಷಾದ, ಮರುಕ ಹಾಗೂ ಸ್ವ-ವಿಮರ್ಶೆಯನ್ನು ಒಡಲೊಳಗಿಟ್ಟುಕೊಂಡು ಮುನ್ನಡೆಯುತ್ತಿದೆ. ಕಳೆದ ಒಂದೂವರೆ ದಶಕಗಳಿಂದೀಚೆಗೆ ಬರೆಯುತ್ತಿರುವ ದಲಿತ ಕವಿಗಳು ಅತ್ಯತ್ತಮ ಕಾವ್ಯ ಮಾತ್ರ ರಚಿಸುತ್ತಿಲ್ಲ, ಶೋಷಕ ಸಮುದಾಯಗಳ ಅಂತರಂಗಕ್ಕೆ ಲಗ್ಗೆಯಿಟ್ಟು ಅಲ್ಲೊಂದು ಪುಟ್ಟ ಹಣತೆ ಬೆಳಗುವಂತೆ ಮಾಡುತ್ತಿದ್ದಾರೆ. ಹೌದು ಅದು ನಿಶ್ಚಿತವಾಗಿ ಬುದ್ಧಬೆಳಕು, ಹೊಸತಲೆಮಾರಿನ ದಲಿತ ಕವಿಗಳು ಬುದ್ಧ, ಬಸವ, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಅಷ್ಟು ಮಾತ್ರವಲ್ಲ, ಭಾರತೀಯ ಅನಭಾವಿ ಪರಂಪರೆಯಿಂದಲೂ ಪ್ರಭಾವಿತರಾಗಿ ಕಾವ್ಯ ರಚಿಸುತ್ತಿದ್ದಾರೆ. ಹಾಗಾಗಿಯೇ ಇವರ ಕಾವ್ಯಕ್ಕೆ 'ತಾಯ್ತನದ' ಗುಣ ದಕ್ಕಿದೆ. ಸಿಟ್ಟು ಆಕ್ರೋಶದ ಜಾಗದಲ್ಲಿ ಮಾನವೀಯ ಅಂತಃಕರಣ ಕ್ರೀಯಾಶೀಲವಾಗಿದೆ."[೨]

ಮುಖ್ಯವಾಗಿ ಹೊಸ ತಲೆಮಾರಿನ ದಲಿತ ಕವಿಗಳು ವಾಚಾಳಿ ಮಾದರಿಯಿಂದ ಬಿಡುಗಡೆ ಪಡೆದು ವಿಷಾದ, ಸಂಕಟಗಳನ್ನು ಕಾವ್ಯವಾಗಿಸುತ್ತ ತಾಜಾ ಅನುಭವದ್ರವ್ಯಗಳನ್ನು ಕವಿತೆಯಲ್ಲಿ ಕಟ್ಟಿಕೊಡುತ್ತಿದ್ದಾರೆ ಎಂಬುದು ರಾಜಶೇಖರ ಹತಗುಂದಿ ಅವರ ನಿಲುವು.

ಆರ್. ಸುಧೀಂದ್ರ ಕುಮಾರ್ ಅವರು '೨೧ನೇ ಶತಮಾನದ ಕನ್ನಡ ಕಾವ್ಯ: ಒಂದು ಪಕ್ಷಿನೋಟ' ಎಂಬ ಕಿರು ಪುಸ್ತಿಕೆಯಲ್ಲಿ ೨೦೦೦ದಿಂದ ಇತ್ತೀಚೆಗೆ ಬರೆಯುತ್ತಿರುವ ಕವಿಗಳ ಕೆಲವು ಕವಿತೆಗಳನ್ನು ಪರಿಚಯಿಸಿದ್ದಾರೆ. ಹಾಗೆಯೇ ಇತ್ತೀಚಿನ(೨೦೦೧ರಿಂದ ಈಚೆಗೆ) ಕನ್ನಡ ಕಾವ್ಯದ ಅಭಿವ್ಯಕ್ತಿ ವಿನ್ಯಾಸವನ್ನು ಮೂರು ರೀತಿಯಲ್ಲಿ ವಿಭಾಗಿಸಿದ್ದಾರೆ.

೧. ಸಮುದಾಯಸ್ಮೃತಿ ಸಂಬಂಧಿತ ಕಾವ್ಯ
೨. ಆಧುನಿಕ ಜೀವಲಯದ ನಿರೂಪವಾಗಿ ಕಾವ್ಯ
೩. ಸ್ತ್ರೀ ಸಂವೇದನೆಯ ಆಯಾಮವಾಗಿ ಕಾವ್ಯ

೨೧ನೇ ಶತಮಾನದ ಕನ್ನಡ ಕಾವ್ಯದ ಬಗ್ಗೆ ನಿರಾಶದಾಯಕ ಅಭಿಪ್ರಾಯವುಳ್ಳ ಇವರು ಇತ್ತೀಚೆಗೆ ಪ್ರಕಟವಾಗುವ ಬಹುಪಾಲು ಕವನಸಂಕಲನಗಳು ಜೊಳ್ಳಾಗಿವೆ ಎನ್ನುತ್ತಾರೆ. ಇದರ ಹೊರತಾಗಿಯೂ ಕೆಲವು ಕವಿಗಳ ತಲಾ ಒಂದೆರಡು ಕವಿತೆಗಳನ್ನು ಪರಿಚಯಿಸಿದ್ದಾರೆ.

ದಸ್ತಗೀರಸಾಬ್ ದಿನ್ನಿ ಅವರು ಸಮಕಾಲೀನ ಸಮಾಜ ಮತ್ತು ಸಾಹಿತ್ಯ ಬಿಕ್ಕಟ್ಟುಗಳು ಕನ್ನಡದ ಯುವಕವಿಗಳನ್ನು ಯಾವ ಬಗೆಯಲ್ಲಿ ಪ್ರಭಾವಿಸುತ್ತಿದೆ ಎಂಬ ವಿಚಾರಗಳನ್ನು ಈ ಲೇಖನದಲ್ಲಿ ಕ್ವಚಿತ್ತಾಗಿ ಪರಿಚಯಾತ್ಮಕವಾಗಿ ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಪ್ರಭುತ್ವ ಮತ್ತು ಕಾರ್ಪೋರೇಟ್ ವಲಯಗಳು ಸಾಮಾನ್ಯ ಜನರ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಮೂಲಕ ಅವರ ಬದುಕಿನ ಮೇಲೆ ಸವಾರಿ ಮಾಡುವ ಅಮಾನವೀಯ ಕ್ರೌರ್ಯವನ್ನು ಇತ್ತೀಚಿನ ಕವಿ ಪ್ರತಿರೋಧಿಸಬೇಕಿದೆ ಎಂಬುದು ಇವರ ಅಪೇಕ್ಷೆ. ವ್ಯಕ್ತಿ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಹರಣದಿಂದ ಉಂಟಾಗುವ ದುಷ್ಪರಿಣಾಮಗಳ ಬಗೆಗೆ ಇತ್ತೀಚಿನ ಸಾಹಿತ್ಯ ದನಿ ಎತ್ತಬೇಕಾಗಿದೆ. ಅನ್ನ, ನೀರು ನಮ್ಮ ಮೂಲಭೂತ ಸಮಸ್ಯೆಗಳಾಗಿರುವ ಈ ಹೊತ್ತಿನಲ್ಲಿ ವರ್ತಮಾನದ ಸಮಸ್ಯೆಗಳಿಗೆ ಕವಿಮನಸ್ಸು ಸ್ಪಂದಿಸಬೇಕಿದೆ ಎಂಬುದು ಇವರ ನಿಲುವು. ಇದರಿಂದ ಯುವಕವಿಗಳ ಕಾವ್ಯರಚನೆ ಸಶಕ್ತವಾಗಿದೆ; ಅಷ್ಟೇ ಅಲ್ಲ, ಆಶಾದಾಯಕವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಇಂದಿನ ಕಾವ್ಯ ನಮ್ಮ ನಡುವಿನ ಸಾಮಾಜಿಕ ಕ್ರೌರ್ಯಗಳಿಗೆ ದನಿಯಾಗುತ್ತಿದೆ ಎಂದಿದ್ದಾರೆ.

ರಾಜೇಂದ್ರ ಚೆನ್ನಿ ಅವರು 'ಸಮಕಾಲೀನ ದಲಿತ ಸಾಹಿತ್ಯ' ಎಂಬ ಲೇಖನದಲ್ಲಿ ದಲಿತ ಸಾಹಿತ್ಯದ ಹೊಸ ಸಾಧ್ಯತೆ ಮತ್ತು ಸವಾಲುಗಳ ಬಗ್ಗೆ ತುಂಬಾ ಸೂಕ್ಷ್ಮವಾಗಿ ಇಲ್ಲಿ ವಿವೇಚಿಸಿದ್ದಾರೆ. ಮುಖ್ಯವಾಗಿ 'ದಲಿತ ಬರಹ' ಎನ್ನುವ ವಿರೋದಾತ್ಮಕ ಚೌಕಟ್ಟನ್ನು ಸಂಪೂರ್ಣವಾಗಿ ನಿರಾಕರಿಸಲ್ಪಡುತ್ತಿರುವ ದಲಿತ ಸಾಹಿತ್ಯ ಪ್ರಧಾನಧಾರೆಯ ಸಾಹಿತ್ಯವನ್ನು ಆತ್ಮವಿಮರ್ಶೆಗೆ ಒಳಗು ಮಾಡುತ್ತಿದೆ. ಅಂದರೆ "...ದಲಿತ ಸಾಹಿತ್ಯದ ಬೆಳವಣಿಗೆಯು ಇಲ್ಲಿಯವರೆಗಿನ ಮುಖ್ಯವಾಹಿನಿಯ ಅಸ್ತಿತ್ವವನ್ನು ಅತ್ಯಮತ ಭಿನ್ನವಾಗಿ ಗ್ರಹಿಸುವಂತೆ ಒತ್ತಾಯಿಸುತ್ತದೆ. ಅದನ್ನು ಪಲ್ಲಟ ಮಾಡುವಷ್ಟು ಸಶಕ್ತವಾದ ಪರ್ಯಾಯಗಳನ್ನು ಮುಂದಿಡುತ್ತದೆ."[೧೩] ದಲಿತ ಸಾಹಿತ್ಯ ಪ್ರಧಾನಧಾರೆಯಾಗಿ ರೂಪುಗೊಳ್ಳುತ್ತಿದೆ. ದಲಿತ ಸಾಹಿತ್ಯದ ರಚನೆಗಳು ಅಪ್ಪರಮಟ್ಟಿಗೆ ಸತ್ವಶಾಲಿಯಾಗುತ್ತ, ಸೂಕ್ಷ್ಮ ಮತ್ತು ಸಂವೇದನಾಶೀಲ ಗುಣವನ್ನು ಪಡೆದುಕೊಳ್ಳುತ್ತಿದೆ ಎಂಬುದು ರಾಜೇಂದ್ರ ಚೆನ್ನಿ ಅವರ ಅಭಿಪ್ರಾಯ. ಅತ್ಯಂತ ಗಂಭೀರ ಮತ್ತು ಸೂಕ್ಷ್ಮವಾದ ಆತ್ಮಶೋಧನೆಯಿಂದ ತನ್ನ ಕೇರಿಯ ಬದುಕಿನ ನೋವು, ಸಂಟಗಳನ್ನು ವೈಭವೀಕರಿಸದೆ ಸಹಜವಾಗಿ ಯುವ ದಲಿತ ಬರಹಗಾರರು ಸಾಹಿತ್ಯ ರಚನೆ ಮಾಡುತ್ತಿದ್ದಾರೆ ಎಂಬುದು ಇವರ ನಿಲುವು.

ಆಳವಾದ ದುಗುಡ ಮತ್ತು ಆತ್ಮಶೋಧನೆಯ ಹೊರತಾಗಿಯೂ ದಲಿತ ಕವಿಗಳಿಗೆ ಅನೇಕ ಸವಾಲುಗಳಿವೆ ಎಂಬುದು ರಾಜೇಂದ್ರ ಚೆನ್ನಿ ಅವರ ಅಭಿಪ್ರಾಯ. ಇದನ್ನು ಈ ಮಾತುಗಳು ಇನ್ನಷ್ಟು ಸ್ಪಷ್ಟಪಡಿಸುತ್ತವೆ. "ನನ್ನೆದುರಿನ ಯುವ ದಲಿತ ತಲೆಮಾರಿಗೆ ಹಲವಾರು ಶತಮಾನಗಳನ್ನು ಜೀವನದ ಮೊದಲ ೩೦ ವರ್ಷಗಳಲ್ಲಿಯೇ ಬದುಕಬೇಕಾದ ಸವಾಲಿದೆ. ಒಂದು ಕಡೆಗೆ ಆಧುನಿಕ ಜಗತ್ತಿನಲ್ಲಿ ಅವರ ಪಯಣವು ಕೇರಿಯಿಂದ ಕ್ಯಾಲಿಫೋರ್ನಿಯದವರೆಗೆ ಆಗುವ ಸಾಧ್ಯತೆಗಳಿವೆ. ಆದರೆ ಅದೇ ಹೊತ್ತಿಗೆ ಬೆಂಗಳೂರಿನಲ್ಲಿದ್ದು ಒಂದಿಷ್ಟು ಆಧುನಿಕನಾಗಿ ವಾಪಸ್ಸು ಕೇರಿಗೆ ಮರಳಲಾಗದ ಸಂಕಟವೂ ಇದೆ. ಏಕೆಂದರೆ ಅಲ್ಲಿ ಶತಮಾನಗಳ ಚರಿತ್ರೆಯುಳ್ಳ ಅಸಮಾನತೆ, ಜಾತಿಕೇಂದ್ರಿತ ಹಿಂಸೆ ಏನೂ ಬದಲಾಗಿಲ್ಲ. ಪ್ರಯಶಃ ರಾಜಕೀಯದ ಅನೈತಿಕ ಬೆಂಬಲದಿಂದ ಇನ್ನೂ ಅಮಾನುಷವಾಗಿದೆ."[೧೪]

ಇಂಥ ಸಂಕೀರ್ಣ ಮತ್ತು ಸಂದಿಗ್ಧ ಸಂದರ್ಭದಲ್ಲಿ ದಲಿತ ಬರಹಗಾರ ಇಡೀ ಜನಸಮುದಾಯದ ಪ್ರತಿನಿಧಿಯಾಗಬೇಕಾದ ಎಚ್ಚರವೂ ಇದೆ. ಇಂಥ ಹಲವು ಪ್ರಶ್ನೆಗಳು ಈ ಲೇಖನದಲ್ಲಿ ಚರ್ಚೆಗೆ ಒಳಗಾಗಿವೆ.

ಎನ್.ಕೆ. ಹನುಮಂತಯ್ಯ ಅವರು 'ಸಮಕಾಲೀನ ದಲಿತ ಸಾಹಿತ್ಯ: ಸಾದ್ಯತೆ ಮತ್ತು ಸವಾಲುಗಳು' ಎಂಬ ಲೇಖನದಲ್ಲಿ ಇದೇ ಬಗೆಯ ಆತ್ಮಶೋಧನೆಯ ನೆಲೆಗಳನ್ನು ಶೋಧಿಸಿರುವ ಬಗೆಯನ್ನು ರಾಜೇಂದ್ರ ಚೆನ್ನಿ ಅವರ ಮಾತುಗಳ ಜೊತೆಗಿಟ್ಟು ನೋಡಬಹುದು.

ಅನುಸೂಯ ಕಾಂಬಳೆ ಅವರು 'ಜಾಗತೀಕರಣ ಸಂದರ್ಭ: ಮಹಿಳಾ ಸಾಹಿತ್ಯದ ಹೊಸ ಹೆಜ್ಜೆಗಳು' ಎಂಬ ಲೇಖನದಲ್ಲಿ ಜಾಗತೀಕರಣದ ಹಿಂದಿರುವ ಹುನ್ನಾರಗಳು ನಮ್ಮ ಸಮಾಜದ ಮೇಲೆ ಯಾವ ರೀತಿಯ ಬಿಕ್ಕಟ್ಟುಗಳನ್ನು ತಂದೊಡ್ಡಿದೆಯೋ ಅದೇ ಬಗೆಯ ಸಂಕೀರ್ಣ ಬಿಕ್ಕಟ್ಟುಗಳು ಸಾಹಿತ್ಯ ಸಂಸ್ಕೃತಿಯ ಚಿಂತನೆಯಲ್ಲೂ ಅಂತರ್ಗತವಾಗಿವೆ ಎಂಬುದನ್ನು ಚರ್ಚಿಸಿದ್ದಾರೆ. ಮಾರುಕಟ್ಟೆಯಾಧಾರಿತ ಸಮಾಜದಲ್ಲಿ ಮಹಿಳೆಯರ ಬದುಕಿನ ಸ್ಥಿತಿಗತಿಗಳು ಇನ್ನೂ ಶೋಚನೀಯವಾಗಿದೆ.

ಪ್ರಭುತ್ವ ಮತ್ತು ಮಾಧ್ಯಮಗಳ ಧೋರಣೆಗಳು ರಾಜಕೀಯ ಮತ್ತು ಆರ್ಥಿಕ ಮತ್ತು ಸಾಮಾಜಿಕ ಸಂರಚನೆಯಲ್ಲಿ ಉಂಟುಮಾಡುತ್ತಿರುವ ಪಲ್ಲಟಗಳಷ್ಟೇ ಆಗಿಲ್ಲ; ಬದಲಾಗಿ ನಮ್ಮ ಇಡೀ ಜನಜೀವನದ ಮೇಲೆ ಎರಗುತ್ತಿರುವ ದಾಳಿಯಾಗಿ ಕಾಣಿಸುತ್ತಿದೆ ಎಂಬುದು ಅನುಸೂಯ ಕಾಂಬಳೆ ಅವರ ಅಭಿಪ್ರಾಯ.

"ಜಾಗತೀಕರಣದ ಹೊಸ ಸಂಕಟಗಳಾದ ಮಾರುಕಟ್ಟೆ ಸರಕು ಮತ್ತು ಸೇವೆ ಮಧ್ಯಮವರ್ಗದ ಕುಟುಂಬದ ಮಹಿಳೆಯನ್ನೇ ಕೇಂದ್ರ ಬಿಂದುವಾಗಿಸಿದೆ. ಅದನ್ನೇ ಆಧರಿಸಿದ ಆರ್ಥಿಕ ಯೋಜನೆಗಳು ರೂಪುಗೊಳ್ಳುತ್ತಿವೆ. ಗ್ರಾಹಕರ ಪಾಡು ವಿಲಾಸಿಜೀವನ ಕ್ರಮವಾದರೆ ಸರಕು-ಸೇವೆಗೆ ತೆರೆದುಕೊಂಡ ಮಹಿಳೆಯ ಸಮಸ್ಯೆ ಹಸಿವಿನ ಮೂಲದ್ದು. ಬಡಮಹಿಳೆಯ ದೇಹದ ಒಂದೊಂದು ಅಂಗಗಳು ಯಂತ್ರದ ಬಿಡಿ ಭಾಗಗಳಂತೆ ಮಾರಾಟಕ್ಕಿವೆ. ಉತ್ಪಾದಕ ಮಾರಾಟ ಕಂಪೆನಿಗಳಲ್ಲಿ ಯಂತ್ರದಂತೆ ದುಡಿಯುತ್ತಿರುವ ಮಹಿಳೆಯರು ಅನಾರೋಗ್ಯ, ಮಕ್ಕಳ ಶಿಕ್ಷಣ, ಮದುವೆ ಮುಂತಾದ ಕಾರಣಗಳಿಗಾಗಿ ತಮ್ಮ ದೇಹದ ಅಂಗಾಂಗಗಳನ್ನೇ ಬಾಡಿಗೆಗೆ ನೀಡುತ್ತಿದ್ದಾರೆ. ಈ ಬಾಡಿಗೆ ತಾಯ್ತನ ಅನ್ನುವುದು ಕೂಡ ಜಾಗತೀಕರಣದ ಉಪ-ಉತ್ಪನ್ನವೇ ಆಗಿ ಶೋಷಿಸುತ್ತದೆ; ಹಾಗಾಗಿ ಅದು ಅನಿವಾರ್ಯಗಳನ್ನು ಸೃಷ್ಟಿಸುತ್ತದೆ."[೧೫]

ವಿವಿಧ ಕಾರ್ಮಿಕ ವಲಯಗಳಲ್ಲಿ ದುಡಿಯುತ್ತಿರುವ ಮಹಿಳೆಯರು ಹಲವು ಬಗೆಯ ಶೋಷಣೆ, ಅವಮಾನಗಳನ್ನು ಅನುಭವಿಸುತ್ತಿದ್ದಾರೆ. ಇಂಥ ಅನುಭವಗಳನ್ನು ಮಹಿಳಾಕಾವ್ಯ ಕಟ್ಟಿಕೊಡುವ ಪ್ರಯತ್ನ ಮಾಡಿದೆ. ಹೆಣ್ಣಿನ ದೇಹ ಮತ್ತು ಮನಸ್ಸಿನ ಮೇಲೆ ಪುರುಷಕೇಂದ್ರಿತ ಸಮಾಜವು ನಡೆಸುವ ಹಲವು ಬಗೆಯ ಆಕ್ರಮಣಗಳನ್ನು ಮಹಿಳಾಕಾವ್ಯ ಪ್ರತಿರೋಧಿಸುತ್ತಿದೆ.

ನಗರಕೇಂದ್ರಿತ ಕಾರ್ಮಿಕವಲಯದ ಮಹಿಳೆಯರ ಸ್ಥಿತಿಗತಿಗಳನ್ನು, ತಾಜಾ ಅನುಭವಗಳನ್ನು ಸಶಕ್ತವಾಗಿ ಕಟ್ಟಿಕೊಟ್ಟಂತೆ ಮಹಿಳೆಯರ ನೋವು ಸಂಕಟಗಳನ್ನು ಮಹಿಳಾಕಾವ್ಯ ಚಿತ್ರಿಸಲಾಗಲಿಲ್ಲ ಎಂಬ ಮಾತನ್ನು ಇಲ್ಲಿ ನೆನೆಯಬಹುದು. ಇದು ಮಹಿಳಾಕಾವ್ಯದ ಮಿತಿಯೂ ಇರಬಹುದೇ ಎಂಬ ಪ್ರಶ್ನೆಯನ್ನೂ ಎದುರಾಗಿಸುತ್ತದೆ.

ಎಚ್.ಎಲ್ ಪುಷ್ಪ ಅವರು 'ಆಧುನಿಕ ಮಹಿಳಾಕಾವ್ಯದಲ್ಲಿ ಸ್ತ್ರೀವಾದ' ಎಂಬ ಲೇಖನದಲ್ಲಿ ಮಹಿಳಾಕಾವ್ಯದಲ್ಲಿ ವ್ಯಕ್ತವಾಗುವ ಸ್ತ್ರೀವಾದದ ಚಹರೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಬಂಡಾಯ ಸಾಹಿತ್ಯ ಚಳುವಳಿಯ ಸಂದರ್ಭದಿಂದಲೇ ಕನ್ನಡದ ಸ್ತ್ರೀವಾದವು ರೂಪುರೇಖೆಗಳನ್ನು ಗುರುತಿಸಬಹುದಾದರೂ 'ಸ್ತ್ರೀವಾದ'ದ ನಿರ್ದಿಷ್ಟ ಪರಿಕಲ್ಪನೆಯ ಅಡಿಯಲ್ಲಿ ಗುರುತಿಸಲ್ಪಡಲಿಲ್ಲ. ಎಂದು ಈ ಲೇಖನದಲ್ಲಿ ಹೇಳಿದ್ದಾರೆ. ಸ್ತ್ರೀವಾದಿ ದೃಷ್ಟಿಕೋನದ ಹಿನ್ನೆಲೆಯಲ್ಲಿ ಆಧುನಿಕ ಮಹಿಳಾ ಕಾವ್ಯವನ್ನು ಇಲ್ಲಿ ಪರಿಚಯಾತ್ಮಕವಾಗಿ ಚರ್ಚಿಸಿದ್ದಾರೆ.

ಟಿ.ಪಿ. ಅಶೋಕ ಅವರ 'ಕಾವ್ಯ ಪ್ರೀತಿ' ಎಂಬ ಕೃತಿ ಆಧುನಿಕ ಕನ್ನಡ ಕಾವ್ಯವನ್ನು ಆಧರಿಸಿದ ಲೇಖನಗಳ ಸಂಗ್ರಹ. ಇದರಲ್ಲಿ ಕುವೆಂಪು, ಪು.ತಿ.ನರಸಿಂಹಾಚಾರ್, ಕೆ.ಎಸ್.ನರಸಿಂಹಸ್ವಾಮಿ, ಗೋಪಾಲಕೃಷ್ಣ ಅಡಿಗ ಮುಂತಾದ ಕವಿಗಳ ಕವನಗಳನ್ನು ಒಳಗೊಂಡಂತೆ ಸಮಕಾಲೀನ ಸಂದರ್ಭದಲ್ಲಿ ಕಾವ್ಯ ರಚಿಸುತ್ತಿರುವ ಚಂದ್ರಶೇಖರ ಕಂಬಾರ, ಎಚ್.ಎಸ್ ಶಿವಪ್ರಕಾಶ್, ವೈದೇಹಿ, ಪ್ರತಿಭಾ ನಂದಕುಮಾರ್, ಮೂಡ್ನಾಕೂಡು ಚಿನ್ನಸ್ವಾಮಿ, ಸವಿತಾ ನಾಗಭೂಷಣ, ಎಸ್. ಮಂಜುನಾಥ್, ಜ್ಯೋತಿ ಗುರುಪ್ರಸಾದ್, ಆರೀಫ್‌ರಾಜಾ ಇನ್ನೂ ಮುಂತಾದವರ ಕವಿತೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ. 'ಪುಸ್ತಕ ವಿಮರ್ಶೆ'ಯ ಸ್ವರೂಪದಲ್ಲಿರುವ ಇಲ್ಲಿನ ಲೇಖನಗಳು ಕಾವ್ಯಾಸಕ್ತರಿಗೆ ಒಂದು ಪ್ರವೇಶಿಕೆಯನ್ನು ಒದಗಿಸಬಲ್ಲವು.

ಕೆ.ವಿ. ಅಕ್ಷರ ಅವರು ಸಂಕಲಿಸಿರುವ 'ಪದ್ಯದ ಮಾತು ಬೇರೆ' ಎಂಬ ಕೃತಿಯಲ್ಲಿ ಇತ್ತೀಚಿನ ಕೆಲವು ಕವಿತೆಗಳನ್ನು ಕುರಿತ ವಿಮರ್ಶಾತ್ಮಕ ಟಿಪ್ಪಣಿಗಳಿವೆ. ಕಳೆದ ಹದಿನೈದು ವರ್ಷಗಳಲ್ಲಿ ಪ್ರಕಟವಾದ ಕವಿತೆಗಳಲ್ಲಿ ಆಯ್ದ ಕೆಲವನ್ನು ಇಲ್ಲಿ ವಿವೇಚಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ–ನೋಡಬಾರದು ಚೀಲದೊಳಗನು, ಬಾಗ್ದಾದ್: ಒಂದು ಪ್ರಾರ್ಥನೆ, ಜಾತ್ರೆಯಲ್ಲಿ ಶಿವ, ಓ ನನ್ನ ಚೇತನ, ಜಪದ ಕಟ್ಟೆ, ಅಮ್ಮನ ಗುಡ್ಡ, ಲೈನ್‌ಮ್ಯಾನ್ ಮಡಿವಾಳ ಭೀಮಪ್ಪನಿಗೆ, ಜೋಗತಿ, ನಾನೊಂದು ಮರವಾಗಿದ್ದರೆ ಇನ್ನೂ ಮುಂತಾದವು. ವಿಶೇಷವೆಂದರೆ ವಿಮರ್ಶಕರಿಗೆ ಇಷ್ಟವಾದ ಕವಿತೆಗಳ ಟಿಪ್ಪಣಿಗಳನ್ನಷ್ಟೇ ಇಲ್ಲಿ ಸಂಕಲಿಸಲಾಗಿದೆ. ತತ್ಕಾಲದ ಕಾವ್ಯವನ್ನು ಪರಿಶೀಲಿಸುವ ಪಕ್ಷಿನೋಟವನ್ನು ಇಲ್ಲಿ ಕಾಣಬಹುದು.

ಎಸ್.ವಿ. ಪ್ರಭಾವತಿ ಅವರು ಸಂಪಾದಿಸಿರುವ 'ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ' ಸಂಪುಟ–೧ರಲ್ಲಿ ಮಹಿಳಾಕಾವ್ಯಕ್ಕೆ ಸಂಬಂಧಿಸಿದ ಹಲವು ಮಹತ್ವದ ಬರಹಗಳಿವೆ. ಈ ಕೃತಿಯಲ್ಲಿ ಆಧುನಿಕ ಮಹಿಳಾಕಾವ್ಯದ ಚರಿತ್ರೆಯನ್ನು ಹೊಸ ಬಗೆಯಲ್ಲಿ ಕಟ್ಟಿಕೊಳ್ಳುವ ಪ್ರಯತ್ನ

ಮಾಡಲಾಗಿದೆ. ಅಂದರೆ ಈಗಾಗಲೇ ಸಿದ್ಧಮಾದರಿಯಲ್ಲಿರುವ ಹೊಸಗನ್ನಡ ಸಾಹಿತ್ಯದ ಕಾಲಘಟ್ಟಗಳಾದ ನವೋದಯ, ಪ್ರಗತೀಶೀಲ, ನವ್ಯ, ದಲಿತ, ಬಂಡಾಯ ಇತ್ಯಾದಿ ವಿಭಾಗ ಕ್ರಮಗಳ ಬದಲಿಗೆ 'ಅಸ್ಮಿತೆಯ ಘಟ್ಟ'(೧೯೧೦-೧೯೫೦), 'ಅನುಸಂಧಾನ ಘಟ್ಟ'(೧೯೫೦-೧೯೭೫) ಹಾಗೂ 'ಪ್ರತಿರೋಧ ಘಟ್ಟ'(೧೯೭೫-೨೦೧೦) ಎಂದು ವಿಭಾಗಿಸಿ ಈ ಕೃತಿಯಲ್ಲಿ ಅಧ್ಯಯನ ಮಾಡಲಾಗಿದೆ. ಹೀಗೆ ವಿಭಾಗಿಸಿಕೊಂಡು ಆಧುನಿಕ ಕನ್ನಡದ ಪ್ರಮುಖ ಕವಯಿತ್ರಿಯರ ಕೃತಿಗಳನ್ನು ಪರಿಶೀಲಿಸಲಾಗಿದೆ.

ಡಿ.ಎಸ್. ನಾಗಭೂಷಣ ಅವರು 'ಇಲ್ಲಿ ಯಾವುದೂ ಮುಖ್ಯವಲ್ಲ: ಸಮಕಾಲೀನ ಸಾಹಿತ್ಯ ಮತ್ತು ಸೃಜನಶೀಲತೆ: ಒಂದು ಸ್ಥೂಲ ನೋಟ' ಎಂಬ ಲೇಖನದಲ್ಲಿ ಸಮಕಾಲೀನ ಕನ್ನಡ ಸಾಹಿತ್ಯದ ಮುಖ್ಯ ಒಲವುಗಳ ಬಗ್ಗೆ ಚರ್ಚಿಸಿದ್ದಾರೆ. ಸಮಕಾಲೀನ ಸಾಹಿತ್ಯ- ಸಂಸ್ಕೃತಿ ಚರ್ಚೆಯನ್ನು ಇತ್ತೀಚಿನ ಮುನ್ನುಡಿ ಮತ್ತು ಬೆನ್ನುಡಿಗಳು ಸರಿಯಾದ ರೀತಿಯಲ್ಲಿ ಮೌಲ್ಯೀಕರಿಸಿಲ್ಲ. ಆದ್ದರಿಂದ ಈ ಹೊತ್ತಿನ ಸಂವೇದನಾಶೀಲ ಬರಹಗಳನ್ನು ಗುರುತಿಸಲು ಸ್ವಲ್ಪ ತೊಡಕಾಗುತ್ತಿದೆ ಎಂಬುದು ಇವರ ನಿಲುವು. ಇದರ ಹೊರತಾಗಿಯೂ ಇತ್ತೀಚಿನ ಸಾಹಿತ್ಯ ರಚನೆಯ ಬಗ್ಗೆ ಆಶಾವಾದವನ್ನು ವ್ಯಕ್ತಪಡಿಸಿದ್ದಾರೆ. "ಹೊಸ ಕಾಲದ ಹೊಸ ಬೆಳೆಗೆ ನೆಲ ಹದ ಮಾಡುತ್ತಿರುವ ಎಲ್ಲ ಸೂಚನೆಗಳೂ ಕಾಣತೊಡಗಿವೆ. ಅದು ತನ್ನ ಕಾಲವನ್ನು ತತ್ವವನ್ನಾಗಿಸಿಕೊಳ್ಳುವ ಹಲವು ರೀತಿಯ ಪ್ರಯೋಗಗಳಲ್ಲಿ ತೊಡಗಿದ್ದು, ಅದಕ್ಕಿನ್ನೂ ಸಮರ್ಪಕವಾದ ನುಡಿಗಟ್ಟು ಮತ್ತು ಲಯ ಸಿಗಬೇಕಿದೆ"[೧೯] ಎಂಬುದು ಸಮಕಾಲೀನ ಸಾಹಿತ್ಯ ರಚನೆಯ ಬಗ್ಗೆ ಡಿ.ಎಸ್. ನಾಗಭೂಷಣ ಅವರ ಒಟ್ಟಾರೆ ಅಭಿಪ್ರಾಯವಾಗಿದೆ.

ಎಚ್. ಅನ್ನಪೂರ್ಣ ಅವರು 'ಆಧುನಿಕ ಮಹಿಳಾಕಾವ್ಯ: ಅಭಿವ್ಯಕ್ತಿಯ ವಿನ್ಯಾಸಗಳು' ಎಂಬ ಸಂಶೋಧನ ಪ್ರಬಂಧದಲ್ಲಿ ಮಹಿಳಾಕಾವ್ಯದ ಅಭಿವ್ಯಕ್ತಿ ಮತ್ತು ವಿನ್ಯಾಸಗಳನ್ನು ಗುರುತಿಸಿದ್ದಾರೆ. ಮುಖ್ಯವಾಗಿ ಮಹಿಳಾಕಾವ್ಯವು ಸಂವೇದನೆ, ಭಾಷೆ, ಸಂವಹನ, ಕಾವ್ಯಶಿಲ್ಪ ಈ ನಾಲ್ಕು ಬಗೆಯಲ್ಲಿ ಹೇಗೆ ಅಭಿವ್ಯಕ್ತಿಗೊಂಡಿದೆ ಎಂಬುದನ್ನು ಈ ಪ್ರಬಂಧದಲ್ಲಿ ವಿವೇಚಿಸಿದ್ದಾರೆ.

ಎಚ್.ಡಿ. ಉಮಾಶಂಕರ ಅವರ 'ದಲಿತ ಕಾವ್ಯ: ಕಾವ್ಯ ಮತ್ತು ಸಮಾಜ' ಎಂಬ ಅಪ್ರಕಟಿತ ಸಂಶೋಧನ ಮಹಾಪ್ರಬಂಧವು ಬರೀ ದಲಿತ ಕಾವ್ಯವನ್ನು ಕೇಂದ್ರದಲ್ಲಿರಿಸಿಕೊಂಡು ರಚನೆಯಾಗಿರದೆ ಕನ್ನಡ ಸಾಹಿತ್ಯದಲ್ಲಿ ದಲಿತ ಕಾವ್ಯವನ್ನು ಕುರಿತು ಈವರೆಗೆ ಬಂದ ವಿಮರ್ಶೆ ಹಾಗೂ ಪ್ರತಿಕ್ರಿಯೆಗಳಿಗೆ ಸಮರ್ಥನೆಯ ರೂಪದಲ್ಲಿ ಈ ನಿಬಂಧ ರೂಪತಾಳಿದೆ. ದಲಿತ ಸಾಹಿತ್ಯರಚನೆಗೆ ಪ್ರಭಾವ ಬೀರಿದ ಅಂಬೇಡ್ಕರ್, ಮಾರ್ಕ್ಸ್, ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ, ಪೆರಿಯಾರ್, ಬುದ್ಧ, ಬಸವ ಮುಂತಾದವರ ವಿಚಾರಗಳು ದಲಿತ ಹೋರಾಟಕ್ಕೆ ಸ್ಫೂರ್ತಿಯಾದಂತೆ ದಲಿತ ಸಾಹಿತ್ಯಕ್ಕೆ ಹೇಗೆ ಪ್ರೇರಣೆಯಾದವು ಎಂಬ ಇತ್ಯಾದಿ ವಿಚಾರಗಳ ಬಗ್ಗೆ ಸಂಶೋಧಕರು ಚರ್ಚಿಸಿದ್ದಾರೆ. ಚಳುವಳಿಯ ಹಿನ್ನೆಲೆಯಲ್ಲಿ ದಲಿತ ಕಾವ್ಯವನ್ನು ವಿಶ್ಲೇಷಿಸಿರುವ

ರೀತಿ ಇಲ್ಲಿನದು. ಅವರೇ ಹೇಳುವ ಹಾಗೆ "ಕಾವ್ಯ ಆಸ್ವಾದನೆಗೆಂದು ನಂಬಿದ್ದ ಜಗತ್ತಿನಲ್ಲಿ ಆಶ್ಚರ್ಯಕರ ರೀತಿಯಲ್ಲಿ ಅದನ್ನು ಮುರಿದು ಕಾವ್ಯ ಕಟ್ಟಿದವರು ದಲಿತರು. ಕಾವ್ಯ 'ಆನಂದಾಯ' ಎನ್ನುವ ಸಾಂಪ್ರದಾಯಿಕ ದೃಷ್ಟಿಕೋನಕ್ಕೆ ಪೆಟ್ಟುಕೊಟ್ಟರು. ಏಕೆಂದರೆ ದಲಿತರಿಗೆ ಕಾವ್ಯದ ತಂತ್ರಗಾರಿಕೆಗಿಂತ ಶೋಷಣೆಯ ನೆಲೆಗಳನ್ನು ಬಿಚ್ಚಿಡಬೇಕಿತ್ತು. ಬಿಚ್ಚಿಟ್ಟು ಅನ್ಯಾಯದ ವಿರುದ್ಧ ಜನರನ್ನು ಎಚ್ಚರಗೊಳಿಸಬೇಕಾಗಿತ್ತು."[೧೭] ಇಂಥ ಉದ್ದೇಶಗಳಿಗೆ ಅನುಗುಣವಾಗಿ ದಲಿತ ಕಾವ್ಯದ ಕಾವ್ಯತತ್ವ, ಸಾಮಾಜಿಕ ತತ್ವ ಹಾಗೂ ರಾಜಕೀಯ ತತ್ವಗಳನ್ನು ಹುಡುಕಾಟ ಮಾಡಿದ್ದಾರೆ. ದಲಿತ ಕಾವ್ಯ ಮತ್ತು ಹೋರಾಟದ ಹಾಡು - ಈ ಎರಡು ಕಾವ್ಯ ಪ್ರಭೇದಗಳು ದಲಿತ ಕಾವ್ಯದ ಪರಿಪ್ರೇಕ್ಷ್ಯೆಯಲ್ಲಿ ಚರ್ಚಿಸಲ್ಪಟ್ಟಿವೆ. ದಲಿತ ಚಳವಳಿಗಳನ್ನೂ ಒಳಗೊಂಡಂತೆ ರೈತ ಚಳವಳಿ, ಮಹಿಳಾಚಳವಳಿ, ಪೌರಕಾರ್ಮಿಕರು, ದೇವದಾಸಿಯರು, ಲೈಂಗಿಕ ಕಾರ್ಯಕರ್ತೆಯರು, ಸಾಕ್ಷರತಾ ಆಂದೋಲನ, ಆರೋಗ್ಯಜಾಗೃತಿ ಕಾರ್ಯಕ್ರಮಗಳು ಹಾಗೂ ಆದಿವಾಸಿಗಳ ಹೋರಾಟ ಇಂಥ ಎಲ್ಲ ಚಳವಳಿಗಳು ಹಾಡುವ ಹಾಡುಗಳನ್ನು 'ಹೋರಾಟದ ಹಾಡು'ಗಳೆಂದೇ ಕರೆಯಲ್ಪಡುತ್ತಿರುವಾಗ ಹೋರಾಟದ ಹಾಡುಗಳನ್ನು 'ದಲಿತ ಕಾವ್ಯ'ದ ಪರಿಪೇಕ್ಷೆಯಲ್ಲಿ ಚರ್ಚಿಸಿರುವುದು ಹಲವು ಜಿಜ್ಞಾಸೆಗಳಿಗೆ ಒಳಗುಮಾಡುತ್ತದೆ.

ಇದುವರೆಗೆ ದಲಿತ ಕಾವ್ಯದ ಬಗೆಗೆ ಅಧ್ಯಯನ ನಡೆಸಿರುವ ಬಹುತೇಕರು ಸಿದ್ಧಲಿಂಗಯ್ಯ ಅವರ ಕಾವ್ಯವನ್ನಷ್ಟೇ ಉಲ್ಲೇಖಿಸುತ್ತ, ದಲಿತ ಕಾವ್ಯವನ್ನು ಸರಳೀಕರಿಸಿವೆ. ಆದರೆ ಎಚ್.ಡಿ. ಉಮಾಶಂಕರ ಅವರ ಸಂಶೋಧನ ಮಹಾಪ್ರಬಂಧವು ದಲಿತ ಕಾವ್ಯದ ಒಟ್ಟು ಆಶಯಗಳನ್ನು ಹಿಡಿದಿಡುವ ಪ್ರಯತ್ನ ಮಾಡಿದೆ.

**ಕೊನೆಟಿಪ್ಪಣಿಗಳು**

೧. ಜಿ.ಕೆ. ರವೀಂದ್ರಕುಮಾರ್, **ಮಯೂರ,** ಮಾರ್ಚ್-೨೦೧೨, ಪುಟ ೧೫.

೨. ನಟರಾಜ್ ಹುಳಿಯಾರ್, **ಸಮಾನತೆಯ ಕನಸನ್ನು ಮತ್ತೆ ಕಾಣುತ್ತ...,** ಪುಟ ೬೬.

೩. ರಂಗನಾಥ ಕಂಟನಕುಂಟೆ, **ತಂಪು,** ಪುಟ ೬೫.

೪. ಓ.ಎಲ್. ನಾಗಭೂಷಣಸ್ವಾಮಿ, **ಪ್ರಜಾವಾಣಿ, ದೀಪಾವಳಿ ವಿಶೇಷಾಂಕ–೨೦೧೧,** ಪುಟ ೨೬೭.

೫. ಮಲ್ಲಿಕಾ ಘಂಟಿ, **ಧರಣಿಯ ಮೇಲೊಂದು,** ಪುಟ ೨೦೨.

೬. ಬರಗೂರು ರಾಮಚಂದ್ರಪ್ಪ, **ಅರುಹು ಕುರುಹು, ಸಂಪುಟ–೫, ಸಂಚಿಕೆ–೧೯,** ಪುಟ ೩೨.

೭. ಸಿ.ಎನ್. ರಾಮಚಂದ್ರನ್, **ಆಖ್ಯಾನ-ವ್ಯಾಖ್ಯಾನ,** ಪುಟ ೧೯೦.

೮. ಬಿ. ಪೀರ್‌ಬಾಷ, ತಂಪು, ಪುಟ ೮೪.

೯. ರಾಮಲಿಂಗಪ್ಪ ಟಿ. ಬೇಗೂರು, **ಪರಂಪರೆ ಮತ್ತು ಕವಿ ಪ್ರತಿಭೆಯ ಮುಖಾಮುಖಿ,** ಪುಟ ೭೭-೭೮.

೧೦. ಅದೇ, ಪುಟ ೭೮–೭೯.

೧೧. ಎಲ್. ಹನುಮಂತಯ್ಯ, ಸಾಹಿತ್ಯ ಸಂವಾದ, ಪುಟ ೭೮–೭೯.

೧೨. ರಾಜಶೇಖರ ಹತಗುಂದಿ, **ಕನ್ನಡ ದಲಿತ ಕಾವ್ಯ: ಇತ್ತೀಚಿನ ಒಲವು,** ಕಲ್ಯಾಣ ಕರ್ನಾಟಕ, ಪುಟ ೧೪೮.

೧೩. ರಾಜೇಂದ್ರ ಚೆನ್ನಿ, **ಅರಿವಿನ ನೆಲೆಗಳು,** ಪುಟ ೪೩.

೧೪. ಅದೇ, ಪುಟ ೫೨.

೧೫. ಅನುಸೂಯ ಕಾಂಬಳೆ, **ಜಾಗತೀಕರಣ ಸಂದರ್ಭ: ಮಹಿಳಾ ಸಾಹಿತ್ಯದ ಹೊಸ ಹೆಜ್ಜೆಗಳು,** ಕಲ್ಯಾಣ ಕರ್ನಾಟಕ, ಪುಟ ೧೫೨.

೧೬. ಡಿ.ಎಸ್. ನಾಗಭೂಷಣ, **ಇಲ್ಲಿ ಯಾವುದೂ ಮುಖ್ಯವಲ್ಲ,** ಪುಟ ೧೩೯.

೧೭. ಎಚ್.ಡಿ. ಉಮಾಶಂಕರ, **ದಲಿತಕಾವ್ಯ: ಕಾವ್ಯ ಮತ್ತು ಸಮಾಜ,** ಪುಟ ೧೧೯.



ಅಧ್ಯಾಯ : ಮೂರು

# ಸಮಕಾಲೀನ ಸಾಹಿತ್ಯ ಸಂದರ್ಭ: ವರ್ತಮಾನದ ಬಿಕ್ಕಟ್ಟುಗಳು

ಅಧ್ಯಾಯ : ಮೂರು

# ಸಮಕಾಲೀನ ಸಾಹಿತ್ಯ ಸಂದರ್ಭ: ವರ್ತಮಾನದ ಬಿಕ್ಕಟ್ಟುಗಳು

ಸಮಕಾಲೀನ ಭಾರತದ ಸಂದರ್ಭವು ಎದುರಿಸುತ್ತಿರುವ ಬಿಕ್ಕಟ್ಟು ಮತ್ತು ಅರ್ಥಪೂರ್ಣ ಪ್ರಶ್ನೆಗಳನ್ನು ಸ್ಪಷ್ಟಪಡಿಸಿಕೊಳ್ಳದೇ ಹೋದರೆ ಯಾವುದೇ ಸಂವಾದವೂ ಕೂಡ ನಿರ್ದಿಷ್ಟ ಗುರಿ ಮುಟ್ಟಲು ಸಾಧ್ಯವಿಲ್ಲ. ಸಮಕಾಲೀನ ಕನ್ನಡ ಕಾವ್ಯದ ಅನುಸಂಧಾನವೂ ಇದಕ್ಕೆ ಹೊರತಲ್ಲ. ನಮ್ಮ ಸಮಾಜದಲ್ಲಿ ಜರುಗುತ್ತಿರುವ ಈ ಕಾಲದ ತಲ್ಲಣಗಳು ಮತ್ತು ಕಣ್ಣೆದುರಿನ ಪ್ರಶ್ನೆಗಳನ್ನು ದೇವನೂರ ಮಹಾದೇವ ಅವರ ಈ ಕೆಳಗಿನ ಎರಡು ಉದಾಹರಣೆಗಳಿಂದ ಅರಿಯಬಹುದು ಎನಿಸುತ್ತದೆ.

"ಹೀಗೆ ಮುಂದುವರಿದರೆ, ಈ ಅಂತಃಕರಣ ಇಲ್ಲದ ಖಾಸಗೀಕರಣ, ಜಾಗತೀಕರಣ, ಉದಾರೀಕರಣ ಹೀಗೆ ಮುಂದುವರಿದರೆ, ಕಾರ್ಪೋರೇಟ್ ಸೆಕ್ಟರ್ ದವಡೆಗೆ ಸಿಕ್ಕಿರುವ ಭಾರತ ತನ್ನನ್ನು ಬಿಡಿಸಿಕೊಂಡು ಬಚಾವಾಗದಿದ್ದರೆ, ನಾಳಿನ ಭಾರತ ಹೇಗಿರಬಹುದು? ಹೀಗೆ ಯಾಕಾದರೂ ಅಂದುಕೊಂಡೆನೋ ಅಂತ ಈಗ ಅನ್ನಿಸುತ್ತಿದೆ. ಈ ರೀತಿ ಅಂದುಕೊಂಡಿದ್ದಕ್ಕಾಗಿ ಎರಡು ದುಃಸ್ವಪ್ನಗಳು ಈಗ ನನ್ನ ಕಣ್ಮುಂದೆ ಬಂದು ಕೂತಿವೆ.

ಒಂದು: ಮುಂಬೈನಲ್ಲಿ ಸಾವಿರಾರು ಗುಡಿಸಲುಗಳ ನಡುವೆ ಒಂದು ಅರಮನೆ ಇದೆ. ಈ ಅರಮನೆ ಕಾರ್ಪೋರೇಟ್ ಕುಳ ಅಂಬಾನಿಯದು. ನಾಳೆ ಇಡೀ ಭಾರತವೇ ಹೀಗಾಗಿ ಬಿಡಬಹುದೆ?

ಇನ್ನೊಂದು: ನಮ್ಮ ಬಳ್ಳಾರಿ ಜಿಲ್ಲೆ- ಇಲ್ಲಿ ಅದಿರು ತೆಗೆದೂ ತೆಗೆದೂ ಇಡೀ ಭೂಮಿ ಹಳ್ಳಗಳಾಗಿವೆ. ಇಲ್ಲಿ ಗಾಳಿ, ನೀರೂ ಕೆಂಪಾಗಿವೆ. ನಾಳೆ ಇಡೀ ಭಾರತವೇ ಹೀಗಾಗಿ ಬಿಡಬಹುದೆ?

ಭೂಮಿ ನಲುಗ್ತಾ ಇದೆ; ನರಳ್ತಾ ಇದೆ. ಅಸಮಾನತೆ, ಬಡವ ಬಲ್ಲಿದರ ನಡುವೆ ಅಂತರ ಎಂದೂ ಇಲ್ಲದಷ್ಟು ಉಲ್ಬಣಗೊಳ್ಳುತ್ತಿದೆ. ಆದರೆ ಸಮಾನತೆಗಾಗಿ ಹೋರಾಡಬೇಕಾದ

ಸಂಘಟನೆಗಳು, ಸಮುದಾಯಗಳು ತೆವಳುತ್ತಿವೆ. ಉಳಿಗಾಲ? ಗೊತ್ತಾಗುತ್ತಿಲ್ಲ. ಹೀಗೆ ಮುಂದುವರಿದರೆ ಆ ಸ್ಲಂ ಜೋಪಡಿ ಜನರ ರೋಗರುಜಿನ ಹಸಿವಿನ ಆಕ್ರಂದನ ಹತಾಶೆ ನೋಡಲಾಗದೆ 'ಮಾನವತೆ ದೃಷ್ಟಿ'ಯಿಂದ ಅವರನ್ನೆಲ್ಲ ಗಣಿ ಗುಂಡಿಗಳಿಗೆ ತುಂಬಿ ಮಣ್ಣು ಮುಚ್ಚಿ ಮಣ್ಣು ಮಾಡುವುದರತ್ತ ಭಾರತದ ಅಭಿವೃದ್ಧಿ ಸಾಗುತ್ತಿದೆಯೇನೋ ಎಂಬ ಭಯವಾಗುತ್ತದೆ. ಜನರಿಂದ, ಜನರಿಗಾಗಿ, ಜನರಿಗೆ ಅಧಿಕಾರ, ಯಾರಿಗೆ? ಎಲ್ಲವೂ ಮಾರಿಕೆಯ ಸರಕುಗಳಾಗಿ ಪ್ರಜಾಪ್ರಭುತ್ವ, ಜನತಂತ್ರ ವ್ಯವಸ್ಥೆ, ನ್ಯಾಯ, ದೇವರು, ಎಲ್ಲವೂ ಇನ್ನು ಉಳಿದಿದ್ದೇನು.?"[೧]

ಹೀಗೆ ಆಂತಕಗಳನ್ನು ಎದುರಿಸುತ್ತಿರುವ ಜನಸಾಮಾನ್ಯರು ಅಸಹಾಯಕರಂತೆ ಬದುಕುತ್ತಿದ್ದಾರೆ. ಯಾವುದೇ ಬಗೆಯ ಅವಮಾನ, ಶೋಷಣೆ, ದಬ್ಬಾಳಿಕೆಗಳ ವಿರುದ್ಧ ಸಿಡಿದೇಳದಂತೆ ಪ್ರಭುತ್ವ ಜನರನ್ನು ನಿಯಂತ್ರಿಸುತ್ತಿದೆ. ಆದ್ದರಿಂದ ೭೦-೮೦ರ ದಶಕದಲ್ಲಿ ರಚನೆಯಾದ ಸಾಹಿತ್ಯಕ್ಕಿಂತ ಭಿನ್ನವಾಗಿ ಈಗಿನ ಬರಹಗಾರರು ಹೊಸ ಭಾಷೆ, ಹೊಸ ನುಡಿಗಟ್ಟುಗಳ ರಚನೆಯಿಂದ ಓದುಗರಲ್ಲಿ ಮತ್ತಷ್ಟು ಪ್ರಖರವಾಗಿ ಸಾಮಾಜಿಕ, ಸಾಂಸ್ಕೃತಿಕ ಎಚ್ಚರವನ್ನು ಮೂಡಿಸಬೇಕಾಗಿದೆ. ಅಂದರೆ ದಲಿತ–ಬಂಡಾಯ ಸಂದರ್ಭದ ಬರಹಗಾರ, ಹೋರಾಟಗಾರರು ರೂಪಿಸಿದ ಸಾಹಿತ್ಯ ರಚನೆಗಳಿಗಿಂತ ಭಿನ್ನವಾದ, ಈ ಕಾಲದ್ದೇ ಆದ ಹೊಸ ಸಂವೇದನೆ ಮತ್ತು ಸುಡು ವಾಸ್ತವವನ್ನು ತಮ್ಮ ಕೃತಿಗಳಲ್ಲಿ ಒಡಮೂಡಿಸುವ ಹೊಣೆಗಾರಿಕೆ ಸಮಕಾಲೀನ ಕವಿಗಳ ಮೇಲಿದೆ. ಇಂಥ ಸವಾಲುಗಳನ್ನು ತಮ್ಮ ಕೃತಿಗಳಲ್ಲಿ ಸಶಕ್ತವಾಗಿ ಅಭಿವ್ಯಕ್ತಿಸುವ ಜವಾಬ್ದಾರಿ ಕವಿಗಳಿಗೆ ಒಂದು ರೀತಿಯ ಸವಾಲೂ ಹೌದು, ಬಿಕ್ಕಟ್ಟು ಹೌದು.

ಕನ್ನಡ ಕಾವ್ಯಪರಂಪರೆಯನ್ನು ಕೆದಕಿದರೆ ನಮ್ಮ ಪೂರ್ವಿಕರು ಸೃಷ್ಟಿಸಿರುವ ಅಸಂಖ್ಯಾತ ವೈಚಾರಿಕ ದರ್ಶನಗಳು ನಮ್ಮ ಕಣ್ಣೆದುರಿಗಿವೆ. ಇಂಥ ಪ್ರಜ್ಞೆ ಮತ್ತು ಶಕ್ತಿಯನ್ನು ಅರಗಿಸಿಕೊಳ್ಳಲಾಗದ ಅಥವಾ ಅರಗಿಸಿಕೊಂಡರೂ ಅದನ್ನು ತನ್ನದಾಗಿಸಿಕೊಳ್ಳದ ಅರೆಪ್ರಜ್ಞಾವಸ್ಥೆಯಲ್ಲಿ ನಾವಿದ್ದೇವೆ. ಎಲ್ಲಾ ಕಾಲಕ್ಕೂ ಹೊಸ ಕಾವ್ಯ, ಹೊಸ ವಿಚಾರ, ಹೊಸ ದರ್ಶನಗಳು ಬೇಕು ಎಂಬ ಹಂಬಲ ನಮ್ಮದು. ಆದರೆ ತಮ್ಮ ಹಿಂದಿನ ಅಥವಾ ಹಳೆಯ ಪರಂಪರೆಯಿಂದ ನಾವೇನು ಸ್ವೀಕಾರ ಮಾಡಿದೆವು, ಕಲಿತೆವು ಎಂಬ ಪ್ರಶ್ನೆಗೆ ಉತ್ತರ ಮಾತ್ರ ನಿರಾಶಾದಾಯಕವಾದುದು. ಯಂತ್ರ ನಾಗರಿಕತೆ ಮತ್ತು ಆಧುನಿಕತೆಯ ಬೆನ್ನೇರಿ ನಾಗಾಲೋಟದಲ್ಲಿ ಓಡುತ್ತಿರುವ ಮನುಷ್ಯನಿಗೆ ಇವೆಲ್ಲ ಹೇಗೆ ಅರ್ಥವಾಗುವುದು? ಈಗ ಅವನಿಗೆ ಕಾವ್ಯಕ್ಕಿಂತ ಕಾರ್ಯ ಮುಖ್ಯವಾಗಿದೆ; ಹಣ ಮುಖ್ಯವಾಗಿದೆ. 'ಹೊಟ್ಟೆಯೆ ಕೇಂದ್ರವಾಗಿದೆ ನರನ ಜೀವಿತಕೆ' ಎಂಬ ಗೋಪಾಲಕೃಷ್ಣ ಅಡಿಗರ ಮಾತು ವಾಸ್ತವದ ದೃಷ್ಟಿಯಲ್ಲಿ ಸತ್ಯವಾದರೂ ಹಸಿವನ್ನು ನೀಗಿಸಿಕೊಳ್ಳುವುದಷ್ಟೇ ಮನುಷ್ಯನ ಮೂಲ ಉದ್ದೇಶವಲ್ಲ. ಮನುಷ್ಯನ ಪ್ರಜ್ಞೆಯ ವಿಕಾಸಕ್ಕೆ ಕನಸು, ಕಲೆ, ಸಾಹಿತ್ಯ, ಸಂಗೀತ, ತತ್ವವಿಚಾರಗಳ ಅಗತ್ಯವೂ ಇದೆ. ಈ ವಿವೇಕವನ್ನು ಮರೆತಾಗ ಮನುಷ್ಯ ಸ್ವಾರ್ಥಿಯಾಗುತ್ತಾನೆ; ಹಣದ ಬೆನ್ನೇರಿ ಭ್ರಷ್ಟನಾಗುತ್ತಾನೆ. ಆಗ ಇಡೀ ವಾತಾವರಣವೆ

ಕಲುಷಿತಗೊಂಡು ಹೊಸ ಸಮಾಜದ ಸೃಷ್ಟಿಗೆ ಎದುರು ನೋಡುತ್ತದೆ. ಕಾವ್ಯವೂ ಹಾಗೆ ಹೊಸ ಧೋರಣೆ, ಹೊಸ ಹುಡುಕಾಟಕ್ಕೆ ಕನಸು ಕಾಣುತ್ತಿರುತ್ತದೆ. ಹೀಗೆ ಹದಗೊಂಡ ಸಂದರ್ಭವು ಕವಿಯಲ್ಲಿ ಹೊಸ ರೂಪಕಜಗತ್ತಿನ ಸೃಷ್ಟಿಗೆ ಕಾರಣವಾಗುತ್ತದೆ. ಇಂಥ ಪರಿಪಕ್ವವಾದ ಕಾಲಕ್ಕಾಗಿ ಕವಿ, ಕಾವ್ಯ ಹಾಗೂ ಓದುಗರು ಎದುರು ನೋಡುವುದು ಎಲ್ಲಾ ಕಾಲದ ತುಡಿತ ಮತ್ತು ಅಪೇಕ್ಷೆ. ಈ ಹಂಬಲವಿದ್ದಾಗಲೇ ಕಾವ್ಯದ ದೃಷ್ಟಿ-ಧೋರಣೆಗಳು ತೀಕ್ಷ್ಣವೂ ಹರಿತವೂ ಆಗುತ್ತಿರುತ್ತವೆ. ಇದರ ಸಾರ್ಥಕ್ಯವನ್ನು ಓದುಗರು ತನ್ನದಾಗಿ ಮಾಡಿಕೊಳ್ಳುವಲ್ಲಿ ಸೋತಾಗ ಅಥವಾ ವಿಫಲರಾದಾಗ ಕವಿಗೆ ವಿಚಿತ್ರ ಸಂಕಟ ಎದುರಾಗುತ್ತದೆ. ಶಕ್ತಿಶಾಲಿ ಕವಿ ಇಂಥ ಸವಾಲನ್ನು ದಾಟುತ್ತಲೇ ಹೊಸ ರೂಪಕಜಗತ್ತನ್ನು, ಹೊಸಕಾವ್ಯ ಭಾಷೆಯನ್ನು ನಿರ್ಮಿಸುವ ದಾರಿಯ ಕಡೆಗೆ ಹುಡುಕಾಟ ಮಾಡುತ್ತಿರುತ್ತಾನೆ. ಯಾವುದೇ ಸಂದರ್ಭದಲ್ಲಿ ಸೃಜನಶೀಲವಾದ ಇಂಥ ಬಿಕ್ಕಟ್ಟುಗಳಿರುವಾಗ ಆ ಕಾಲವನ್ನು 'ಸಂಕ್ರಮಣ ಕಾಲ' ಎಂದು ಕರೆಯುತ್ತೇವೆ. ಈ ಕಾಲದ ಬಿಕ್ಕಟ್ಟು ಹಾಗೂ ತಲ್ಲಣಗಳು ಅರ್ಥೈಸಲಾರದಷ್ಟು ಸಂಕೀರ್ಣವಾಗಿವೆ. ಅಷ್ಟೇ ಅಲ್ಲ, ಅವು ಅಗೋಚರವಾಗಿವೆ. ಈ ರೀತಿಯ ಹಲವು ಕಾರಣಗಳೂ ಸೇರಿ ಕವಿ ಮತ್ತು ಓದುಗರಿಗೆ ಸಂದಿಗ್ಧತೆಯನ್ನು ಉಂಟುಮಾಡಿವೆ.

"...ಅನೇಕ ಸಲ ನನ್ನ ಕಾವ್ಯವನ್ನು ಹಿಂಡಿ ನೋಡಿದರೆ ಅಥವಾ ನನ್ನ ತಲೆಮಾರಿನ ಗೆಳೆಯರ ಕಾವ್ಯವನ್ನು ಹಿಂಜಿ ನೋಡಿದರೆ, ಅಲ್ಲಿ ನಮ್ಮ ಪೂರ್ವಿಕರ ದರ್ಶನಗಳು ಜೀಕುತ್ತಿರುತ್ತವೆ. ಅವರ ಮಾದರಿಗಳು, ಲಯಗಳು ಅವರು ತಂದ ಕಾಣ್ಕೆಗಳು, ನಾನೇನನ್ನು ಕಂಡೆ ಎಂಬ ಗೊಂದಲ ಆಗುವ ಹಾಗೆ ಅನ್ನಿಸಿ, ನಾವು ಅನುಕರಣೆ ಮಾಡುತ್ತಿದ್ದೇವೋ, ನಕಲನ್ನು ಮಾಡ್ತಾ ಇದ್ದೇವೊ ಎನ್ನುವ ಆತಂಕಗಳು ಸೃಷ್ಟಿಯಾಗುವ ಮಟ್ಟಿಗೆ ನಾನ್ಯಾರು, ನನ್ನ ಭಾಷೆ ಯಾವುದು, ನನ್ನತನ ಯಾವುದು, ನಾನು ಹೇಳಬೇಕಾದ ಸತ್ಯ ಯಾವುದು ಅನ್ನುವುದೇ ಗೊಂದಲದ ಪರಿಸ್ಥಿತಿಯಾಗಿ ಬರೆಯಲು ಕೂತಾಗ ಅನೇಕ ಸಲ ಕಾಡುವುದುಂಟು. ಇನ್ನು ಏಕತಾನತೆಯ ಭರಾಟೆ ಎಷ್ಟರಮಟ್ಟಿಗೆ ಇದೆ ಎಂದರೆ ನಾನು ಕೂಡ ನನ್ನದೇ ಲೋಕದ ಅನುಭವವನ್ನು ಬರೆದರೂ ಅದು ಸತ್ಯ ಅಂತ ಅನ್ನಿಸದಷ್ಟು ಗ್ರಹಿಕೆಗಳು ಬದಲಾಗಿವೆ. ನನ್ನ ಅಪಮಾನ, ಸಂಕಟಗಳನ್ನು ಬರೆದರೂ ಅದನ್ನು ಓದಿ ಓದಿ, ಬರೆದು ಬರೆದು, ಈಗಾಗಲೇ ಸಿದ್ಧವಾದ ಅನುಭವವೊಂದು ಇದು ಕ್ಲೀಷೆ, ಇದು ಏಕತಾನತೆ ಎಂದು ನನ್ನನ್ನು ತಿರಸ್ಕರಿಸುವಷ್ಟರಮಟ್ಟಿಗೆ ನನ್ನ ಸತ್ಯಗಳಿಗೆ ಅಪಾಯ ಇದೆ."[೨]

ಕನ್ನಡದಲ್ಲಿ ಈವರೆಗೆ ರಚನೆಯಾಗಿರುವ ಕಾವ್ಯಕ್ಕಿಂತ ಭಿನ್ನವಾದ ಧಾರೆಗಳನ್ನು ಹುಡುಕಾಟ ಮಾಡಿರುವ ಎನ್.ಕೆ. ಹನುಮಂತಯ್ಯ ಅವರು ಮನುಷ್ಯಕೇಂದ್ರಿತ ಜಗತ್ತು ಹೆಚ್ಚು ಚಿತ್ರಣಗೊಳ್ಳದಿರುವ ಬಗ್ಗೆ ಇಲ್ಲಿ ಗಮನ ಸೆಳೆಯುತ್ತಿದ್ದಾರೆ. "...ನಮ್ಮ ಇತ್ತೀಚಿನ ಕಾವ್ಯದಲ್ಲಿ ಕೇವಲ ಮನುಷ್ಯಕೇಂದ್ರಿತವಾದ ಜಗತ್ತೇ ಹೆಚ್ಚು ಕಾಣಿಸುತ್ತಾ ಇರುತ್ತೆ. ಈ ಕಾವ್ಯದ ಅಕ್ಷರಗಳನ್ನು ಗಮನಿಸುತ್ತಾ ಹೋದರೆ ಅಲ್ಲಿ

ಕೋಟ್ಯಂತರ ಸುರಂಗಗಳು ಕಾಣಿಸುತ್ತವೆ. ಅವುಗಳ ಒಳಗಡೆ ಜಾರಿಹೋದರೆ ಮನುಷ್ಯ ಜಗತ್ತು ಮಾತ್ರ ಇಲ್ಲದೆ ಅಲ್ಲಿ ದೇವರು, ಧರ್ಮ, ಅಧ್ಯಾತ್ಮ, ಪ್ರಕೃತಿ, ಚರಿತ್ರೆ ಯಾವ್ಯಾವುದೋ ಹೊಸ ಲೋಕಗಳು ಅದರಲ್ಲಿ ದಾಖಲಾಗಿರುತ್ತವೆ. ಇಂಥಾ ಅನಂತವಾದ ಸಂಗತಿಗಳಿಗೆ ಅವಕಾಶ ಕೊಡತಕ್ಕಂಥ ಅಂತಃಸತ್ವಗಳನ್ನು ನಮ್ಮನ್ನು ಪ್ರಭಾವಿಸಿದ ಕಾವ್ಯಗಳಲ್ಲಿ ನೋಡುತ್ತೇವೆ. ಆದರೆ ಇತ್ತೀಚೆಗೆ ನಮಗೆ ಮನುಷ್ಯನ ಆಚೆಗಿನ, ಮನುಷ್ಯನ ಜೊತೆಗೆ ಇರತಕ್ಕಂಥ ಇತರ ಜಗತ್ತು ಒಳಗೊಳ್ಳತಕ್ಕಂಥ ಒಂದು ಅಂತಃಸತ್ವದ ಕಾವ್ಯವನ್ನು ಕಟ್ಟಲು ಬಹಳ ಕಷ್ಟವಾಗುತ್ತಿದೆಯೇನೋ ಅಂತ ಅನ್ನಿಸುತ್ತಿದೆ."[೩]

ಸ್ವತಃ ಒಬ್ಬ ಕವಿಯಾಗಿ ತನ್ನ ಎದುರಿಗಿರುವ ಸವಾಲು ಮತ್ತು ಆತಂಕವನ್ನು ಎನ್.ಕೆ. ಹನುಮಂತಯ್ಯ ಇಲ್ಲಿ ನಿವೇದಿಸುತ್ತಿದ್ದಾರೆ.

'ಕಲೆಗಾಗಿ ಕಲೆ' ಎಂಬ ತತ್ವವನ್ನು ಛಿದ್ರಗೊಳಿಸಿದ ದಲಿತ-ಬಂಡಾಯ ಕಾವ್ಯಕ್ಕಿಂತ ಭಿನ್ನವಾದ ಕಾವ್ಯದ ಮಾದರಿಗಳನ್ನು ಹುಡುಕಿಕೊಳ್ಳುವ ಬಗೆ ಹೇಗೆ? ಹಾಗೆ ಶೋಧಿಸಿಕೊಂಡ ಅನುಭವ ಜನ್ಯವನ್ನು ಕಾವ್ಯವಾಗಿಸುವುದು ಹೇಗೆ? ಇತ್ಯಾದಿ ಪ್ರಶ್ನೆಗಳನ್ನು ಸಮಕಾಲೀನ ಕವಿಗಳು ಎದುರಿಸಬೇಕಾಗಿದೆ ಎಂಬುದು ಎನ್.ಕೆ. ಹನುಮಂತಯ್ಯ ಅವರ ಮಾತಿನ ಇಂಗಿತ. ಕಾವ್ಯ ಎಲ್ಲಾ ಕಾಲದಲ್ಲಿಯೂ ಮರುವ್ಯಾಖ್ಯಾನಕ್ಕೆ ಒಳಗಾಗುತ್ತಿರುತ್ತದೆ. ಅಷ್ಟೇ ಅಲ್ಲ; ಸೂಕ್ಷ್ಮವಾಗಿ ಮತ್ತು ಗಂಭೀರವಾಗಿ ನೋಡಿದರೆ ಇತರೆ ಕಲೆ ಹಾಗೂ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಆಗುವ ಬದಲಾವಣೆಯಂತೆಯೇ ಕಾವ್ಯದಲ್ಲೂ ನಿರಂತರ ಬದಲಾವಣೆಗಳಾಗುವುದು ಸಹಜ ಎಂಬುದನ್ನು ಓದುಗರು ಅರಿಯಬೇಕಾಗುತ್ತದೆ. ಯಾವುದೇ ಕಾವ್ಯವನ್ನು ಹೊಸತೆಂದು ಓದುಗ ಸ್ವೀಕರಿಸುವುದು ಕವಿ ಸೃಜಿಸುವ ಹೊಸ ಮಾದರಿಗಳಿಂದ. ಇಂಥ ಹೊಸ ಕಾವ್ಯಮಾರ್ಗ, ಧೋರಣೆಗಳನ್ನು ಹುಟ್ಟು ಹಾಕುವುದು ಎಲ್ಲಾ ಕಾಲದಲ್ಲೂ ಕವಿಗೆ ಸವಾಲು. ಈ ಸವಾಲನ್ನು ಎದುರಿಸಿ ಹೊಸ ಮಾದರಿಗಳನ್ನು ಸಮಕಾಲೀನ ಕವಿಗಳು ಹುಟ್ಟಿ ಹಾಕುತ್ತಿದ್ದಾರೆಯೇ ಎಂಬುದು ಇಲ್ಲಿ ಮೂಲಭೂತ ಪ್ರಶ್ನೆ. ಕವಿ ತನ್ನೊಳಗೆ ಇಂಥ ಪ್ರಶ್ನೆಗಳನ್ನು ಹಾಕಿಕೊಂಡು ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ಆಗ ಮಾತ್ರ ಯಾವುದೇ ಕವಿ ಹೊಸದನ್ನು ಸೃಷ್ಟಿಸಲು ಸಾಧ್ಯ.

ಇದೆಲ್ಲದರ ನಡುವೆಯೂ "ಒಬ್ಬ ಕವಿಗೆ ನೀನು ಕಾವ್ಯವನ್ನು ಹೀಗೇ ಬರೆಯಬೇಕೆಂದು ವಿಧಿಸುವುದು ಹೇಗೆ? ಹಾಗೆ ವಿಧಿಸಲು ನಮಗೆ ಯಾವ ಹಕ್ಕು ಇದೆ? ಹಾಗೆಯೇ ತಾನು ಹೀಗೇ ಬರೆಯುತ್ತೇನೆಂದು ಶಪಥ ತೊಟ್ಟು ಯಾವ ಕವಿಯೂ ಕಾವ್ಯರಚನೆ ಮಾಡುವುದು ಸಾಧ್ಯವಿಲ್ಲ. ಶಪಥ ತೊಡಬಹುದು. ಆದರೆ ಆ ಶಪಥಕ್ಕೆ ಅನುಸಾರವಾದ ಕೆಲಸ ನಡೆಯುತ್ತದೆಂದು ಯಾವ ಭರವಸೆಗೂ ಅವಕಾಶ ಇಲ್ಲ. ಹೀಗೆಯೇ ಬರೆಯುತ್ತೇನೆಂದು ಹೊರಟು ಹಾಗೆಯೇ ಬರೆದೂ ಅದು ಕಾವ್ಯವಾಗದೆ ಹೋಗಬಹುದು; ಅಥವಾ ಬರೆಯುತ್ತಿರುವಾಗಲೇ ಅದು ಇನ್ನೇನೋ ಆಗಿ ಯಾವ ಯಾವುವೋ ಅಜ್ಞಾತ ಅನಿರೀಕ್ಷಿತ ಅಂಶಗಳು ಸೇರಿ ಸಫಲವಾಗಬಹುದು.

ಆದಕಾರಣವೇ ಕಾವ್ಯದ ಬಗ್ಗೆ ಒಂದು ಖಚಿತವಾದ ಸಿದ್ಧಾಂತವಾಗಲೀ, ತ್ರಿಕಾಲಕ್ಕೂ ನಿಲ್ಲಬಲ್ಲ ವೈಜ್ಞಾನಿಕ ಸೂತ್ರಗಳಾಗಲೀ ಸಾಧ್ಯವಲ್ಲ."[೪]

ಏನನ್ನು ಕುರಿತು ಬರೆಯುವುದು? ಒಮ್ಮೆ ಬರೆದರೆ ಅದು ಕಾವ್ಯವಾಗಿದೆಯೇ? ಗದ್ಯ ಮತ್ತು ಪದ್ಯಗಳ ನಡುವಿನ ಭಿನ್ನತೆ ಯಾವ ಸ್ವರೂಪದ್ದು? ಸಮಾಜದಲ್ಲಿ ಕವಿಯಾದವನಿಗೆ ಇರಬೇಕಾದ ಜವಾಬ್ದಾರಿಗಳೇನು? ಕವಿ-ಓದುಗ ಹಾಗೂ ಸಮಾಜದ ನಡುವಿನ ಸಂಬಂಧದ ಸ್ವರೂಪ ಯಾವ ರೀತಿಯದು? ಈ ಎಲ್ಲಾ ಪ್ರಶ್ನೆಗಳನ್ನು ಕವಿಯಾದವನು ತನ್ನನ್ನು ತಾನೇ ಕೇಳಿಕೊಳ್ಳಬೇಕು. ಅವುಗಳಿಗೆ ಸಿದ್ಧ ಉತ್ತರಗಳಿಲ್ಲ. ಇದನ್ನು ಅರ್ಥ ಮಾಡಿಕೊಳ್ಳುವ ಸೂಕ್ಷ್ಮತೆ ಮತ್ತು ವ್ಯವಧಾನ ಕವಿಗಿರಬೇಕಾಗುತ್ತದೆ. 'ಧ್ಯಾನಸ್ಥ ಸ್ಥಿತಿ' ಎಂದರೆ ತಪಸ್ಸು ಕೂರುವುದಲ್ಲ. ಒಂದು ಕಲಾಕೃತಿಗೆ ಜೀವ ತುಂಬಲು ಬೇಕಾದ ಕಲೆಗಾರಿಕೆಯನ್ನು ಸಿದ್ಧಿಸಿಕೊಳ್ಳುವುದು. ಜೊತೆಗೆ ತನ್ನ ಸುತ್ತಣ ಇರುವ ತೀರಾ ವೈಯಕ್ತಿಕವಾದ ತಲ್ಲಣಗಳನ್ನಾಗಲಿ ಮತ್ತು ಸಾರ್ವಜನಿಕವಾದ ಜೀವನಾನುಭವಗಳನ್ನಾಗಲಿ ಲೋಕಾನುಭವವಾಗಿಸುವ ಕಾಣ್ಕೆ ಅಥವಾ ದರ್ಶನ ಕವಿಗೆ ಇರಬೇಕು. ಎಲ್ಲರೊಳಗೂ ಕವಿ ಇರುತ್ತಾನೆ. ನಿಜ; ಆದರೆ ಆ ಎಲ್ಲರಿಗಿಂತ ವಿಶೇಷವೆಂದು ಪರಿಗಣಿಸಲು ಇವೆಲ್ಲ ಬೇಕು. ಅಷ್ಟೇ ಅಲ್ಲ; ಸಮಕಾಲೀನ ವಿದ್ಯಮಾನಗಳಿಗೆ ದನಿಯಾಗುವ ಸೂಕ್ಷ್ಮ ಸಂವೇದನಾಶೀಲತೆಯೂ ಅವನಿಗಿರಬೇಕು.

"...ಮಾರುಕಟ್ಟೆಯ ಮಾಧ್ಯಮಗಳು ಸೃಷ್ಟಿಸುವ ಕವಿ ಮತ್ತು ಕಾವ್ಯಕ್ಕಿಂತ, ಒಂದು ಸಮುದಾಯ ಅಂದರೆ ಓದುಗರು ಸೃಷ್ಟಿಸುವ ಕಾವ್ಯಗಳು ಬೇಕಾಗಿದೆಯೇನೊ ಅಂತ ಅನ್ನಿಸುತ್ತ ಇದೆ. ಬಹಳ ಭ್ರಮಾತ್ಮಕವಾದ ಕಾಲದಲ್ಲಿ ಬಹಳ ಸುಲಭವಾಗಿ ಒಂದು ರೂಪಕವನ್ನು ಒದಗಿಸಲಿಕ್ಕೆ ಎಷ್ಟೋ ವರುಷಗಳು ಬೇಕಾದರೆ, ಅನೇಕರು ಬೆಳಕು ಹರಿಯುಷ್ಟರಲ್ಲಿ ಒಂದಷ್ಟು ಕವಿತೆಗಳನ್ನು ಬರೆದಿರುತ್ತಾರೆ, ಪುಸ್ತಕಗಳನ್ನು ಪ್ರಕಟಿಸಿರುತ್ತಾರೆ. ನಾವು ಎಷ್ಟೇ ಮಾತನಾಡಿದರೂ ಸಮಾಜದ ಮೇಲೆ ಪ್ರಭಾವ ಬೀರುತ್ತಾ ಇಲ್ಲ, ಯಾವ ಸಾಯುವ ಮನುಷ್ಯರನ್ನೂ ಬದುಕಿಸುತ್ತಾ ಇಲ್ಲ, ಯಾವ ಬದಲಾವಣೆಗೂ ಪ್ರಭಾವ ಬೀರುತ್ತಿಲ್ಲ. ಪರಿಣಾಮವಾಗಿ ಒಂದು ಭ್ರಷ್ಟ ವಾತಾವರಣ ಕಾವ್ಯವನ್ನು ಪ್ರವೇಶಿಸಿರುವುದು ನೋವಿನ ಸಂಗತಿಯಾಗಿದೆ. ಇಂಥ ಸಂದರ್ಭದಲ್ಲಿ ದಲಿತ ಲೋಕದಿಂದ ಬಂದಂಥ ನನಗೆ ಅನೇಕ ಸಲ ಅನ್ನಿಸುತ್ತೆ, ದಲಿತರಿಗೆ ಅಕ್ಷರ ಕೂಡ ಅವರ ವಿಮೋಚನೆಯ ಶಕ್ತಿಯಾಗಿ ಉಳಿದಿಲ್ಲ. ಅಕ್ಷರದ ಮೂಲಕ ನನ್ನ ವಿಮೋಚನೆಗಳನ್ನು ಅಥವಾ ನನ್ನೊಳಗಿನ ದರ್ಶನವನ್ನು ಕಟ್ಟಿಕೊಡಬಲ್ಲೆ ಎನ್ನುವ ವಿಶ್ವಾಸವನ್ನು ನನ್ನ ಸಮಾಜ ಭಗ್ನಗೊಳಿಸಿ ಹೊಸದರ ಶೋಧದಲ್ಲಿ ನಾನು ನಡೆಯಬೇಕೆನ್ನುವ ಎಚ್ಚರವನ್ನು ಈ ಕಾಲಘಟ್ಟದಲ್ಲಿ ತಂದುಕೊಟ್ಟಿದೆ."[೫] ಇನ್ನೇನು ಸಂಸ್ಕೃತದ ಚಿಂತನಾಮಾದರಿಗಳಿಂದ ಬಿಡಿಸಿಕೊಳ್ಳಬೇಕೆನ್ನುವಷ್ಟರಲ್ಲಿ ಇಂಗ್ಲಿಷ್ ನಮ್ಮ ಮೇಲೆ ಸವಾರಿ ಮಾಡುತ್ತಿದೆ. ಇಂಗ್ಲಿಷ್ ಭಾಷೆಯ ಭರಾಟೆಯಿಂದ ಕನ್ನಡ ಮಾಧ್ಯಮ ಶಾಲೆಗಳು ಮುಚ್ಚಲ್ಪಡುತ್ತಿವೆ. ದೇಶೀಯ ಭಾಷೆಗಳಿಗೆ ಹಿಂದೆಂದೂ ಇಲ್ಲದ ಸಂಕಟ, ಸಂದಿಗ್ಧತೆಗಳು ಇಂದು ಎದುರಾಗಿವೆ. ಇಂಗ್ಲಿಷ್ ಭಾಷೆಯ ಜ್ಞಾನ, ತಿಳುವಳಿಕೆಯೇ ಶ್ರೇಷ್ಠ

ಆತ್ಯಂತಿಕ ಎಂಬ ಮನೋಭಾವ ಬಹುತೇಕರಲ್ಲಿದೆ. ೨೦ನೇ ಶತಮಾನದ ಕೊನೆಯ ದಶಕದಲ್ಲಿ ಭಾರತದಂಥ ಹಿಂದುಳಿದ ರಾಷ್ಟ್ರಗಳಿಗೆ ಪ್ರವೇಶಿಸಿದ ಜಾಗತೀಕರಣವು ವಿಮೋಚನೆಯ ಹಾದಿಯಂತೆ ಕಂಡಿತು. ಹೊಸ ಬದುಕಿನ ಹುಡುಕಾಟಕ್ಕೆ ತಹತಹಿಸುತ್ತಿದ್ದ ಬಡ ಹಿಂದುಳಿದ, ಅಲ್ಪಸಂಖ್ಯಾತ, ದಲಿತ, ಸ್ತ್ರೀ ಹಾಗೂ ಬುಡಕಟ್ಟು ಜನರನ್ನು ಆಳವಾದ ಮಾಯಾಪ್ರಪಾತಕ್ಕೆ ದೂಡಿದ್ದು ನಮ್ಮ ಕಾಲದ ದೊಡ್ಡ ದುರಂತ. ಇಂಥವುಗಳಿಗೆ ಕುಮ್ಮಕ್ಕು ನೀಡುತ್ತಿರುವ ರಾಜಕೀಯ ವ್ಯವಸ್ಥೆಯು ರಾಷ್ಟ್ರವನ್ನು ಅಭಿವೃದ್ಧಿ ಮಾಡದೆ ಧರ್ಮ ಮತ್ತು ಕೋಮುಗಳ ನಡುವೆ ವಿಷಬೀಜ ಬಿತ್ತುತ್ತ ಜನರಲ್ಲಿ ಕೋಮುಸಂಘರ್ಷದ ಭಾವನೆಗಳನ್ನು ಹುಟ್ಟುಹಾಕುತ್ತಿದೆ. ರಾಷ್ಟ್ರದ ಅತಿ ಹೆಚ್ಚು ಆಯವ್ಯಯವನ್ನು ಯುದ್ಧಸಂಬಂಧಿ ಶಸ್ತ್ರಾಸ್ತ್ರಗಳ ಉತ್ಪನ್ನಗಳಿಗೆ ಖರ್ಚು ಮಾಡುತ್ತಿದೆ. ದೇಶ-ದೇಶಗಳ ನಡುವೆ ಗಡಿಯಲ್ಲಿ ನಿತ್ಯ ಘರ್ಷಣೆಗಳಾಗುತ್ತಿವೆ. ಸ್ವಾತಂತ್ರ್ಯ ಬಂದು ಅರವತ್ತೆಂಟು ವರ್ಷಗಳಾದರೂ ಬಡವರು, ನಿರ್ಗತಿಕರು ಹಾಗೇ ಇದ್ದಾರೆ; ಅವರ ಬದುಕು ಸ್ವಲ್ಪವೂ ಸುಧಾರಿಸಿಲ್ಲ. ಇಂಥ ಸಂದರ್ಭದಲ್ಲಿ ಸಂಕಷ್ಟದಲ್ಲಿ ಉಸಿರಾಡುತ್ತಿರುವ ಗ್ರಾಮೀಣ ಮತ್ತು ನಗರ ಬದುಕಿನ ಜನರ ಕನಸು ಮತ್ತು ಭಾವನೆಗಳಿಗೆ ಕವಿ ಮನಸ್ಸು ಮಿಡಿಯಬೇಕಾಗಿದೆ. ಗೋಪಾಲಕೃಷ್ಣ ಅಡಿಗರ ಮಾತಿನಲ್ಲಿ ಹೇಳುವುದಾದರೆ 'ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು' ಅನ್ನಿಸುತ್ತದೆ.

ಎಲ್ಲಕ್ಕಿಂತ ಮುಖ್ಯವಾಗಿ ಜಾಗತೀಕರಣ, ಖಾಸಗೀಕರಣ, ನಗರೀಕರಣ ಅಮೇರಿಕದಂಥ ಬೃಹತ್ ರಾಷ್ಟ್ರಗಳು ರೂಪಿಸುವ ಸಾಮ್ರಾಜ್ಯಶಾಹಿ ನೀತಿ-ನಿರೂಪಣೆಗಳು, ಮುಕ್ತ ಮಾರುಕಟ್ಟೆ ವ್ಯವಸ್ಥೆ, ಬಹುರಾಷ್ಟ್ರೀಯ ಕಂಪನಿಗಳ ನೇರ ಹೊಡೆತಗಳನ್ನು ಅನುಭವಿಸುತ್ತಿರುವ ರೈತರು, ಕೃಷಿ, ಕೂಲಿ ಮತ್ತು ಪೌರಕಾರ್ಮಿಕರು, ಗುಡಿ ಕೈಗಾರಿಕೆಗಳಲ್ಲಿ ದುಡಿಯುವ ವರ್ಗ, ತಳ ಸಮುದಾಯ, ಅಲೆಮಾರಿ ಮತ್ತು ಬುಡಕಟ್ಟು ಜನರು ಎದುರಿಸುತ್ತಿರುವ ಸಂಕಷ್ಟಗಳನ್ನು ಸಾಹಿತ್ಯದಲ್ಲಿ ಒಡಮೂಡಿಸುವ ಸವಾಲು ಮತ್ತು ಹೊಣೆಗಾರಿಕೆ ಪ್ರಸ್ತುತ ಬರಹಗಾರರ ಮೇಲಿದೆ.

**೩.೧. ಸಮಕಾಲೀನ ಪರಿಕಲ್ಪನೆಯ ನಿರ್ವಚನ**

ಸಮಕಾಲೀನ ಎಂಬ ಪರಿಕಲ್ಪನೆ ತುಂಬಾ ಸಂಕೀರ್ಣವಾದುದು ಮತ್ತು ವಿಸ್ತಾರವಾದುದು. ಸರಳವಾದ ಅರ್ಥದಲ್ಲಿ ಯಾವುದೇ ಒಬ್ಬ ವ್ಯಕ್ತಿಯ ಬದುಕಿನ ಕಾಲಾವಧಿಯನ್ನು 'ಸಮಕಾಲೀನ' ಎನ್ನಬಹುದು.

ಸಮಕಾಲೀನ ಎಂಬ ಪರಿಕಲ್ಪನೆಯು ಸಾರ್ವಕಾಲಿಕ ಮತ್ತು ಇತ್ತೀಚಿನ ಎಂಬ ಎರಡು ಪರ್ಯಾಯ ಹೆಸರುಗಳಿಂದಲೂ ಬಳಕೆಯಾಗುತ್ತಿದೆ. ಸಮಕಾಲೀನ ಎಂಬ ಪರಿಕಲ್ಪನೆಯಲ್ಲಿ ಮುಖ್ಯವಾಗಿ ಎರಡು ಬಗೆಗಳನ್ನು ಗುರುತಿಸಬಹುದು.

'ಸಮಕಾಲೀನ' ಎಂಬ ಪರಿಕಲ್ಪನೆ 'ಆಧುನಿಕ' ಎಂಬ ಗುಣವಾಚಿಯಾಗಿ ಬಳಕೆಯಾಗುವಾಗ ಈಗಿನ; ಇತ್ತೀಚಿನ; ನವೀನ ಎಂಬ ಅರ್ಥಗಳಲ್ಲಿಯೂ ಹಾಗೂ 'ಸಮಕಾಲೀನತೆ' ಎಂಬ

ಪರಿಕಲ್ಪನೆ 'ಆಧುನಿಕತೆ' ಎಂಬ ನಾಮಪದವಾಗಿ ಬಳಕೆಯಾಗುವಾಗ 'ನವೀನತೆ', 'ನವ್ಯತೆ' ಎಂಬ ಅರ್ಥಗಳಲ್ಲಿಯೂ ಬಳಕೆಯಾಗಿದೆ.

೧. ತಾನು ಬದುಕುತ್ತಿರುವ ಸದ್ಯದ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಸಂದರ್ಭಗಳ ಹಿನ್ನೆಲೆಯಲ್ಲಿ 'ಸಮಕಾಲೀನ'ವೆಂದು ಗುರುತಿಸುವುದು.

೨. ಆದರ್ಶಯುತವಾದ ಮತ್ತು ಸಾರ್ವಕಾಲಿಕ ವಸ್ತು-ವಿಚಾರಗಳು ನಮ್ಮ ಬದುಕಿಗೆ ಹೇಗೆ ಪ್ರಸ್ತುತವಾಗಬಲ್ಲವು ಎಂಬ ಹಿನ್ನೆಲೆಯಿಂದ ಅರ್ಥೈಸುವುದು.

ಆದ್ದರಿಂದ ಈ ಎರಡೂ ಪದಗಳ ಅರ್ಥ ಒಂದೇ ಅಲ್ಲ. ಸಾಹಿತ್ಯ-ಸಂಸ್ಕೃತಿ ಚರ್ಚೆಯ ಸಂದರ್ಭಗಳಲ್ಲಿ ಸಮಕಾಲೀನ ಎಂಬ ಪರಿಕಲ್ಪನೆಗೆ ಪರ್ಯಾಯವಾಗಿ 'ಹೊಸ ತಲೆಮಾರು' ಎಂಬ ಪರಿಕಲ್ಪನೆಯನ್ನೂ ಬಳಸುವುದುಂಟು.

'ಹೊಸ ತಲೆಮಾರು' ಎಂಬ ಶಬ್ದ ವಯಸ್ಸನ್ನು ನಿರ್ಧರಿಸಿದರೆ, 'ಸಮಕಾಲೀನ' ಎಂಬ ಶಬ್ದ ಕಾಲ ಮತ್ತು ಸಂದರ್ಭ ಎರಡನ್ನೂ ಸೂಚಿಸುತ್ತದೆ. ಹೀಗಾಗಿ ಈ ಎರಡೂ ಪರಿಕಲ್ಪನೆಗಳ ನಡುವೆ ತಾತ್ವಿಕ ವ್ಯತ್ಯಾಸಗಳಿವೆ.

"ಯಾವುದೇ ಪರಂಪರೆಯ ಮುಂದುವರಿಕೆಯನ್ನು ಯಾವ ಕಾಲದ ಮಿತಿಯಲ್ಲಿ ಗುರುತಿಸಬಹುದು? ಒಂದು ತಲೆಮಾರು ಹಾಗೂ ಇನ್ನೊಂದು ತಲೆಮಾರಿನ ನಡುವೆ ಇಂತಿಷ್ಟೇ ಎಂಬ ಗೆರೆ ಕೊರೆದ ಅಂತರ ಇರುತ್ತದೆಯೇ ಅಥವಾ ಇರಬೇಕೆ?"[೬] ಎಂಬ ಪ್ರಶ್ನೆಗಳು ನಮ್ಮ ಎದುರಿಗಿವೆ. ಹಾಗೆಯೇ "ವರ್ತಮಾನದಲ್ಲಿ ಇವೆರಡೂ ತಲೆಮಾರು ಒಟ್ಟಿಗೇ ಸಾಗುತ್ತಿವೆ. ಆದ್ದರಿಂದ ಕಾಲದ ಪ್ರಶ್ನೆ ಗೌಣವಾಗಿ ಧೋರಣೆ ಹಾಗೂ ದೃಷ್ಟಿಕೋನಗಳು ಮುಖ್ಯವಾಗುತ್ತವೆ. ಈ ಧೋರಣೆ/ದೃಷ್ಟಿಕೋನ ಹೊಸ ಮತ್ತು ಹಳೆಯ ತಲೆಮಾರನ್ನು ವಿಭಜಿಸುವ ಮತ್ತು ಒಂದಾಗಿಸುವ ಕೀಲಿಕೈಯಾಗಿ ಕೆಲಸ ಮಾಡುತ್ತದೆ"[೭] ಎಂಬ ಎಚ್ಚರಿಕೆ ಹಾಗೂ ವಿವೇಕವೂ ನಮಗಿರಬೇಕಾಗುತ್ತದೆ. ಅಂದರೆ ಕಾಲ ಮತ್ತು ಲೇಖಕರ ವಯೋಮಾನದ ಆಧಾರದಲ್ಲಿ ಗುರುತಿಸಲ್ಪಡುವ 'ಸಮಕಾಲೀನ', 'ಹೊಸ ತಲೆಮಾರು' ಎಂಬ ಪರಿಕಲ್ಪನೆಗಳು ಮೇಲ್ನೋಟಕ್ಕೆ ಸರಳ ಎನಿಸಿದರೂ, ಆಳದಲ್ಲಿ ಸಂಕೀರ್ಣವಾಗಿರುತ್ತವೆ. ಕೃತಿ ರಚನೆಯ ಕಾಲ ಮತ್ತು ಲೇಖಕರ ವಯೋಮಾನವನ್ನು ನಾವು ಗಣನೆಗೆ ತೆಗೆದುಕೊಂಡಾಗ ಕೃತಿಯ ದೃಷ್ಟಿಕೋನ, ಧೋರಣೆಗಳು ಗೌಣವಾಗುವ ಅಪಾಯವನ್ನು ನಾವು ಗಮನಿಸಬೇಕಾಗುತ್ತದೆ.

ಇದಕ್ಕೆ ಪೂರಕವಾಗಿ 'ಸಮಕಾಲೀನತೆ' ಎಂಬ ಪರಿಕಲ್ಪನೆಯು ಸಹ ಇದೇ ಬಗೆಯ ಗೊಂದಲಗಳನ್ನು ಉಂಟುಮಾಡುತ್ತದೆ. "ಸಮಕಾಲೀನತೆಯ ಪರಿಕಲ್ಪನೆಯನ್ನು ಮೇಲುನೋಟಕ್ಕೆ ವಿವರಿಸುವುದು ಕಷ್ಟ, ವಿಸ್ತಾರವಾದ ಅರ್ಥದಲ್ಲಿ ಹೇಳುವುದಾದರೆ, ಬರಹಗಾರ ತನ್ನ ಸಮಕಾಲೀನ ಸಮುದಾಯದ ಸಂದರ್ಭದಲ್ಲಿ ಚಾರಿತ್ರಿಕ ನಿರಂತರತೆಯನ್ನು ಹೇಗೆ ಗ್ರಹಿಸುತ್ತಾನೆ ಎಂಬುದರ

ಮೇಲೆ ಈ ಪರಿಕಲ್ಪನೆಯನ್ನು ಗುರುತಿಸಬಹುದು. ಈ ದೃಷ್ಟಿಯಲ್ಲಿ ಇದು ಸಾಪೇಕ್ಷವಾದುದು, ಆದರೂ ಸಾರ್ವಕಾಲಿಕವಾದುದು."[೪]

ಸಮಕಾಲೀನ, ಸಮಕಾಲೀನತೆ ಎಂಬ ಪರಿಕಲ್ಪನೆಯನ್ನು ಯಾವ ಆಧಾರದ ಮೇಲೆ ನಿರ್ಧರಿಸಬೇಕು ಎಂಬ ಪ್ರಶ್ನೆ ಸರಳವಾದುದಲ್ಲ. ಯಾವುದು ಸಮಕಾಲೀನ, ಯಾವುದು ಸಮಕಾಲೀನವಲ್ಲ, ಸಮಕಾಲೀನ ಎಂದು ಕರೆಸಿಕೊಳ್ಳಬೇಕಾದರೆ ಯಾವ ಯಾವ ಮಾನದಂಡಗಳಿರಬೇಕು? ಇತ್ಯಾದಿ ಪ್ರಶ್ನೆಗಳು ನಮಗೆ ಎದುರಾಗುತ್ತವೆ.

ಪಂಪನ ಕಾವ್ಯಗಳು ನಮಗೆ ಈಗಲೂ ಪ್ರಸ್ತುತವಾಗಿರಲು ಕಾರಣ ಅವು ರಚನೆಗೊಂಡ ಕಾಲದ ದೃಷ್ಟಿಯಿಂದಲೋ? ಅಥವಾ ಆ ಕಾವ್ಯಗಳಲ್ಲಿ ಹುದುಗಿರುವ ಸಾರ್ವಕಾಲಿಕ ವಿಚಾರಗಳಿಂದಲೋ? ಇಂಥ ಅನೇಕ ಬಗೆಯ ಪ್ರಶ್ನೆಗಳು 'ಸಮಕಾಲೀನ' ಎಂಬ ಪರಿಕಲ್ಪನೆಯನ್ನು ವಿವರಿಸಲು ಹೊರಟಾಗ ನಮಗೆ ಎದುರಾಗುತ್ತವೆ. ಸಾಹಿತ್ಯ-ಸಂಸ್ಕೃತಿಯ ಚರ್ಚೆಗಳಲ್ಲಿ ಇದನ್ನು ಒಂದು ಸೂತ್ರರೂಪದಲ್ಲಿ ವ್ಯಾಖ್ಯಾನಿಸುವುದು ಕಷ್ಟ; ಜೊತೆಗೆ ಅಷ್ಟೇ ಸಮಸ್ಯಾತ್ಮಕವಾದುದು.

ಜಿ.ಎಸ್.ಎಸ್. ಅವರು ಈ ಸಮಕಾಲೀನತೆ ಎಂಬ ಪರಿಕಲ್ಪನೆಯನ್ನು ಭೂತ ಮತ್ತು ಭವಿಷ್ಯತ್ತಿನ ಕೊಂಡಿಯಾಗಿ ಬೆಸೆಯುವುದನ್ನು ಇಲ್ಲಿ ಕಾಣಬಹುದು.

"...ಕವಿ ಮನುಷ್ಯ ವ್ಯಕ್ತಿಯಾಗಿ ಯಾವುದೋ ಒಂದು ಕಾಲದಲ್ಲಿ ಬದುಕುವಂತೆ ಕಂಡರೂ, ಅವನು, ತನ್ನ ಕಾಲದ ಸತ್ವದಿಂದ ಬದ್ಧನಾದಂತೆ ಕಂಡರೂ ವಾಸ್ತವವಾಗಿ ಅವನು ಹಿಂದು-ಇಂದು-ಮುಂದುಗಳನ್ನೊಳಗೊಳ್ಳುವ ಕಾಲಾತೀತ ವರ್ತಮಾನದ ನೆಲೆಗೆ ನಿಲ್ಲುತ್ತಾನೆ. ಓದುಗರ ದೃಷ್ಟಿಯಿಂದ ನೋಡಿದರಂತೂ ಯಾವ ಕಾಲದ ಕೃತಿಯೂ ನಮ್ಮ ಅನುಭವದಲ್ಲಿ, ನಮ್ಮ ಸಮಕಾಲೀನ ಅನುಭವದಿಂದಲೇ ಆಸ್ವಾದ್ಯವಾಗುತ್ತದೆ. ಈ ಅರ್ಥದಲ್ಲಿ ನಮಗೆ ಎಲ್ಲ ಕವಿಗಳೂ ಸಮಕಾಲೀನರೇ!"[೫]

ಸೃಜನಶೀಲ ಕವಿ ತನ್ನ ಸಮಕಾಲೀನ ಸಂದರ್ಭದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ವಿಷಯಗಳಾಚೆಗೆ ತುಂಬಾ ಪ್ರಾಚೀನವಾದ ವಸ್ತುವನ್ನು ಆಯ್ಕೆ ಮಾಡಿಕೊಂಡು ಹೊಸದೆಂಬಂತೆ ಪುನರ್‌ಸೃಷ್ಟಿಸಿ, ಅದ್ಭುತವಾದ ಸುಂದರ ಕಲಾಕೃತಿಯಾಗಿಸಬಲ್ಲ. ಆದ್ದರಿಂದ ತುಂಬ ಸರಳವಾಗಿ ಹೇಳುವುದಾದರೆ ಯಾವುದೇ ಸಮಕಾಲೀನ ವಸ್ತು ವಿಚಾರಗಳು ಭೂತ-ಭವಿಷ್ಯಗಳ ನಡುವೆ ಅನುಸಂಧಾನಗೊಳ್ಳುತ್ತ ವರ್ತಮಾನದ ಪ್ರಜ್ಞೆಯನ್ನು ವಿಸ್ತರಿಸುತ್ತಿರುತ್ತವೆ.

"...ಹೊಸತು ಎನ್ನುವ ಮಾತು ಕಾಲಕ್ಕೆ ಮಾತ್ರವಲ್ಲದೆ ಆತ್ಮಕ್ಕೂ ಅನ್ವಯಿಸುತ್ತದೆ. ಅಷ್ಟೇ ಅಲ್ಲ; ವ್ಯಕ್ತಿಗಳಿಗೆ ಮಾತ್ರವೇ ಅಲ್ಲದೆ ತತ್ವಗಳಿಗೂ ಅನ್ವಯಿಸುತ್ತದೆ. ಕೆಲವು ಆಲೋಚನೆ ಅಭಿಪ್ರಾಯಗಳಿವೆ; ಅವು ಅತ್ಯಂತದ ಪುರಾತನವಾದರೂ ಸರ್ವದಾ ನೂತನವಾಗಿರುತ್ತವೆ.

ಮತ್ತೆ ಕೆಲವು ಮೊನ್ನೆ ಮೊನ್ನೆ ಹುಟ್ಟಿದ ಹೊಸ ಸಿದ್ಧಾಂತಗಳಾದರೂ ಜಗತ್ತಿನ ಬದುಕಿನ ನೆಮ್ಮದಿಯ ದೃಷ್ಟಿಯಿಂದ, ಸಂಸ್ಕೃತಿಯ ಏಳ್ಗೆಯ ದೃಷ್ಟಿಯಿಂದ ಕಳಚಿ ಬಿಸಾಡಲು ಯೋಗ್ಯವಾದ ಹಳೆಯ ಚಿಂದಿ ಬೊಂತೆಗಳಾಗಿರುತ್ತವೆ."[೧೦]

ಕುವೆಂಪು ಅವರ ಈ ಮಾತುಗಳು ಸಾಂದರ್ಭಿಕವಾಗಿ ಇಲ್ಲಿ ಅರ್ಥಪೂರ್ಣವಾಗಿವೆ. ಕಾಲಾತೀತವಾದ, ವಿಚಾರದರ್ಶನವುಳ್ಳ ಎಲ್ಲ ವಿಷಯಗಳೂ ಸಮಕಾಲೀನವಾದವುಗಳೇ ಆಗಿರುತ್ತವೆ. ಇಂಥ ವಿಚಾರಗಳು ದೇಶ, ಭಾಷೆ, ಸಂಸ್ಕೃತಿಗಳಾಚೆಗಿನ ವಿಶ್ವಾತ್ಮಕ ದೃಷ್ಟಿ-ಧೋರಣೆಗಳಿಂದ ಕೂಡಿರುತ್ತವೆ. ಹೀಗೆ ಅನಂತ ಸಾಧ್ಯತೆಗಳ ಸಂಕೀರ್ಣತೆಯನ್ನು ಸಮಕಾಲೀನ ವಸ್ತು-ವಿಚಾರಗಳು ಪಡೆದುಕೊಂಡಿರುತ್ತವೆ.

ಒಟ್ಟಾರೆಯಾಗಿ 'ಸಮಕಾಲೀನ' ಎಂಬ ಪರಿಕಲ್ಪನೆಯು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಅರ್ಥಗಳನ್ನು ಒಳಗೊಂಡಿದ್ದು ಸಂದರ್ಭಕ್ಕೆ ಅನುಸಾರವಾಗಿ ಹೊಸ ಹೊಸ ಅರ್ಥಗಳನ್ನು ಬಿಟ್ಟುಕೊಡುತ್ತದೆ. ಪ್ರಸ್ತುತ ಅಧ್ಯಯನದಲ್ಲಿ 'ಸಮಕಾಲೀನ ಕನ್ನಡ ಕಾವ್ಯ' ಎಂಬ ಅಧ್ಯಯನದ ವಿಷಯವನ್ನು ಇಪ್ಪತ್ತನೆಯ ಶತಮಾನದ ಕೊನೆ ಹಾಗೂ ಇಪ್ಪತ್ತೊಂದನೆಯ ಶತಮಾನದ ಆರಂಭದಲ್ಲಿ ಅಭಿವ್ಯಕ್ತಿಸಲ್ಪಟ್ಟಿರುವ ಕಾವ್ಯದ ರಚನೆ ಎಂಬ ಅರ್ಥದಲ್ಲಿ ಹೆಚ್ಚು ಬಳಸಲಾಗಿದೆ.

**೩.೨. ಸಮಕಾಲೀನ ಕಾವ್ಯ: ಕವಿ ಮತ್ತು ವಿಮರ್ಶಕರ ಧೋರಣೆಗಳು**

ಕನ್ನಡ ಕಾವ್ಯಪರಂಪರೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಎಲ್ಲಾ ಕಾಲದಲ್ಲೂ ಕವಿ, ವಿಮರ್ಶಕರು ತಮ್ಮ ಸಮಕಾಲೀನ ಕಾವ್ಯದ ಧೋರಣೆ, ಆಶಯ, ವೈಶಿಷ್ಟ್ಯತೆಗಳನ್ನು ಕುರಿತು ಚರ್ಚಿಸಿರುವ ಅಂಶಗಳು ನಮಗೆ ತಿಳಿದುಬರುತ್ತವೆ.

ಪ್ರಾಚೀನ ಸಾಹಿತ್ಯದಲ್ಲಿ ಕಾವ್ಯದ ಧೋರಣೆಗಳು, ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳಲ್ಲಿ ಅಭಿವ್ಯಕ್ತಿಗೊಂಡಿದ್ದರೆ, ಆಧುನಿಕ ಸಂದರ್ಭದಲ್ಲಿ ಕಾವ್ಯ ಹಾಗೂ ವಿಮರ್ಶಾ ಕೃತಿಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು.

ಕನ್ನಡದ ಪ್ರಾಚೀನ ಕಾವ್ಯಗಳ ಆರಂಭ ಭಾಗದ ನಾಂದಿ ಪದ್ಯಗಳಲ್ಲಿ ಬಹುತೇಕ ಕವಿಗಳು ತಮ್ಮ ಕಾವ್ಯದ ಅಗ್ಗಳಿಕೆಯ ಜೊತೆಗೆ ಪೂರ್ವಕವಿ ಸ್ಮರಣೆ, ಸತ್ಕವಿಪ್ರಶಂಸೆ, ಕುಕವಿ ನಿಂದೆ ಹಾಗೂ ಕಾವ್ಯದ ವಿಶೇಷತೆ, ಅದರ ಶೈಲಿ, ಕಾವ್ಯಪ್ರಯೋಜನ ಇತ್ಯಾದಿ ವಿಷಯಗಳ ಬಗೆಗೆ ಹೇಳಿಕೊಂಡಿದ್ದಾರೆ. ಜೊತೆಗೆ ಇಂಥ ಭಾಗಗಳಲ್ಲಿ ಕವಿಯು ತನ್ನ ಕಾವ್ಯದ ಧೋರಣೆ, ಕಾವ್ಯದಲ್ಲಿ ಬಳಕೆಯಾಗಿರುವ ವಿಶಿಷ್ಟ ಭಾಷಾಬಳಕೆ, ವಸ್ತು, ನಿರೂಪಣಾಶೈಲಿ ಹಾಗೂ ತನ್ನ ಸಮಕಾಲೀನ ಸಂದರ್ಭದ ಸಾಂಸ್ಕೃತಿಕ ಸ್ಥಿತ್ಯಂತರಗಳ ಬಗೆಗೆ ಕಾವ್ಯದ ಆರಂಭ ಭಾಗದಲ್ಲಿ ಅಥವಾ ಕೆಲವೊಮ್ಮೆ ಕೊನೆಯ ಭಾಗಗಳಲ್ಲಿ ಉಲ್ಲೇಖ ಮಾಡಿರುತ್ತಾನೆ.

ಹೀಗೆ ಉಲ್ಲೇಖಗೊಂಡಿರುವ ಭಾಗಗಳಲ್ಲಿ ಆ ಕಾಲದ ಕವಿ-ಕಾವ್ಯ ಸಂಸ್ಕೃತಿಯ ವಿಮರ್ಶೆ ಕಂಡುಬಂದಿರುವುದು ಗಮನೀಯ ಅಂಶ.

“...‘ಕುಕವಿನಿಂದೆ’ಯ ಪದ್ಯಗಳು, ಕನ್ನಡ ಕಾವ್ಯ ಪರಂಪರೆಯಲ್ಲಿನ ಅಂದಂದಿನ ಸಮಕಾಲೀನ ಸಾಹಿತ್ಯ ಪರಿಸರವನ್ನು ಅಲ್ಲಿನ ಸಂಘರ್ಷವನ್ನೂ ಕೊಡುವುದರ ಜತೆಗೆ ಕನ್ನಡ ವಿಮರ್ಶೆಯ ಬೆಳವಣಿಗೆಯನ್ನು ಕುರಿತು ಅಭ್ಯಾಸ ಮಾಡತಕ್ಕವರಿಗೆ, ಹಲವು ಸ್ವಾರಸ್ಯವಾದ ಸಂಗತಿಗಳನ್ನು ಒದಗಿಸುತ್ತವೆ.”[೧೧]

‘ಕುಕವಿನಿಂದೆ’ಯ ಭಾಗಗಳಲ್ಲಿ ಆಯಾ ಕಾಲದ ಕವಿ-ಕಾವ್ಯಕ್ಕೆ ಸಂಬಂಧಿಸಿದ ಟೀಕೆ ಮತ್ತು ವಿಡಂಬನೆಗಳು ಕಂಡುಬಂದರೆ, ಪೂರ್ವಕವಿ ಸ್ಮರಣೆ ಹಾಗೂ ಸತ್ಕವಿ ಪ್ರಶಂಸೆಯ ಭಾಗಗಳಲ್ಲಿ ಕಾವ್ಯದ ಅನನ್ಯತೆ ಕಂಡುಬರುತ್ತದೆ. ಇಲ್ಲಿ ವಸ್ತುನಿಷ್ಠವಾದ ವಿಮರ್ಶೆಯ ಪ್ರಮಾಣ ಕಡಿಮೆ ಎನಿಸಿದರೂ ಆಯಾ ಕಾಲದ ಕವಿ-ಕಾವ್ಯದ ಮೌಲ್ಯನಿರ್ಣಯ ಆಗಿಲ್ಲವೆಂದು ಹೇಳಲಾಗದು.

ಈ ಹಿನ್ನೆಲೆಯಲ್ಲಿ ಹೊಸ ತಲೆಮಾರು ಮತ್ತು ಹಿರಿಯ ತಲೆಮಾರಿನ ಕವಿಗಳ ನಡುವೆ ತಮ್ಮ ಸಮಕಾಲೀನ ಕಾವ್ಯದ ಧೋರಣೆಗಳ ಬಗ್ಗೆ ತಾತ್ವಿಕ ಸಂಘರ್ಷಗಳು ಕನ್ನಡ ಕಾವ್ಯ ಪರಂಪರೆಯ ಉದ್ದಕ್ಕೂ ನಡೆದಿರುವುದನ್ನು ಗಮನಿಸಬಹುದು. ಎಲ್ಲಾ ಕಾಲದಲ್ಲೂ ಆಗತಾನೆ ರಚನೆಯಾದ ಕಾವ್ಯದ ಮೌಲ್ಯ ವಿವೇಚನೆಗಳು ಹಲವು ಬಗೆಯ ತಾತ್ವಿಕ ಚರ್ಚೆಯನ್ನು ಹುಟ್ಟು ಹಾಕಿವೆ. ಕನ್ನಡ ಕಾವ್ಯಪರಂಪರೆಯ ಉದ್ದಕ್ಕೂ ನಡೆದಿರುವ ಈ ಬಗೆಯ ತಾತ್ವಿಕ ಚರ್ಚೆಗಳು ಆಯಾ ಕಾಲದಲ್ಲಿ ರಚನೆಯಾದ ಕಾವ್ಯದ ಧೋರಣೆ ಮತ್ತು ಅನನ್ಯತೆಗಳ ಸ್ವರೂಪವನ್ನು ಅರಿಯುವುದಕ್ಕೆ ಸಹಕಾರಿಯಾಗುತ್ತದೆ.

“ಹೊಸ ಕವಿತೆಯನ್ನು ಟೀಕಿಸುವುದು ಬಹಳ ಹಳೆಯ ಕಾಲದಿಂದಲೂ ಇರುವ ಪದ್ಧತಿ. ಕಾಳಿದಾಸನೇ ‘ಹಳತೆಂದೇ ಎಲ್ಲವೂ ಸಲ್ಲುವುದಿಲ್ಲ. ಹೊಸ ಕವಿತೆಯನ್ನು ಹೊಸತೆಂದೇ ಹೀಗಳೆಯಬೇಕಾದ್ದಿಲ್ಲ’ ಎಂದ. ಅವನ ಕಾಲದಲ್ಲೂ ಹೊಸ ಕವಿತೆಯ ಬಗ್ಗೆ ಹುಬ್ಬುಗಂಟಿಕ್ಕುವವರಿದ್ದರು.”[೧೨]

ಎಲ್ಲ ಕಾಲದ ಹೊಸ ಕವಿತೆಗಳು ಕೆಲವೊಮ್ಮೆ ಒಂದು ರೀತಿಯ ಅತೃಪ್ತಿಯನ್ನು ಓದುಗ ಮತ್ತು ವಿಮರ್ಶಕರಲ್ಲಿ ಮೂಡಿಸಿರುವುದು ಕಂಡುಬರುತ್ತದೆ. ವಚನಗಳು, ದಲಿತ ಕಾವ್ಯ ಹಾಗೂ ಕುಸುಮಬಾಲೆಗೆ ಬಂದ ತತ್‌ಕ್ಷಣದ ವಿಮರ್ಶೆಗಳು ಇದಕ್ಕೆ ಉತ್ತಮ ನಿದರ್ಶನಗಳು. ಹೊಸ ಕವಿತೆ ಅಥವಾ ಸಮಕಾಲೀನ ಕಾವ್ಯವನ್ನು ಕುರಿತು ಅದೇ ಸಂದರ್ಭದ ಕವಿಗಳೂ ಅಸಮಾಧಾನ ಹೊರಹಾಕಿರುವುದನ್ನು ಕಾಣಬಹುದು. ಇದು ಅಧ್ಯಯನ ಯೋಗ್ಯ; ಅಷ್ಟೇ ಅಲ್ಲ, ಕುತೂಹಲಕಾರಿ ವಿಷಯವಾಗಿದೆ. ಪ್ರಾಚೀನ ಕಾವ್ಯ ಸಂದರ್ಭದಲ್ಲಿ ಅದರಲ್ಲೂ ಚಂಪೂ ಕವಿಗಳು ತಮ್ಮ ಸ್ವಕಾವ್ಯದ ಅಗ್ಗಳಿಕೆ, ಸುಕವಿ ಪ್ರಶಂಸೆ ಹಾಗೂ ತಮ್ಮ ಕಾವ್ಯದ ಅನನ್ಯತೆಯನ್ನು ಕುರಿತು ಹೇಳುವಾಗ ‘ಕುಕವಿನಿಂದೆ ಮತ್ತು ಹೊಸ ಕಾವ್ಯದ ಬಗೆಗಿನ ಧೋರಣೆಗಳನ್ನು ಹೊರಹಾಕಿದ್ದಾರೆ.

"ಉಡುಗಿದುದೀಗಳೀಗಳಿನ ಕಬ್ಬದೊಳೊಟ್ಟಜೆ ಕೆಟ್ಟುದೀಗಡೀ
ಗಡಿನ ಕವಿವ್ರಜಕ್ಕೆ ಪದಸಂಚಯಮಂಚಿರಮಾದುದೀಗಡೀ
ಗಡಿನ ಕಥಾನ್ವಯಕ್ಕೆ ರಸಮುಂ ಪೊಸಗಬ್ಬಮಪೂರ್ವಮಾವುವು
ಳ್ದೊಡಮವು ಪೇೞ್ದು ಸಾಧಿಸಿದ ಕಬ್ಬಮೆ ದಲ್ ಕವಿಚಕ್ರವರ್ತಿಯಾ"[೧೩]

ಈಗಿನ ಕವಿಗಳಿಗೆ ಪದಸಂಪತ್ತು ಇಲ್ಲವಾಗಿದೆ; ಅವರು ಶಬ್ದದಾರಿದ್ರ್ಯವುಳ್ಳವರು. ಆದ್ದರಿಂದ ಅವರ ಕಾವ್ಯದಲ್ಲಿ ಒಟ್ಟಂದವೇ ಕಾಣಿಸುವುದಿಲ್ಲ ಎಂಬುದು ಪೊನ್ನನ ಅಭಿಪ್ರಾಯ. ರನ್ನನು ಕೂಡ ಹಿಂದಿನ ಮತ್ತು ತನ್ನ ಸಮಕಾಲೀನ ಸಂದರ್ಭದಲ್ಲಿ ರಚನೆಯಾಗಿರುವ ಕಾವ್ಯಗಳನ್ನು ಹೋಲಿಕೆ ಮಾಡಿ ನೋಡಲಿ ಎಂದು ಸವಾಲು ಹಾಕುತ್ತಾನೆ.

"ಕವಿಗಳೊಳಾ ಪುರಾಣ ಕವಿಪುಂಗವರೊಳ್ಳಿದರೀಗಳಿಲ್ಲ ಸ
ತ್ಕವಿಗಳೆನಲ್ಕೆವೇಡವರ ಪೋದೊಡವಂದಿರ ಕಬ್ಬಮಿನ್ನುಮಿ
ರ್ಪುವು ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾವೆ ಪೇ
ಟಿವೆ ಬುಧರಿರ್ದು ನೋೞ್ಪುದು ಪುರಾತನ ನೂತನಕಾವ್ಯರೇಖೆಯಂ"[೧೪]

ಎಂದು ತನ್ನ ಹಿಂದಿನ ಪರಂಪರೆಯ ಕವಿಗಳು ಒಳ್ಳೆಯವರು, ಶಕ್ತರು; ಈಗಿನ ಕವಿಗಳು ಒಳ್ಳೆಯ ಕವಿಗಳಲ್ಲ ಎಂಬ ನಿಲುವನ್ನು ತಾಳುತ್ತಾನೆ. ರನ್ನನಿಗೆ ಇರುವ ಹಾಗೆಯೇ ಪರಂಪರೆ ಮತ್ತು ಸಮಕಾಲೀನ ಸಂದರ್ಭದ ಕವಿ ಮತ್ತು ಕಾವ್ಯಗಳ ಬಗೆಗೆ ಪ್ರಸ್ತುತ ಸಂದರ್ಭದ ಕವಿ ವಿಮರ್ಶಕರಲ್ಲೂ ಈ ರೀತಿಯ ದ್ವಂದ್ವ ನಿಲುವುಗಳಿರುವುದನ್ನು ಕಾಣಬಹುದು.

"ಛಂದಮಿದಾವುದೆಂದೊಜೆವರ್ ಪದಬಂಧದೊಳೀ ಪ್ರಯೋಗ ಮಂ
ತೆಂದೊಡೆ ಬಯ್ವರಾವ ಕವಿಮಾರ್ಗಮಿದೆಂದೊಡೆ ಪೊಯ್ವರರ್ಥಮೇ
ನೆಂದೊಡೆ ತೊಂಡುಭಂಡುಗೆಡೆದುಟ್ಟು ದನಿಕ್ಕುವರಾವ ನೀತಿ ಪೇ
ಟೆಂದೊಡೆ ಕೊಲ್ವರೀಗಳಿನ ದೇಸಿಗೆ ಬಿಟ್ಟ ಮಹಾಕವೀಶ್ವರರ್"[೧೫]

ಸಮಕಾಲೀನ ಕಾವ್ಯದ ಬಗ್ಗೆ ವಿಮರ್ಶೆ ಮಾಡಿದರೆ ಕವಿಗಳ ವರ್ತನೆ ಹೇಗಿರುತ್ತದೆ? ಮತ್ತು ಆ ಕಾವ್ಯದ ಛಂದಸ್ಸು, ಬಂಧ, ಪ್ರಯೋಗ, ಧೋರಣೆ, ಆಶಯಗಳ ಬಗ್ಗೆ ಪ್ರಶ್ನಿಸಿದಾಗ ಕವಿಗಳ ಪ್ರತಿಕ್ರಿಯೆ ಹೇಗಿರುತ್ತದೆ? ಎಂಬುದನ್ನು ಮೇಲಿನ ಪದ್ಯ ವಿವರಿಸುತ್ತದೆ.

"...'ಸೂಕ್ತಿ ಸುಧಾರ್ಣವ'ದ ಪದ್ಯ ರಚನೆಗೊಂಡ ಕಾಲದಲ್ಲಿ ಮುನ್ನೆಲೆಗೆ ಬಂದದ್ದು ವಚನಗಳು. ವಚನಕಾರರನ್ನು ಕುರಿತೇ ಆ ಪದ್ಯ 'ಈಗಿನ ರೂಢಿಗೆ ಬಿದ್ದ ಕವೀಶ್ವರರು' ಎಂದು ಲೇವಡಿ ಮಾಡುತ್ತಿದೆ ಎನ್ನಿಸುತ್ತದೆ."[೧೬]

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿಯೂ ಹಳೆಯ ಮತ್ತು ಹೊಸ ತಲೆಮಾರಿನ ಕವಿಗಳ ನಡುವೆ ಸಮಕಾಲೀನ ಕಾವ್ಯದ ಧೋರಣೆಗಳಿಗೆ ಸಂಬಂಧಿಸಿದಂತೆ ಚರ್ಚೆಗಳು ನಡೆದಿವೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಕಾವ್ಯದ ಧೋರಣೆ, ಅನನ್ಯತೆಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ.

ಹೊಸ ಕಾವ್ಯದ ಬಗ್ಗೆ ಹಿರಿಯ ತಲೆಮಾರಿನ ಕೆಲವರಿಗೆ ಒಂದು ರೀತಿಯ ಅತೃಪ್ತಿ ಇದ್ದರೂ, ಹಲವರು ಕಿರಿಯ ಕವಿಗಳನ್ನು ಬೆನ್ನು ತಟ್ಟಿ ಕೈ ಹಿಡಿದು ನಡೆಸಿದ್ದಾರೆ. ಕಿರಿಯ ತಲೆಮಾರಿನ ಕವಿಗಳು ಹಿರಿಯರ ಕಾವ್ಯದ ಸಿದ್ಧಿಯನ್ನು ಸ್ಮರಿಸುತ್ತಲೇ ಕಟುವಾಗಿ ವಿಡಂಬಿಸಿದ್ದಾರೆ; ಅಷ್ಟೇ ಅಲ್ಲ, ಸೂಕ್ಷ್ಮವಾಗಿ ವಿಮರ್ಶಿಸಿದ್ದಾರೆ. ಈ ರೀತಿಯ ಹಿರಿಯ ಮತ್ತು ಕಿರಿಯ ಕವಿಗಳ ಅರ್ಥಪೂರ್ಣ ವಾಗ್ವಾದಗಳು ಆಯಾ ಸಮಕಾಲೀನ ಕಾವ್ಯದ ಅಧ್ಯಯನಕ್ಕೆ ಹೊಸ ಒಳಹುಗಳನ್ನು ನೀಡುತ್ತವೆ.

ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ನವೋದಯ ಕವಿಗಳು ತನ್ನ ಹಿಂದಿನ ಕಾವ್ಯದ ಸ್ವರೂಪ ಮತ್ತು ಧೋರಣೆಗಳನ್ನು ಸಾರಾಸಗಟಾಗಿ ತಿರಸ್ಕರಿಸದೆ, ಪ್ರಾಚೀನ ಕಾವ್ಯದಲ್ಲಿನ ಕೆಲವು ಒಳ್ಳೆಯ ವಿಚಾರಗಳನ್ನು ಸ್ವೀಕರಿಸುವ ಜೊತೆಗೆ ಪಾಶ್ಚಾತ್ಯ ಕಾವ್ಯದ ವಸ್ತು ಮತ್ತು ಧೋರಣೆಗಳನ್ನು ಸ್ವೀಕಾರ ಮಾಡಿದ್ದಾರೆ. ಆದರೆ ಪಾಶ್ಚಾತ್ಯರ ರಮ್ಯವಾದ(ರೊಮ್ಯಾಂಟಿಸಿಸಮ್)ವನ್ನು ಕುರುಡಾಗಿ ಒಪ್ಪಿಲ್ಲ. ಪಾಶ್ಚಾತ್ಯರ ರಮ್ಯವಾದಕ್ಕೂ, ಕನ್ನಡದ ನವೋದಯಕ್ಕೂ ವಸ್ತು, ಆಶಯ, ಧೋರಣೆಗಳಲ್ಲಿ ಕೆಲವು ತಾತ್ವಿಕ ವ್ಯತ್ಯಾಸಗಳಿವೆ.

"...ಈ ಸಂದರ್ಭದಲ್ಲಿ ಹೊಸ ಕವನಗಳ ವಿಷಯವಾಗಿ ಒಂದೆರಡು ಮಾತು ಹೇಳಬಹುದು. ಹಿಂದಿನ ಕವಿಗಳು ಜೀವನದ ಕೆಲವು ಸಂಗತಿಗಳನ್ನು ಮಾತ್ರ ಕಾವ್ಯವಸ್ತುವನ್ನಾಗಿ ಇಟ್ಟುಕೊಳ್ಳುತ್ತಿದ್ದರು. ಈಗಿನವರು ಜೀವನದ ಎಲ್ಲ ವಸ್ತುಗಳನ್ನೂ, ಅದರಲ್ಲಿಯೂ ಹಿಂದಿನವರು ತಾತ್ಸಾರ ಮಾಡಿಬಿಟ್ಟಿದ್ದ ಅಥವಾ ಅವರ ಕಣ್ಣಿಗೆ ಬೀಳದಿದ್ದ ಸಂಗತಿಗಳನ್ನು, ಕಾವ್ಯವಸ್ತುವನ್ನಾಗಿ ಆರಿಸಿಕೊಳ್ಳುತ್ತಾರೆ. ಜೀವನವು ವಿಸ್ತಾರವಾದದ್ದು, ಅಪಾರವಾದದ್ದು; ಕಾವ್ಯದೃಷ್ಟಿಯಿಂದ ನೋಡಬಲ್ಲವರಿಗೆ ಎತ್ತ ನೋಡಿದರತ್ತ ಕಾವ್ಯಕ್ಕೆ ತಕ್ಕ ವಸ್ತುವು ಕಣ್ಣಿಗೆ ಬೀಳಬಹುದು."[೧೭]

"...ಆ ಭಾವಗಳು ಹೊಸವು, ಜನರು ತಿಳಿಯಬೇಕಾದವು ಎಂದು ಕವಿಗೆ ತೋರಿದಾಗ ಆತನು ಅವನ್ನು ವ್ಯಕ್ತಗೊಳಿಸಲು ಪ್ರಯತ್ನಿಸುತ್ತಾನೆ. ಈ ತೆರೆದ ಭಾವಗಳನ್ನು ವ್ಯಕ್ತಗೊಳಿಸಲು ಹಿಂದಿನ ಪದ್ಯರೂಪಗಳು ಸರಿ ಹೋಗುವುದಿಲ್ಲ; ಈ ಹೊಸ ಭಾವಗಳಿಗೂ ಆ ಹಳೆಯ ಪದ್ಯ ರೂಪಗಳಿಗೂ ಹೊಂದಿಕೆಯಾಗುವುದಿಲ್ಲವೆಂದು ಕವಿಗೆ ತೋರಿದಾಗ ಹೊಸ ಪದ್ಯರೂಪಗಳನ್ನು ಕವಿಯು ಕಲ್ಪಿಸಿಕೊಳ್ಳುತ್ತಾನೆ. ಹಳೆಯ ಪದ್ಯರೂಪಗಳು ಪರಿಚಿತವಾದುವು; ಅವುಗಳ ನಿಯಮವು ಗೊತ್ತಾದದ್ದು, ಸ್ಪಷ್ಟವಾದದ್ದು. ಹೊಸ ಪದ್ಯರೂಪಗಳು ಜನರಿಗೆ ಅಪರಿಚಿತವಾದುವು. ಅವುಗಳ ನಿಯಮವು ಗೊತ್ತಾಗದಿದ್ದದ್ದು; ಆದಕಾರಣವೇ ಅಸ್ಪಷ್ಟವಾದದ್ದು. ಪದ್ಯರಚನೆಯ ವಿಷಯದಲ್ಲಿ ಈಗಿನ ಕವಿಗಳು ಸ್ವಾತಂತ್ರ್ಯವನ್ನು ವಹಿಸಿದ್ದರೂ ಸ್ವೇಚ್ಛಾಚಾರಿಗಳಲ್ಲ; ಅವರೂ ಛಂದಶಾಸ್ತ್ರದ ಮೂಲತತ್ವಗಳಿಗೆ ವಿರೋಧವಲ್ಲದ ಕೆಲವು ನಿಯಮಗಳನ್ನು ಇಟ್ಟುಕೊಂಡೇ ಪದ್ಯಗಳನ್ನು ರಚಿಸಿರುತ್ತಾರೆ. ಆದಕಾರಣ ಗೊತ್ತಾದ ರೂಪದಲ್ಲಿಲ್ಲವೆಂಬ ಮಾತ್ರದಿಂದ ಅವು ಪದ್ಯಗಳೇ

ಅಲ್ಲವೆಂದು ಸಿದ್ಧಾಂತ ಮಾಡಿಬಿಡುವುದಕ್ಕೆ ಬದಲಾಗಿ ಸ್ವಲ್ಪ ವಿಚಾರ ಮಾಡಿ ನೋಡಿದರೆ ಅವುಗಳ ರಚನಾನಿಯಮವೂ ಸ್ಪಷ್ಟವಾಗಿ ಕಂಡುಬರುವುದು."[೧೮]

ಟಿ.ಎಸ್. ವೆಂಕಣ್ಣಯ್ಯ ಅವರು ಕಿರಿಯ ಕವಿಗಳ ಕಾವ್ಯದ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸುತ್ತಿರುವುದನ್ನು ಇಲ್ಲಿ ಕಾಣಬಹುದು. ಆಗತಾನೇ ಕಾವ್ಯಕ್ಷೇತ್ರಕ್ಕೆ ಪ್ರವೇಶ ಮಾಡುವ ಕಿರಿಯರ ಕವಿತೆಗಳನ್ನು ಸಿದ್ಧಾಂತಗಳ ತಕ್ಕಡಿಯಿಂದ ತೂಗಿ ನೋಡದೆ ಕಾವ್ಯದ ಹೊಸದಾರಿಯ ಕಡೆ ನಡೆಯಲು ಅನುವು ಮಾಡಿಕೊಡಬೇಕು. ಇದಕ್ಕೆ ಕಿರಿಯರ ಕವಿತೆಗಳನ್ನು ಓದುವ ತಾಳ್ಮೆ, ತರುಣಕವಿಗಳ ಬಗ್ಗೆ ಪ್ರೀತಿ ಮತ್ತು ಮುಕ್ತ ಸಂವಾದಕ್ಕೆ ಅವಕಾಶ ಕಲ್ಪಿಸಿಕೊಡುವ ಸಹೃದಯತೆ ಬೇಕು ಎಂದು 'ಕಾಣಿಕೆ' ಕೃತಿಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಹೀಗೆ ಕಿರಿಯರನ್ನು ಪ್ರೋತ್ಸಾಹಿಸಿ, ಹಾರೈಸಿದರೆ ಹೊಸ ಕಾವ್ಯದ ಸೃಷ್ಟಿ ಸಾಧ್ಯವಾಗುತ್ತದೆ ಎಂಬುದು ಟಿ.ಎಸ್. ವೆಂಕಣ್ಣಯ್ಯನವರ ನಿಲುವು. ಇಂಥ ಮಾರ್ಗದರ್ಶಿ ರೂಪದ ಹಾರೈಕೆಯ ಮಾತುಗಳು ಕಿರಿಯ ಕವಿಗಳಿಗೆ ಅತ್ಯಾವಶ್ಯಕ; ಅಷ್ಟೇ ಅಲ್ಲ, ಅಪರಿಚಿತರಿಗೆ ದಾರಿದೀಪ.

ಕುವೆಂಪು ಅವರು ೨೦ನೆಯ ಶತಮಾನದ ಮಧ್ಯಭಾಗದಲ್ಲಿ ಮಹಾಕಾದಂಬರಿಗಳೂ ನಾಟಕಗಳೂ ರಚನೆಯಾದಂತೆ 'ಮಹಾಕೃತಿ' ಎಂಬ ಹೆಸರಿಗೆ ಅರ್ಹವಾಗುವ 'ಚಿರಕಾವ್ಯ' ಯಾಕೆ ಸೃಷ್ಟಿಯಾಗಿಲ್ಲ ಎಂದು ಪ್ರಸ್ತಾಪಿಸುತ್ತ; ತರುಣಕವಿಗಳ ಬಗೆಗೆ ಭರವಸೆಯನಿಟ್ಟು, ಆಶಾವಾದವನ್ನು ವ್ಯಕ್ತಪಡಿಸುತ್ತಾರೆ.

"ಇಂದಿನ ಕಿಶೋರ ಕವಿಗಳ ಬರಹದಲ್ಲಿ ಬಹುಪಾಲು ಅನುಕರಣವಾದರೂ ಅದು ಹಲವರಲ್ಲಿ ತೋರುವ ಒಂದು ಅತಿ ಲಘು ಮನೋಧರ್ಮವೂ ಸುಲಭ ಪ್ರಶಂಸೆಗೆ ಹಾತೊರೆಯುವ ಶ್ರಮವಂಚನಾಬುದ್ಧಿಯೂ ಮತಿಗೌರವ ಸಾಲದ ಸ್ವಾತಂತ್ರ್ಯಭ್ರಾಂತಿ ಮಾತ್ರವಾಗಿರುವ ಅತಂತ್ರತೆಯೂ ನೆಲದಲ್ಲಿ ಸರಿಯಾಗಿ ಬೇರೂರುವ ಮುನ್ನವೆ, ಪ್ರಾಚೀನ ಕವಿ ಮನೋಫಲವತ್ ಕಾವ್ಯಕ್ಷೇತ್ರಗಳಲ್ಲಿ ಸುಪ್ರತಿಷ್ಠರಾಗಿ ಸರ್ವರಸಗ್ರಹಣಸಾಮರ್ಥ್ಯವನ್ನೂ ರಸತಪಶ್ಶಕ್ತಿಯನ್ನೂ ಸಂಪಾದಿಸುವ ಮೊದಲೆ, ಆಕಾಶಕ್ಕೆ ಬೆಳೆದು ಲೋಕನೇತ್ರ ಕೇಂದ್ರಗಳಾಗಿ ನಿಲ್ಲಬೇಕೆಂಬ ವಟೋಪಮವಾದ ವಟುಮಹತ್ವಾಕಾಂಕ್ಷೆಯೂ ಪ್ರಶಂಸನೀಯವಾದರೂ ಬುಡಭದ್ರತೆಗೆ ಕೊಡಲಿ ಹಾಕಿಕೊಳ್ಳುವ ಆತ್ಮವಿಧ್ವಂಸನೀಯವಾದ ಬಾಲಕಾತುರತೆಯೂ ಕನ್ನಡ ಸಾಹಿತ್ಯ ಶ್ರೇಯೋಕಾಂಕ್ಷಿಗಳಿಗೆ ಅಧೈರ್ಯ ತರುವಂತಿದೆ.

ಆದರೆ ಇದು ಸ್ವಾತಂತ್ರ್ಯ ಸಾಧನೆಯಾದ ಸಂಧಿಕಾಲ. ವ್ಯವಸ್ಥಾಂತರವು ಪ್ರಾರಂಭದಲ್ಲಿ ಅವ್ಯವಸ್ಥೆಗೆ ಎಡೆಗೊಡುವುದು ಅನಿವಾರ್ಯ. ಅದು ಪೂರೈಸಿ ಸುವ್ಯವಸ್ಥೆಗೆ ಬಂದೇ ಬರುತ್ತದೆ. ಆದ್ದರಿಂದ ನಿರಾಶೆಗೆ ಅವಕಾಶವಿಲ್ಲ. ಅಧೈರ್ಯ ಸಲ್ಲ"[೧೯] ಎಂಬ ದೃಢ ನಿಲುವನ್ನು ತಾಳುತ್ತಿರುವುದು ಇಲ್ಲಿ ಗಮನೀಯವಾಗಿದೆ.

ಸ್ವಾತಂತ್ರ್ಯ ಹೋರಾಟ ಸಂದರ್ಭದ ಹೊಸ ಕಾವ್ಯದ ಬಗೆಗಿನ ಕುವೆಂಪು ಅವರ ನಿಲುವು ಕುತೂಹಲಕರವಾಗಿದೆ. ತರುಣಕವಿಗಳ ಬಗ್ಗೆ ಕುವೆಂಪು ಅವರಿಗೆ 'ವಟುಮಹತ್ವಾಕಾಂಕ್ಷೆ'ಯಿದ್ದರೂ

‘ಆತ್ಮವಿಧ್ವಂಸನೀಯವಾದ ಬಾಲಕಾತುರತೆ’ಯ ಬಗ್ಗೆ ಒಂದು ಬಗೆಯ ಆತಂಕ, ಅಧೈರ್ಯವಿದೆ. ಇದಕ್ಕೆ ಕಾರಣ, ಯುವಬರಹಗಾರರಲ್ಲಿ ಸಾಮಾನ್ಯವಾಗಿರುವ ಅನುಕರಣಾ ಮನೋಭಾವ ಹಾಗೂ ‘ಸುಲಭ ಪ್ರಶಂಸೆಗೆ’ ‘ಹಾತೊರೆಯುವ ಶ್ರಮವಂಚನಾಬುದ್ಧಿ’ಯು ಕಿಶೋರ ಕವಿಗಳಲ್ಲಿರುತ್ತದೆ ಎಂಬ ನಂಬಿಕೆ.

ಬೇಂದ್ರೆಯವರು ಗೋಪಾಲಕೃಷ್ಣ ಅಡಿಗ ಅವರ ಮೊದಲ ಕವನಸಂಕಲನ ‘ಭಾವತರಂಗ’ ಕೃತಿಗೆ ಮುನ್ನುಡಿ ಬರೆಯುತ್ತ ಹೀಗೆ ಹೇಳಿದ್ದಾರೆ:

> “...ನಾನು ಕವಿತೆಗಳನ್ನು ಬರೆಯಲು ಪ್ರಾರಂಭಿಸಿದಾಗ
> ಇದ್ದ ಶೈಲಿಯ ಪ್ರಾಯೋಗಿಕತೆ ಇಂದಿನ ಕನ್ನಡ ಅಷ್ಟು
> ಮಟ್ಟಿಗೆ ಇಲ್ಲ. ಒಂದು ಬಗೆಯ ಸಿದ್ಧಶೈಲಿಯಿಂದ
> ನವಕವಿಗಳು ಹೊರಡುತ್ತಾರೆ.”[೨೦]

ಗೋಪಾಲಕೃಷ್ಣ ಅಡಿಗರು ಮೊದಲ ಸಂಕಲನದಲ್ಲಿಯೇ ತಮ್ಮ ಕಾವ್ಯದ ಧೋರಣೆಗಳನ್ನು ಹೇಳಿಕೊಂಡಿದ್ದಾರೆ. ತನ್ನ ಕಾವ್ಯದ ಧೋರಣೆಗಳು ಯಾವಾಗಿರಬೇಕು? ನವೋದಯ ಕಾವ್ಯ ಪರಂಪರೆಯಿಂದ ಬಿಡಿಸಿಕೊಂಡು ಹೊಸ ಕಾವ್ಯಮಾರ್ಗವನ್ನು ಹುಡುಕಾಟ ಮಾಡುವ ಬಗೆ ಯಾವುದು? ಎಂಬ ಇತ್ಯಾದಿ ಪ್ರಶ್ನೆಗಳಿಗೆ ಈ ಕೆಳಗಿನ ಕವಿತೆಯಲ್ಲಿ ಪ್ರಾಯೋಗಿಕ ಉತ್ತರ ಕೊಡಲು ಹಂಬಲಿಸುತ್ತಾರೆ.

> “ಅನ್ಯರೊರೆದುದನೆ ಬರೆದುದನೆ ನಾ ಬರೆಬರೆದು
> ಬಿನ್ನಗಾಗಿದೆ ಮನವು, ಬಗೆಯೊಳಗನೇ ತೆರೆದು
> ನನ್ನ ನುಡಿಯೊಳೆ ಬಣ್ಣ ಬಣ್ಣದಲಿ ಬಣ್ಣಿಸುವ
> ಪನ್ನತಿಕೆ ಬರುವನಕ ನನ್ನ ಬಾಳಿದು ನರಕ.”[೨೧]

ಕನ್ನಡ ಕಾವ್ಯ ಪರಂಪರೆಯ ಮುಖ್ಯಧಾರೆಯಾದ ನವೋದಯ ಕಾವ್ಯದ ಧೋರಣೆಗಳನ್ನು ನಿರಾಕರಿಸುವ ಹವಣಿಕೆ ಇಲ್ಲಿದೆ. ಹೊಸ ಕಾವ್ಯಮಾರ್ಗದ ಹುಡುಕಾಟವನ್ನು ಅನೇಕ ಕವಿಗಳು ಕಾವ್ಯ ಪ್ರಕಾರದಲ್ಲಿಯೇ ಮಂಡಿಸುತ್ತಿರುವುದು ವಿಶೇಷ. ತಮ್ಮ ಕಾಲದ ಧೋರಣೆಗಳನ್ನು ವ್ಯಕ್ತಪಡಿಸಲು ತನ್ನ ಹಿಂದಿನ ಪರಂಪರೆಯ ಕಾವ್ಯದ ನ್ಯೂನತೆಗಳನ್ನು ವಿಡಂಬಿಸುವ, ತಾತ್ವಿಕವಾಗಿ ಪ್ರತಿರೋಧಿಸುವ ಬಗೆ ಇಲ್ಲಿ ತೀಕ್ಷ್ಣವಾದುದು.

ಇನ್ನೊಂದು ಕಡೆ ಗೋಪಾಲಕೃಷ್ಣ ಅಡಿಗ ಅವರು ‘ನಡೆದುಬಂದ ದಾರಿ’ ಕವನ ಸಂಕಲನದ ಮುನ್ನುಡಿಯಲ್ಲಿ ನವೋದಯ ಕಾವ್ಯ ನಿರ್ವಹಿಸಿರುವ ಜವಾಬ್ದಾರಿ ತೀರಿದ್ದು, ಹೊಸ ಕಾವ್ಯವನ್ನು ಕಟ್ಟುವ ಜರೂರಿನ ಬಗ್ಗೆ ಮಾತಾಡಿದ್ದಾರೆ. ಕವಿಯ ಭಾವ ಮತ್ತು ಅನುಭವಗಳು ಸರಳೀಕರಣಗೊಳ್ಳುತ್ತಿರುವ ಆತಂಕ ಒಂದು ಕಡೆಯಾದರೆ, ಕಾವ್ಯಕ್ಕೆ ಮರುಜೀವ ತುಂಬುವ ಮಹತ್ವಾಕಾಂಕ್ಷೆ ಇನ್ನೊಂದು ಕಡೆಗಿದೆ. ಅದಕ್ಕಾಗಿಯೇ ‘ಕಾವ್ಯಕ್ಕೆ ಮತ್ತೆ ವಾಸ್ತವದ

ರಕ್ತದಾನ ನಡೆಯಬೇಕು' ಎನ್ನುತ್ತಾರೆ. 'ಮಣ್ಣಿನ ವಾಸನೆ'ಯಿಲ್ಲದ ಕಾವ್ಯ ಜೀವಂತವಾಗಿರುವುದಿಲ್ಲ. ಈ ಸತ್ಯವನ್ನು ನಿಜವಾದ ಕವಿ ಅರಿಯಬೇಕು ಎಂಬುದು ಗೋಪಾಲಕೃಷ್ಣ ಅಡಿಗರ ಅಭಿಪ್ರಾಯ.

"ಹತ್ತೊಂಬತ್ತನೆಯ ಶತಮಾನದ ಆಂಗ್ಲ ಕವಿಗಳಾದ ವರ್ಡ್ಸ್‌ವರ್ಥ್, ಶೆಲ್ಲಿ, ಕೀಟ್ಸ್ ಮುಂತಾದ ರೊಮ್ಯಾಂಟಿಕ್ ಕವಿಗಳಿಂದ ಪ್ರೇರಿತವಾದ ನಮ್ಮ ಆಧುನಿಕ ಕನ್ನಡ ಕಾವ್ಯ ಆ ಸಂಪ್ರದಾಯದಲ್ಲಿ ತಾನು ಮಾಡಬಹುದಾದಷ್ಟು ಕೆಲಸವನ್ನು ಮಾಡಿ ಮುಗಿಸಿದೆ. ಆ ಸಂಪ್ರದಾಯದ ಸತ್ವ ಈಗ ತೀರಿದೆ, ಅದಕ್ಕೆ ಅವನತಿ ಬಂದಿದೆ. ಅದರ ದೋಷಗಳೆಲ್ಲ ಈಗ ಎದ್ದು ಕಾಣಿಸುತ್ತಿವೆ. ನೆಲದ ಮೇಲೆ ಕಾಲೂರಿ ನಿಂತೇ ನಕ್ಷತ್ರವನ್ನು ಹುಡುಕುತ್ತಿದ್ದುದು ಈಗ ನೆಲ ಬಿಟ್ಟು ಮೇಲೇರಿ ವೇದಾಂತದ ಮಂಜಿನಲಿ ಮರೆಯಾಗಿ ಹೋಗುತ್ತಿದೆ. ಶಬ್ದಗಳು ಅರ್ಥದ ಸ್ಥಾನವನ್ನು ಆಕ್ರಮಿಸುತ್ತಿವೆ. ಪ್ರತಿಯೊಂದು ಭಾವವೂ ಅನುಭವವೂ ಅತಿ ಸರಳವಾಗಿ ಸತ್ಯದಿಂದ ದೂರ ಹೋಗುತ್ತಿದೆ. ಇಂಥ ಕಾಲದಲ್ಲಿ ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯದಲ್ಲಿ ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು. ಈ ಜಗತ್ತನ್ನು ಬಿಟ್ಟು ಕಾವ್ಯ ಬದುಕಲಾರದು ಎಂಬುದನ್ನು ಮತ್ತೆ ಕವಿಗಳು ಅರಿಯಬೇಕಾಗುತ್ತದೆ. ನಿಜವಾದ ಕವಿ ಈ ಮಾತನ್ನು ಎಂದೂ ಮರೆಯುವುದಿಲ್ಲ, ಮರೆಯಲಾರ."[೨೨]

ಯುವಕವಿಗಳ ಅವಸರದ ಬುದ್ಧಿಯನ್ನು ಕುರಿತು ಕೆ.ಎಸ್. ನರಸಿಂಹಸ್ವಾಮಿ ಅವರು ಒಂದು ಪದ್ಯದಲ್ಲಿ ಹೀಗೆ ಹೇಳುತ್ತಾರೆ:

"ಬಿದಿರ ತಡಿಕೆಯ ಹಿಂದೆ ಬಿಚ್ಚಲಾಗದ ಕಣ್ಣು
'ಕವನ ಹುಟ್ಟಿತೆ?' ಎಂದು ಕೇಳುತ್ತಿದೆ.
ನಾನೀಗ ತುಟಿಯಂಚಿನಲ್ಲಿ ಹೇಳಿದ್ದಿಷ್ಟೆ;
ಇನ್ನೊಂದು ದಿವಸ ಕಾದರೆ ನಷ್ಟವೆ?"[೨೩]

ಕಾವ್ಯಸೃಷ್ಟಿಯ ಸಂದರ್ಭದಲ್ಲಿ ಕವಿಗೆ ಎದುರಾಗುವ ತೊಡಕುಗಳು ಹಾಗೂ ಕವಿಮನಸ್ಸಿಗೆ ಅತ್ಯಗತ್ಯವಾಗಿ ಬೇಕಾಗಿರುವ ಧ್ಯಾನಸ್ಥ ಸ್ಥಿತಿಯನ್ನು ಈ ಕವಿತೆಯ ಸಾಲುಗಳು ಹೇಳುತ್ತಿವೆ. "ಕವಿತೆಯ ಸೃಷ್ಟಿ ಸಮಸ್ಯೆಗಳು, ಕವಿ ಎದುರಿಸುವ ತಾಕಲಾಟ, ಅಭಿವ್ಯಕ್ತಿಯ ಪ್ರಶ್ನೆಗಳು, ಅನುಭವದೊಂದಿಗೆ ವ್ಯವರಿಸುವ ಕ್ರಮ, ವ್ಯವಧಾನದ ಸ್ವರೂಪ ಇವುಗಳನ್ನು ಈ ಕವಿತೆ ಹೇಳುತ್ತಿದೆ. ಈ ಕವಿತೆ ಕವಿಯೊಬ್ಬನ ಅಂತರಂಗದಲ್ಲಿ ಏರ್ಪಡುತ್ತಿರುವ ಒಂದು ಸ್ವಗತ."[೨೪] ಇಂಥ ತೊಡಕುಗಳನ್ನು ಕವಿ ನೀಗಿಸಿಕೊಂಡಾಗ ಕಾವ್ಯಸೃಷ್ಟಿ ಸರಾಗವಾಗಬಹುದು ಎಂಬ ನಿಲುವು ಇಲ್ಲಿನದು.

ಯಾವುದೇ ಉತ್ತಮ ಕಾವ್ಯವಾಗಲಿ ಕವಿಯ ಅಂತರಂಗದಲ್ಲಿ ಮಾಗಬೇಕು. ಆಗ ಆ ಕಾವ್ಯಕ್ಕೆ ಹೊಸ ಚೈತನ್ಯಶೀಲತೆ, ಶಕ್ತಿ ಸಂಚಯಗಳು ಪ್ರಾಪ್ತವಾಗುತ್ತವೆ. ಇಂಥ ಕಾವ್ಯವನ್ನು ಸಹಜವಾಗಿ ಎಲ್ಲ ಕಾಲದ ಸಹೃದಯರೂ ಸ್ವೀಕರಿಸುತ್ತಾರೆ.

“...ಬಹುಮಂದಿ ತರುಣರು ಯಾವ ಪೂರ್ವ ಪರಿಶ್ರಮವೂ ಇಲ್ಲದೆ ನೇರವಾಗಿ ಸ್ವಚ್ಛಂದ ಛಂದಸ್ಸಿಗೇ ಧುಮುಕುತ್ತಿರುವುದರಿಂದ, ಸ್ವಚ್ಛಂದ ಛಂದವೆಂದರೆ ಹೇಗೆ ಬೇಕಾದರೂ ಸುಲಭವಾಗಿ ತೆರೆಯಬಹುದಾದ ಒಂದು ವಿಧಾನವೊಂದು ತಿಳಿದುಕೊಂಡ ಹಾಗೆ ತೋರುತ್ತದೆ. ಅದು ಭಾಷೆಯೊಂದಿಗೆ ಕವಿ ನಡೆಯಿಸಿದ ಯಾವ ಹೋರಾಟವೂ ಆಗಿರದೆ, ಸಿದ್ಧಶೈಲಿಯ ಕುರುಡು ಅನುಸರಣೆಯಾಗಿರುವ ನಿದರ್ಶನಗಳು ಸಾಕಷ್ಟು ಸಿಕ್ಕುತ್ತವೆ. ಹಿಂದಿನ ಪದ್ಯಬಂಧ(Stanza Form)ಗಳಲ್ಲಿ ತಕ್ಕಷ್ಟು ಪಳಗಿ ಅದನ್ನು ಮುರಿದು ಮುಕ್ತಛಂದಸ್ಸಿಗೆ ಬಂದವರ ಮಾತು ಬೇರೆ ಅಥವಾ ಪದ್ಯಬಂಧ ಹಾಗೂ ಮುಕ್ತಛಂದ ಎರಡನ್ನೂ ಜೊತೆಗೆ ಕಾಣಿಸಬಲ್ಲವರ ರೀತಿ ಬೇರೆ, ಆದರೆ ಈ ಎರಡರ ಪರಿಶ್ರಮವೂ ಇಲ್ಲದೆ ನೇರವಾಗಿ ಸ್ವಚ್ಛಂದ ಛಂದಸ್ಸಿಗೆ ಇಳಿದವರ ರೀತಿಯೇ ಬೇರೆ. ಪದ್ಯಬಂಧಗಳ ಪರಿಣತಿಯಿಲ್ಲದಿದ್ದರೆ ಹೋಗಲಿ, ಕಡೇಪಕ್ಷ ನವೋದಯ ಮತ್ತು ನವ್ಯ ಕವಿಗಳ ಪದ್ಯಬಂಧ ಹಾಗೂ ಮುಕ್ತಛಂದಗಳ ಪ್ರಾಮಾಣಿಕವಾದ ಕೂಲಂಕಷವಾದ ಅಭ್ಯಾಸವನ್ನಾದರೂ ಮಾಡಿದ್ದರೆ ಕವಿತೆ ಬರೆಯುವಲ್ಲಿ ಕಟ್ಟುವ-ಮುರಿಯುವ ಹದವಾದರೂ ಗೊತ್ತಾಗುತ್ತಿತ್ತು. ಈ ಒಂದು ತಿಳಿವಿನ ಅಭಾವದಿಂದ ಇಂದಿನ ಅನೇಕ ಕವಿತೆಗಳು ತಮ್ಮ ರೂಪಾಂಶದಲ್ಲಿ ಒಂದೇ ಮಾದರಿಯವಾಗಿದ್ದು, ಚರ್ವಿತ ಚರ್ವಣ ತಂತ್ರದಿಂದ ಒಂದು ಬಗೆಯ ಏಕತಾನತೆ(Montony)ಯನ್ನೇ ಪ್ರಕಟಿಸಿ ಬೇಸರ ತರುತ್ತಿವೆ. ಓದಿದವರಲ್ಲಿ ಒಂದು ನೂತನಭಾವ ಪ್ರಚೋದನೆಯನ್ನೋ ಕಡೇಪಕ್ಷ ಒಂದಿಷ್ಟು ತುಮುಲವನ್ನೋ ತಾರದೆ, ವಸ್ತು ರೂಪಗಳಲ್ಲಿ ಏಕತಾನತೆಯನ್ನು ಪ್ರದರ್ಶಿಸುವ ಕಾರಣದಿಂದ ಬೇಸರವನ್ನುಂಟುಮಾಡುವುದು ಸಹಜವಾಗಿದೆ.”[೨೫]

ಜಿ.ಎಸ್. ಶಿವರುದ್ರಪ್ಪನವರು ತರುಣಕವಿಗಳ ಕಾವ್ಯ ರಚನಾವಿಧಾನಗಳ ಬಗ್ಗೆ ಇಲ್ಲಿ ಚರ್ಚಿಸಿದ್ದಾರೆ. ಮುಕ್ತಛಂದಸ್ಸಿನಲ್ಲಿ ಬರೆದ ಮಾತ್ರಕ್ಕೆ ಅದು ಕಾವ್ಯವಾಗಲಾರದು. ಕವಿಗೆ ಪರಿಣತಿ, ಪರಿಶ್ರಮ ಎರಡೂ ಬೇಕು. ಈ ಎರಡೂ ದಕ್ಕಬೇಕಾದರೆ ಮೊದಲು ಪರಂಪರೆಯ ಅರಿವಿರಬೇಕು ಎಂಬುದು ಜಿ.ಎಸ್. ಶಿವರುದ್ರಪ್ಪ ಅವರ ಅಭಿಮತ. ಕವಿ ಸೃಷ್ಟಿಸಿದ ಕಾವ್ಯದ ಲಯ, ಭಾಷೆ, ವಸ್ತುವಿನ ಅನನ್ಯತೆಗಳು ಓದುಗರಲ್ಲಿ ಹೊಸ ಭಾವವನ್ನು ಉಂಟುಮಾಡಬೇಕು ಎಂಬುದು ಇವರ ನಿಲುವು.

ಡಿ.ಆರ್. ನಾಗರಾಜ್ ಅವರು ನವ್ಯ ಮತ್ತು ದಲಿತ-ಬಂಡಾಯ ಕಾವ್ಯದ ಬಗೆಗೆ ಎತ್ತುವ ಪ್ರಶ್ನೆಗಳು ತುಂಬಾ ಮುಖ್ಯವಾದವು; ಅಷ್ಟೇ ಅಲ್ಲ, ಗಂಭೀರವಾದವು.

“ಈಚಿನ ವರ್ಷಗಳ ಕನ್ನಡ ಕಾವ್ಯದ ಫಸಲನ್ನು ನೋಡಿದರೆ ನಮ್ಮ ಮಧ್ಯಮವರ್ಗ ಅನುಭವಿಸುತ್ತಿರುವ ಬಿಕ್ಕಟ್ಟು ಸ್ಪಷ್ಟವಾಗುತ್ತದೆ. ಒಟ್ಟಾರೆಯಾಗಿ, ಇದು ನಮ್ಮ ಇಡೀ ಸಂಸ್ಕೃತಿ ಎದುರಿಸುತ್ತಿರುವ ಬಿಕ್ಕಟ್ಟು ಹೌದು. ಇದು ತಾತ್ವಿಕತೆ ಹಾಗೂ ಸೃಜನಶೀಲತೆಯ ಬಿಕ್ಕಟ್ಟು. ನವ್ಯಕಾವ್ಯ ಮಾರ್ಗದ ಈಚಿನ ವರ್ಷಗಳ ಕೃತಿಗಳನ್ನು ನೋಡಿದರೆ ಈ ಮಾತು ಸ್ಪಷ್ಟವಾಗುತ್ತದೆ.

ನವ್ಯಕಾವ್ಯ ಮಾರ್ಗದಲ್ಲಿ ಅತ್ಯಂತ ಲವಲವಿಕೆಯಿಂದ ಬರೆಯುವ ಜನರ ಕಾವ್ಯಬಂಧ ಕೂಡಾ ಒಂದು ಸಣ್ಣ ಒಳನೋಟ, ದೃಶ್ಯಿಕ ಅನುಭವ, ಚುರುಕಾದ ತಿರುವು ಇಷ್ಟಕ್ಕೆ ಸೀಮಿತ. ತೋಟದ ಹೊರಗೆ ಶೃಂಗಾರ, ಒಳಗೆ ಗೋಣಿಸೊಪ್ಪು. ಈ ಕಾವ್ಯಬಂಧ ಎಷ್ಟೊಂದು ತೆಳುವು? ತೀವ್ರವಾದದ್ದನ್ನು, ಸಾಂದ್ರವಾದದ್ದನ್ನು ಅಲ್ಲಿ ಕಾಣಲು ಸಾಧ್ಯವಿಲ್ಲ."[೨೬]

ಇಲ್ಲಿ ಡಿ.ಆರ್. ನಾಗರಾಜ್ ಅವರು ನವ್ಯಕಾವ್ಯದಲ್ಲಿನ ಏಕಾಕಿತನ, ಸಾಮಾನ್ಯರಿಗೆ ಅರ್ಥವಾಗದ, ಕ್ಲಿಷ್ಟವಾದ ಉಪಮೆ, ರೂಪಕಗಳ ಬದಲಿಗೆ; ಜನರ ನೋವಿಗೆ ಮಿಡಿವ ಅಪೇಕ್ಷೆ ಹೊಂದಿದ್ದ ದಲಿತ ಕಾವ್ಯವು ಕೂಡ ಆಕ್ರೋಶದ ಮಟ್ಟದಲ್ಲೇ ವ್ಯಕ್ತಗೊಳ್ಳುವ, 'ಎಲ್ಲರ ಮಾತು ಒಬ್ಬರಲ್ಲಿ ಬೆರೆತು ಹೋಗುವ' ಅಪಾಯವನ್ನು ಕುರಿತು ಚರ್ಚಿಸಿದ್ದಾರೆ.

'ಯಾರನ್ನೇ ಓದಿದರೂ ಒಂದೇ ಪಠ್ಯ ಓದಿದಂತೆ ಅನ್ನಿಸುತ್ತದೆ' ಎಂಬ ಮಾತಿನ ಅರ್ಥ ದಲಿತ ಕಾವ್ಯ ಬರೀ ಆಕ್ರೋಶದ ಮಾದರಿಯಲ್ಲಿ ರಚನೆಗೊಳ್ಳುತ್ತಿರುವ ಸರಳೀಕರಣಕ್ಕೆ ಸಂಬಂಧಿಸಿದ್ದು.

ಅದಕ್ಕೆ ಅವರು ದಲಿತ ಕಾವ್ಯವನ್ನು ಕುರಿತು ಈ ರೀತಿ ಹೇಳುತ್ತಾರೆ:

"...ದಲಿತ ಕಾವ್ಯದಲ್ಲಿ ದಲಿತ ಲೋಕವೇ ಕಾಣೆಯಾಗಿದೆ. ದಲಿತ ಸಂಸ್ಕೃತಿಯ ಸೂಕ್ಷ್ಮಗಳು, ನಂಬಿಕೆ, ಪುರಾಣಗಳೇ ಪ್ರೀತಿಯಿಂದ ಬರದ ದಲಿತ ಕಾವ್ಯವನ್ನು ನಾವೀಗ ಕಾಣುತ್ತಿದ್ದೇವೆ. ನಗರದ ಒಬ್ಬ ಬಡವ ಬರೆದದ್ದಕ್ಕೂ ಹಿಂದುಳಿದ ಹಳ್ಳಿಯ ದಲಿತ ಬರೆದದ್ದಕ್ಕೂ ಕಾವ್ಯ ಬಂಧದ ದೃಷ್ಟಿಯಿಂದ ವ್ಯತ್ಯಾಸವೇ ಇಲ್ಲವಾಗಿದೆ. ದಲಿತರ ವಿಶಿಷ್ಟಲೋಕ ಕಾವ್ಯದಲ್ಲಿ ಬರದಿದ್ದಲ್ಲಿ ಅದು ಅಧಿಕೃತ ದಲಿತ ಕಾವ್ಯವಾಗಲಾರದು."[೨೭]

ಇದೇ ಮಾತನ್ನು ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು ಕನ್ನಡ ಕಾವ್ಯ ಸಂದರ್ಭವನ್ನು ಕುರಿತು ಹೇಳುವ ಮಾತಿನಲ್ಲಿ ನಿರಾಶೆ ಮತ್ತು ವಿಷಾದದ ದನಿಯೇ ತುಂಬಿದೆ.

ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು ಕನ್ನಡ ಸಾಹಿತ್ಯದ ಬಿಕ್ಕಟ್ಟನ್ನು ಇಡೀ ಭಾರತೀಯ ಮಟ್ಟದಲ್ಲಿ ಅನ್ವಯಿಸಿ ಹೇಳುವ ಮಾತುಗಳು ಸಹ ೮೦ರ ದಶಕದ ಮಸುಕಾದ ಕನ್ನಡ ಕಾವ್ಯದ ಸ್ಥಿತಿಯನ್ನು ಕುರಿತದ್ದು. ಅವರ ಮಾತುಗಳು ಒಂದು ಜನಾಂಗವನ್ನು ಕಣ್ಣು ತೆರೆಸುವಂತಹ ಹಾಗೂ ಪರಂಪರೆಯನ್ನು ರೂಪಿಸುವಂತಹ ಕವಿಯನ್ನು ನಿರೀಕ್ಷಿಸುತ್ತಿದೆ.

"ಕನ್ನಡದಲ್ಲಿ ಮಾತ್ರವಲ್ಲ, ಭಾರತದ ಎಲ್ಲಾ ಭಾಷೆಗಳಲ್ಲಿ ಇಂದು ಕಾವ್ಯದ ಗುಣಮಟ್ಟದ ಬಗ್ಗೆ ನಿರಾಶೆ ತುಂಬಿದೆ. ಬೇಕಾದಷ್ಟು ಕಾವ್ಯಸಂಗ್ರಹಗಳು ಪ್ರಕಟವಾಗುತ್ತಿವೆ. ಪತ್ರಿಕೆಗಳಲ್ಲಿ, ಪ್ರಸಾರ ಮಾಧ್ಯಮಗಳಲ್ಲಿ ಪ್ರಕಟವಾಗುವ, ಪ್ರಸಾರವಾಗುವ ಕವಿತೆಗಳಿಗೂ ಕೊರತೆಯಿಲ್ಲ. ಆದರೂ ಹೇಳಿಕೊಳ್ಳುವಂಥ ಕವನಸಂಗ್ರಹಗಳಾಗಲಿ, ಎದ್ದು ಕಾಣುವಂಥ ಕವಿಗಳಾಗಲಿ, ಜೀವನ ದರ್ಶನವಾಗುವಂಥ ಒಂದು ಪರಂಪರೆಯಾಗಲಿ ಕಾಣದಿರುವುದು ವಿಷಾದದ ಸಂಗತಿ."[೨೮]

ನವ್ಯದ ಉಚ್ಛ್ರಾಯದಲ್ಲಿ ಕಾವ್ಯ ರಚಿಸಿಯೂ ನವ್ಯಕಾವ್ಯದ ಧೋರಣೆಗಳನ್ನು ಸಂಪೂರ್ಣವಾಗಿ ನಿರಾಕರಿಸದೆ, ಚಂಪಾ ಅದನ್ನು ವಿಡಂಬಿಸುವ ಬಗೆ ಹೀಗಿದೆ:

"ಹೋಗಿ ಬತ್ತೀನಜ್ಜಾ ಹೋಗಿ ಬತ್ತೀನಿ
ಎಷ್ಟು ದಿನ ನಿನ್ನ ಮೊಮ್ಮಗನೇ ಆಗಿರ್ತೀನಿ
.......................................................................
ನಿನ್ನ ಪಾದದ ಧೂಳಿ ನನ್ನ ಹಣೆ ಮೇಲಿರಲಿ
ಕಣ್ಣೊಳಗೆ ಮಾತ್ರ ಬೀಳದಿರಲಿ"[೨೯]

ಇದೇ ರೀತಿ ಎಂಬತ್ತರ ದಶಕದ ಕೊನೆಯ ಕಾಲಘಟ್ಟ ಅಂದರೆ ದಲಿತ ಬಂಡಾಯೋತ್ತರ ಕನ್ನಡ ಕಾವ್ಯವು ಓದುಗರಲ್ಲಿ ಉಂಟುಮಾಡಿರುವ ದ್ವಂದ್ವಾತ್ಮಕ ನಿಲುವು ಮತ್ತು ಗೊಂದಲಗಳನ್ನು ಕಿ.ರಂ. ನಾಗರಾಜ ಅವರು ಚರ್ಚಿಸಿರುವ ಬಗೆ ಹೀಗಿದೆ. "ಕನ್ನಡ ನಾಡಿನಲ್ಲಿ ಈ ಹೊತ್ತು ಪ್ರಕಟವಾಗುತ್ತಿರುವ ಕವನಸಂಕಲನಗಳು, ಪದ್ಯದ ಸಂಕಲನಗಳು, ಬಿಡಿಪದಗಳು, ಹನಿಗವನಗಳು, ಹಾಡುವುದಕ್ಕಾಗಿಯೇ ತೀಡಿದ ಪದ್ಯಗಳು ಅಸಂಖ್ಯಾತ ಪ್ರಮಾಣದಲ್ಲಿವೆ. ಇಷ್ಟೊಂದು ಪ್ರಮಾಣದ ರಚನೆಗಳ ಮಧ್ಯೆ ಕವಿತೆಯ ಓದುಗ ಒಂದು ರೀತಿಯಲ್ಲಿ ತಬ್ಬಿಬ್ಬಾಗಿದ್ದಾನೆ. ನಿಜವಾದ ಕವಿತೆ ಯಾವುದು ಎಂಬುದನ್ನು ಖಚಿತಪಡಿಸಿಕೊಳ್ಳಲು ಓದುಗ ಏನು ಮಾಡಬೇಕು ಮುಂತಾದ ಪ್ರಶ್ನೆಗಳು ನಮಗೆ ಎದುರಾಗುವುದು ಸಹಜ. ಪ್ರತಿಭಾವಂತ ಗಾಯಕರಿಂದ ಕವಿತೆಯೂ ಅಲ್ಲದ, ಹಾಡೂ ಅಲ್ಲದ ರಚನೆಗಳು ದಿನನಿತ್ಯ ರೇಡಿಯೋ, ಟಿ.ವಿ.ಗಳ ಮೂಲಕ ಬಿತ್ತರಗೊಳ್ಳುತ್ತಲಿದೆ."[೩೦]

ಓದುಗ ಮತ್ತು ವಿಮರ್ಶಕರು ಜನಪ್ರಿಯತೆಯ ಗೀಳಿನಿಂದ ಗಂಭೀರವಾದ ಕಾವ್ಯವನ್ನು ನಿರ್ಲಕ್ಷಿಸುವ ಅಪಾಯವನ್ನು ಕುರಿತು ಇಲ್ಲಿ ಕಿ.ರಂ. ನಾಗರಾಜ ಅವರು ವಿವೇಚಿಸುತ್ತಿದ್ದಾರೆ. ಕಾವ್ಯದ ಹೆಸರಿನಲ್ಲಿ ಬರೆದು ರಾಶಿ ಹಾಕುವ ಅಸಂಖ್ಯಾತ ರಚನೆಗಳ ನಡುವೆ ನಿಜವಾದ ಕಾವ್ಯ ಓದುಗರಿಗೆ ಕಾಣಿಸದಿರುವ, ದೊರಕದಿರುವ ಸಂದಿಗ್ಧತೆಯ ಬಗ್ಗೆ ಆಲೋಚಿಸುತ್ತಿದ್ದಾರೆ.

"ಗೆಳೆಯಾ-
ಬಿಡು, ಊಹೆ ವಿಮಾನದಲಿ ಕುಳಿತು
ಉಪಮೆ ಅಲಂಕಾರದ ಉಪ್ಪು ಖಾರ ಹಚ್ಚಿದ-
ನುಡಿ- ಟೈಂಪಾಸು ಬಟಾಣಿಯಂತೆ ಮೆಲ್ಲುತ
ಪ್ರಕೃತಿಯನು ವರ್ಣಿಸುತ
ಶುದ್ಧ ಅಶುದ್ಧ ಸಿದ್ಧ ವಸ್ತುಗಳ 'ಬೂಸಾ' ತಯಾರಿಕೆಯ
ಸಾಕು, ತಣ್ಣನೆಯ ತಿಂಗಳ ತಂಗಳ ಸಾಹಿತ್ಯ ಸಾಕು
ಈಗ ಸೂರ್ಯ ಸೃಷ್ಟಿಬೇಕು
ಬಿಳಿಹಾಳೆಯ ಮೇಲೆ ಕಪ್ಪು ಅಕ್ಷರದ ರಾಜಿ ಬರಹ-
ಬರೆಯುತ, ಯಾರದೋ ಕುಶಾಮತ್ತಿಗೆ, ಹೊಗಳಿಕೆಗೆ
ಅಗದಿ ವಂದಿಮಾಗಧ ಉದ್ದಾಮ ಮುದ್ದಾಮ-

ಪಂಡಿತನಾಗುತ, ಅಂತರ್ಲಾಗ ಹಾಕುತ
ವಿರೋಧಾಭಾಸದ ಡಿಗ್ಗಿ ಡಿಗ್ಗಿ
ಬನಿಯಾ ಮಾರ್ವಾಡಿ ಖಾತೆ-ಸಾಹಿತ್ಯ ಸಾಕು
ಸದಾ ಬಚ್ಚಲುಕೋಣೆ ಜಗತ್ತಿನ ಬಾಗಲಿಗೆ
ಮೆತ್ತಿಕೊಂಡಿರುವ
ಕಣ್ಣು ಕಿತ್ತಿಕೊಂಡು, ಶುದ್ಧ ಬುದ್ಧ ಹೃದಯದಿಂದ
ನೀನು ನಿಂತಿರುವ ಈ ನೆಲೆಯನು, ಈ ನೆಲವನು
ಬೆದುಕು, ಕೆದುಕು
ಕಂಡರೆ ಕಂಡೀತು
ಧಗಾಬಿದ್ದ ನಮ್ಮ ಅಧೋಜಗತ್ತಿನ ಅಕಾವ್ಯ"[೩೦]

ಉಪಮೆ ಅಲಂಕಾರಗಳನ್ನು ತುಂಬಿಕೊಂಡು ಶುದ್ಧ-ಅಶುದ್ಧಗಳ ತರ್ಕದಲ್ಲಿ ವಿಮಾನವೇರಿರುವ, ಜನಸಾಮಾನ್ಯರಿಂದ ದೂರವೇ ಉಳಿದಿರುವ ಕಾವ್ಯವನ್ನು ಜಂಬಣ್ಣ ಅಮರಚಿಂತ ಅವರು ವಿಡಂಬಿಸುತ್ತಿದ್ದಾರೆ. ಜೊತೆಗೆ ಪ್ರತಿಮೆ, ಸಂಕೇತಗಳಿಂದ ರಚನೆಗೊಂಡು ಸಾಮಾನ್ಯ ಓದುಗರನ್ನು ದೂರ ಇಟ್ಟಿರುವ ಕಾವ್ಯಪರಂಪರೆಯನ್ನು ಕವಿ ಇಲ್ಲಿ ವಿಡಂಬಿಸುತ್ತಿದ್ದಾರೆ. ಅಂದರೆ ಜನರ ನೋವಿಗೆ ಮಿಡಿಯುವ ಕಾವ್ಯದ ಬಗ್ಗೆ ಹೆಚ್ಚು ನಿರೀಕ್ಷೆ ಇರುವ ಕಾರಣಕ್ಕೆ ಕವಿಮನಸ್ಸು ತನ್ನ ಅಸಮಾಧಾನವನ್ನು ಕವಿತೆಯ ಮೂಲಕ ಹೊರಹಾಕುತ್ತಿದೆ. ಕಾವ್ಯ ಕಾಲಕಾಲಕ್ಕೆ ಬದಲಾಗಬೇಕೆಂಬ ಕವಿಯ ಹಂಬಲ ಮತ್ತು ತುಡಿತಗಳು ಇಲ್ಲಿ ಗಮನೀಯ.

"ಈಗ ಬರೆಯುತ್ತಿರುವ ಯಾರನ್ನೂ ಹಾಗೆ ವರ್ಗೀಕರಿಸಲಾಗುವುದಿಲ್ಲ. ಸುಮ್ಮನೆ ಇಷ್ಟ ಬಂದಂತೆ ಮಾಡುವ ವರ್ಗೀಕರಣ, ವಿಶ್ಲೇಷಣೆಗಳನ್ನು ಬದಿಗಿಟ್ಟು ಕವನಗಳನ್ನು ಅವುಗಳ ಶುದ್ಧ ಕಾವ್ಯಾತ್ಮಕತೆಗೆ ಓದುವುದನ್ನು ಕಲಿತರೆ ಒಳ್ಳೆಯದು. ಸ್ವಲ್ಪ ಬೋಲ್ಡ್ ಆಗಿ ಬರೆದರೆ ಫೆಮಿನಿಸ್ಟ್ ಅಂದು ಬಿಡುವುದು, ಸ್ವಲ್ಪ ರೋಮ್ಯಾಂಟಿಕ್ ಆಗಿ ಬರೆದರೆ ಫೆಮಿನೈನ್ ಅನ್ನುವುದು ಇದನ್ನೆಲ್ಲ ಬಿಡಿ. ಇದೆಲ್ಲ ನಾನ್‌ಸೆನ್ಸ್. ಹೆಣ್ಣು ಎಲ್ಲದರ ಸಂಕೀರ್ಣ ಮಿಶ್ರಣ. ಯಾವುದನ್ನು ಸದಾ ತಿರಸ್ಕರಿಸುವುದೂ ಇಲ್ಲ. ಸದಾ ಪುರಸ್ಕರಿಸುವುದೂ ಇಲ್ಲ. ಒಂದು ಸೆಮಿನಾರಿನಲ್ಲಿ ನಾನು ಹೇಳಿದ ಹಾಗೆ. ಕನ್ನಡದಲ್ಲಿ ಮಹಿಳೆಯರ ಕವನ ಅಂದ ತಕ್ಷಣ ೧೨ನೇ ಶತಮಾನದ ಅಕ್ಕಮಹಾದೇವಿಯಿಂದ ಶುರು ಮಾಡಿ ೧೯ನೇ ಶತಮಾನದ ಸಂಚಿ ಹೊನ್ನಮ್ಮನನ್ನು ಹೆಸರಿಸಿ, ೨೧ನೇ ಶತಮಾನದ ನಮ್ಮನ್ನು ಅವಳ ಪಕ್ಕ ಇಟ್ಟು ನೋಡುವುದು. ಕವನ In General ಅಂದ ಕೂಡಲೇ, ೧೨ನೇ ಶತಮಾನದ ಅಲ್ಲಮನನ್ನು ಕಿಂಚಿತ್ತೂ ನೆನಪಿಸಿಕೊಳ್ಳದೇ, ದಿಢೀರನೆ ಅಡಿಗರಿಂದ ಪ್ರಾರಂಭಿಸುವುದು. ಇಂತಹ ಬೇಕಾದಷ್ಟು ಕಿರಿಕಿರಿಗಳು ನಡೆಯುತ್ತಲೇ ಇದೆ."[೩೧]

ಮಹಿಳಾಕಾವ್ಯವನ್ನು ಈಗಾಗಲೇ ರೂಢಿಯಲ್ಲಿರುವ ಸಿದ್ಧಮಾದರಿಯಲ್ಲಿ ಅಧ್ಯಯನ ಮಾಡುತ್ತಿರುವ ಸಾಂಪ್ರದಾಯಿಕ ಮಾದರಿ ಹಾಗೂ ಮಹಿಳೆಯರ ಕಾವ್ಯವನ್ನು ಪ್ರತ್ಯೇಕಿಸಿ

ನೋಡುವ ಪುರುಷದೃಷ್ಟಿಕೋನವನ್ನು ಪ್ರತಿಭಾ ನಂದಕುಮಾರ್ ಇಲ್ಲಿ ಖಂಡಿಸುತ್ತಿದ್ದಾರೆ. ಕವಯಿತ್ರಿಯರು ತಮ್ಮ ನೋವು ಸಂಕಟಗಳನ್ನು ಕಾವ್ಯದ ಮೂಲಕ ಹೊರಹಾಕುವುದು ಕಷ್ಟ; ಹೊರಹಾಕದಿರುವುದೂ ಕಷ್ಟ. ಇಂಥ ಸಂದಿಗ್ಧತೆಯಲ್ಲಿ ಬರೆಯಬೇಕಾದ ಮಾನಸಿಕ ನಿರ್ಬಂಧ ಮತ್ತು ಒತ್ತಡಗಳ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ. ಒಟ್ಟು ಕನ್ನಡ ಕಾವ್ಯದ ವಿಶಾಲ ಭಿತ್ತಿಯಲ್ಲಿ ಮಹಿಳೆಯರು ಬರೆದ ಕಾವ್ಯ ಅಥವಾ ಸಾಹಿತ್ಯವನ್ನು ಅಧ್ಯಯನ ಮಾಡಬೇಕು ಎಂಬುದು ಇವರ ಇಂಗಿತ.

'ತಿಳಿಸಾರು' ಎಂಬ ಪ್ರತಿಮೆಯ ಮೂಲಕ ವೈದೇಹಿಯವರು 'ತಿಳಿದವರೇ ಹೇಳಿ' ಎಂಬ ಕವಿತೆಯಲ್ಲಿ ಮಹಿಳಾಕಾವ್ಯದ ಅನನ್ಯತೆಯ ಬಗ್ಗೆ ಹೀಗೆ ಹೇಳಿದ್ದಾರೆ.

"ಕಾವ್ಯದ ಬಗ್ಗೆ ತಿಳಿದವರೇ
ಹೇಳಿ, ನನಗೆ ಕಾವ್ಯ ಗೊತ್ತಿಲ್ಲ
ತಿಳಿಸಾರು ಗೊತ್ತು.

ತಿಳಿಸಾರು ಎಂದರೆ ಏನೆಂದುಕೊಂಡಿರಿ?
ಅದಕ್ಕೂ ಬೇಕು ಒಳಗೊಂದು
ಜಲತತ್ವ - ಗಂಧತತ್ವ
ಕುದಿದು ಹದಗೊಂಡ ಸಾರತತ್ವ
ಹೀಗೆ..."[೩೩]

ಮಹಿಳಾಕಾವ್ಯವನ್ನು ಅವಜ್ಞೆಗೆ ಗುರಿ ಮಾಡಿರುವ ವಿಮರ್ಶಾವಲಯಕ್ಕೆ ಈ ಕವಿತೆಯ ಮೂಲಕ ಉತ್ತರಿಸುತ್ತಿದ್ದಾರೆ. ಈ ವ್ಯಂಗ್ಯಭರಿತ ಧಾಟಿ ಶತಶತಮಾನಗಳಿಂದ ಮಹಿಳೆಯರ ಅಭಿವ್ಯಕ್ತಿಕ್ರಮಗಳನ್ನು ಉಪೇಕ್ಷಿಸಿರುವ ರೀತಿಯನ್ನು ಕುರಿತದ್ದು. ಮಹಿಳೆಯರು ಬರೆದಿದ್ದು 'ಅಡುಗೆಮನೆ ಸಾಹಿತ್ಯ' ಎಂಬ ಓದುಗ, ವಿಮರ್ಶಕರ ಏಕಮುಖಿ ನಿಲುವನ್ನು ಈ ಕವಿತೆ ವಿಡಂಬಿಸುತ್ತಿದೆ. 'ಜಲತತ್ವ, ಗಂಧತತ್ವ, ಕುದಿದು ಹದಗೊಂಡ ಸಾರತತ್ವಗಳು' ನಮಗೆ ಗೊತ್ತಿರುವಾಗ, 'ಕಾವ್ಯತತ್ವ' ಗೊತ್ತಿಲ್ಲ ಎಂದರೆ ಹೇಗೆ? ಎಂಬ ಪ್ರಶ್ನೆ ಇಲ್ಲಿನದು.

"ಇಂದಿನ ಕಾವ್ಯಲೋಕದ ಕ್ಷಿಪ್ರಗತಿಯ ಪಲ್ಲಟಗಳನ್ನು, ಬಹುಸಂಸ್ಕೃತಿಯ ಪ್ರಭಾವಗಳನ್ನು ಅರಗಿಸಿಕೊಳ್ಳುತ್ತಾ, ತಳಮೂಲದ ಸಂವೇದನೆಗಳಿಗೆ ಪೀಠಿಕೆಯಾಗುತ್ತಿದೆ. ಸ್ಪಷ್ಟ ನಿಲುವು, ದೃಢತೆ ಮತ್ತು ಸಂಕಷ್ಟಗಳ ಆಚೆ ನಿಂತು ಲೋಕವನ್ನು ಅವಲೋಕಿಸುವ ವಿಶಿಷ್ಟ ದೃಷ್ಟಿ ಮತ್ತು ಸಂಯಮಗಳು ಲೇಖಕರಿಗೆ ದಕ್ಕುತ್ತಿವೆ. ಕಾವ್ಯಕ್ಕೆ ಜಾಗತಿಕ ಸಮಸ್ಯೆಗಳು, ವಿವಿಧ ಸ್ಥರದ ಜನರ ಸಂವೇದನೆಗಳು ಮತ್ತು ರಾಜಕೀಯ ಪ್ರಜ್ಞೆಗಳು ಮೇಳೈಸಿ ಹೊಸ ಕಾವ್ಯ ಮೂಡಿಬರುತ್ತಿದೆ."[೩೪]

ರಾಜೇಂದ್ರ ಚೆನ್ನಿಯವರು ಇದಕ್ಕೆ ತದ್ವಿರುದ್ಧವಾದ ಅರ್ಥದಲ್ಲಿ ಹೇಳಿದ್ದಾರೆ. ಜೊತೆಗೆ ಯುವಬರಹಗಾರರ ಸಾಮ್ಯವಾದವನ್ನು ಇಲ್ಲಿ ಪ್ರಶ್ನಿಸುತ್ತಿದ್ದಾರೆ. ಯುವಬರಹಗಾರರ ಕೃತಿಗಳು

ಹೆಚ್ಚು ಪ್ರಕಟಗೊಳ್ಳುತ್ತಿವೆ. ಅದಕ್ಕೆ ವಿಮರ್ಶೆಗಳು ಸೃಷ್ಟಿಯಾಗುತ್ತಿವೆ. ಆದರೆ ಯುವಬರಹಗಾರರಲ್ಲಿ ಬದ್ಧತೆಯ ಕೊರತೆಯಿದೆ. ಅವರು 'ವಿವಾದ, ಪ್ರತಿಭಟನೆ, ಅಧಿಕಾರಕೇಂದ್ರಗಳ ವಿರುದ್ಧ ಪ್ರತಿಭಟಿಸಲು ನಿರುತ್ಸಾಹಿಗಳಾಗಿದ್ದಾರೆ' ಎಂದು ಆತಂಕ ವ್ಯಕ್ತಪಡಿಸುತ್ತಿದ್ದಾರೆ. "...ನಮ್ಮ ಬದುಕಿನ ಅತಿದೊಡ್ಡ ಪಲ್ಲಟಗಳ ಈ ಸಂದರ್ಭದಲ್ಲಿ ಅವುಗಳಿಗೆ ಸ್ಪಂದಿಸಿದ ಒಂದೇ ಒಂದು ಕೃತಿ ಯಾಕೆ ಬಂದಿಲ್ಲ? ಆದರೂ ನಮ್ಮ ವಿಮರ್ಶಕರು ವಿವೇಚನೆಯೇ ಇಲ್ಲದ ಸಂಭ್ರಮದಿಂದ ಯಾಕೆ ಬರೆಯುತ್ತಿದ್ದಾರೆ? ಇತರ ಭಾಷೆಗಳಿಗೆ ಹೋಲಿಸಿದರೆ ಸದ್ಯದ ಕನ್ನಡ ಸಾಹಿತ್ಯ ಈ ಕಾಲದ ಅತ್ಯಂತ ಅಪ್ರಸ್ತುತ ಸಾಹಿತ್ಯವಲ್ಲವೆ"?[೩೫] ಎಂದು ಪ್ರಶ್ನಿಸುತ್ತಿದ್ದಾರೆ. ಸಮಕಾಲೀನ ಸಾಹಿತ್ಯ-ಸಂಸ್ಕೃತಿಯ ಬಗೆಗಿನ ರಾಜೇಂದ್ರ ಚೆನ್ನಿ ಅವರ ಕಾಳಜಿ ಕೇವಲ ಸಾಹಿತ್ಯಕವಾದುದಲ್ಲ; ನಮ್ಮ ಸುತ್ತಲಿನ, ಕಣ್ಣೆದುರಿಗಿನ ಪ್ರಶ್ನೆಗಳನ್ನು ಕುರಿತದ್ದು. ಪ್ರಭುತ್ವದ ಅವೈಜ್ಞಾನಿಕ ರೀತಿ-ನೀತಿಗಳಿಗೆ, ಜನಸಾಮಾನ್ಯರ ಸಂಕಷ್ಟಗಳಿಗೆ ಪ್ರತಿಕ್ರಿಯಿಸದ ಸಾಮಾಜಿಕ ಕಳಕಳಿ, ಸೂಕ್ಷ್ಮ ಸಂವೇದನೆಗೆ ಸಂಬಂಧಿಸಿದ್ದು. "...ಹೀಗಾಗಿ ಕನ್ನಡ ಸಾಹಿತ್ಯವು ಬೂಸಾ ಎಂದಿದ್ದ ಬಸವಲಿಂಗಪ್ಪನವರ ಮಾತು ಇಂದು ನಿಜವೆಂದು ಸಾಬೀತಾಗುತ್ತಿದೆ"[೩೬] ಎಂಬ ಸಮರ್ಥನೆಯನ್ನು ನೀಡುತ್ತಾರೆ. ಇಲ್ಲಿ ಹೊಸ ತಲೆಮಾರಿನ ಬರಹಗಾರರ ಬಗ್ಗೆ ಒಂದು ರೀತಿಯ ಆತಂಕ ಮಿಶ್ರಿತ ಗುಮಾನಿಯನ್ನು ವ್ಯಕ್ತಪಡಿಸುತ್ತಿದ್ದಾರೆ.

ಈ ಕವಿತೆಯು ಸಾಹಿತ್ಯದ ಪ್ರಸ್ತುತತೆ ಹಾಗೂ ಕಾವ್ಯಪ್ರಯೋಜನಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಮುಖಾಮುಖಿಯಾಗುತ್ತಿದೆ.

'ಕುಡಿಯಲು ನೀರಿಲ್ಲದ ಊರಿನಲಿ ಶರಾಬಿನಂಗಡಿ ತೆರೆದು ಕುಂತವರು ನಾವು
ಇಲ್ಲಿ ತುಟಿಯಿಂದ ತುಟಿಗೆ ಬಟ್ಟಲನು ದಾಟಿಸುವುದು ಎಷ್ಟೊಂದು ಕಷ್ಟ'.

ಕಲ್ಲಾದವರ ಮುಂದೆ ಅದೇನ ಕವಿತೆ ಒದರುವಿಯೋ ಹುಚ್ಚಪ್ಪ
ಇಲ್ಲಿ ಕಲ್ಲಿನಿಂದ ಕಲ್ಲಿಗೆ ಸ್ಪಂದನವನು ದಾಟಿಸುವುದು ಎಷ್ಟೊಂದು ಕಷ್ಟ.[೩೭]

ಇದು ಎಲ್ಲ ಕಾಲದ ತುರ್ತು. ನಿಜವಾದ ಕಾವ್ಯ ಎಲ್ಲ ಕಾಲದಲ್ಲೂ ಆತ್ಮವಿಮರ್ಶೆಗೆ ಒಡ್ಡಿಕೊಳ್ಳುತ್ತಿರುತ್ತದೆ. ಅಂದರೆ ಪ್ರಭಾವಶಾಲಿ, ಸತ್ವಶಾಲಿಯಾದ ಕಾವ್ಯದ ಅಂತರಾಳದಲ್ಲಿಯೇ ಎಲ್ಲ ಕಾಲದಲ್ಲೂ ಎದುರಾಗುವ ಪ್ರಶ್ನೆಗಳಿಗೆ ಉತ್ತರಗಳನ್ನು ಅಡಗಿಸಿಕೊಂಡಿರುತ್ತವೆ. ಕಾಲ ಕಳೆದಂತೆ ಕವಿ ಮತ್ತು ಕೃತಿಯ ನಡುವಿನ ಸಂಬಂಧಗಳು ಕಳಚಿಕೊಂಡು, ಓದುಗರಲ್ಲಿ ಈ ಸಂಬಂಧಗಳು ಮರುಹುಟ್ಟು ಪಡೆಯುತ್ತಿರುತ್ತವೆ. ಆಗ ಕವಿಗಿಂತ ಕಾವ್ಯ ಮುಖ್ಯ ಎಂಬ ಭಾವನೆ ಓದುಗರಲ್ಲಿ ಬೆಳೆಯುತ್ತ ಹೋಗುತ್ತದೆ. ಸಾರ್ವಕಾಲಿಕ ಮೌಲ್ಯಗಳಿರುವ ಯಾವುದೇ ಕಾವ್ಯ ಕಾಲದ ಜೊತೆ ನಿರಂತರವಾಗಿ ಅನುಸಂಧಾನಗೊಳ್ಳುತ್ತಿರುತ್ತದೆ.

ಹೀಗೆ ಕನ್ನಡ ಕಾವ್ಯ ಪರಂಪರೆಯ ಉದ್ದಕ್ಕೂ ನಡೆದಿರುವ ಹೊಸ ಕಾವ್ಯದ ಸಮರ್ಥನೆ, ಹಳೆಯ ಕಾವ್ಯದ ವಿಡಂಬನೆಯ ತಾತ್ವಿಕ ಚರ್ಚೆಯು ಎಲ್ಲಾ ಕಾಲದ ಕಾವ್ಯವನ್ನು ಮೌಲ್ಯೀಕರಿಸುವಲ್ಲಿ

ಮಹತ್ವದ ಪಾತ್ರ ವಹಿಸಿದೆ. ಇಂಥ ಹೇಳಿಕೆಗಳು ಸಾಮಾನ್ಯವಾದ ಹೇಳಿಕೆಗಳಲ್ಲ; ಅಷ್ಟೇ ಅಲ್ಲ, ಇವುಗಳನ್ನು ನಿರ್ಲಕ್ಷ್ಯ ಮಾಡುವಂತೆಯೂ ಇಲ್ಲ. ಇವು ಆಯಾ ಕಾಲದ ಕಾವ್ಯವನ್ನು ಕುರಿತ ಸೈದ್ಧಾಂತಿಕ ನಿಲುವುಗಳು.

'ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು' ಹಾಗೂ 'ಮಣ್ಣಿನ ವಾಸನೆ ಹೊಡೆಯಬೇಕು' ಎಂಬ ಗೋಪಾಲಕೃಷ್ಣ ಅಡಿಗರ ಮಾತುಗಳು, 'ಕವಿತೆಗೆ ಇನ್ನೊಂದು ದಿವಸ ಕಾದರೆ ನಷ್ಟವೇ? ಎಂಬ ಕೆ.ಎಸ್. ನರಸಿಂಹಸ್ವಾಮಿ ಅವರ ಕವಿತೆ, 'ಹೊಸದಾಗಿ ಸೇರಿರುವ ಕವಿಗಳಲ್ಲಿ ಯಾವುದೇ ಮುಖ್ಯ Trend ನನಗೆ ಕಾಣಿಸಿಲ್ಲ' ಎಂಬ ಲಂಕೇಶರ 'ಅಕ್ಷರ ಹೊಸ ಕಾವ್ಯ'ದ ಮುನ್ನುಡಿಯ ಮಾತುಗಳು, ಡಿ.ಆರ್. ನಾಗರಾಜ್ ಅವರ 'ದಲಿತ ಕಾವ್ಯದಲ್ಲಿ ದಲಿತ ಲೋಕವೇ ಕಾಣೆಯಾಗಿದೆ' ಮತ್ತು 'ಯಾರನ್ನೇ ಓದಿದರೂ ಒಂದೇ ಪಠ್ಯ ಓದಿದಂತೆ ಅನಿಸುತ್ತದೆ' ಎಂಬ ದಲಿತ ಕಾವ್ಯದ ವಿಮರ್ಶೆಗಳು, 'ಕನ್ನಡ ಸಾಹಿತ್ಯವು ಬೂಸಾ ಎಂದಿದ್ದ ಬಸವಲಿಂಗಪ್ಪನವರ ಮಾತು ಇಂದು ನಿಜವೆಂದು ಸಾಬೀತಾಗುತ್ತಿದೆ' ಎಂಬ ಮಾತು ಹಾಗೂ ಹೋರಾಟಗಾರರಾದ ಕೋಟಿಗಾನಹಳ್ಳಿ ರಾಮಯ್ಯ ಅವರು ಹೇಳುವ ಹಾಗೆ 'ಕನ್ನಡ ಸಾಹಿತ್ಯವೆಂದರೆ ನನಗೆ, ಸುಗ್ರಾಸ ಭೋಜನ ಮಾಡಿದವರು ನಂತರ ಎಲೆ, ಅಡಿಕೆ, ಲವಂಗ ಮೆಲ್ಲುತ್ತಾ ಆಡುತ್ತಿರುವ ಮಾತಷ್ಟೇ ಆಗಿ ಕಾಣುತ್ತಿದೆ' ಎಂಬ ಮುಂತಾದ ಕೆಲವು ನಿದರ್ಶನಗಳು ಕಾವ್ಯದ ಸಮರ್ಥನೆಗೆ ಸಂಬಂಧಿಸಿದವುಗಳೇ ಆಗಿವೆ. ಇವು ಮತ್ತೆ ಮತ್ತೆ ಕವಿ, ಓದುಗ ಮತ್ತು ವಿಮರ್ಶಕರು ಎಲ್ಲ ಕಾಲಕ್ಕೂ ಕೇಳಿಕೊಳ್ಳಬೇಕಾದ ಪ್ರಶ್ನೆಗಳೇ ಆಗಿವೆ. ಅಷ್ಟೇ ಅಲ್ಲ, ಇವು ಕೆಲವೊಮ್ಮೆ ಸಾಂದರ್ಭಿಕವಾದ ಹೇಳಿಕೆಗಳಾಗಿ ಕಂಡರೂ, ಸರಳೀಕೃತ ಹೇಳಿಕೆಗಳಲ್ಲ ಎಂಬುದನ್ನು ಅರಿಯಬೇಕು.

ಎಲ್ಲ ಕಾಲದ ಸಮಕಾಲೀನ ವಸ್ತುವಿಷಯಗಳು ಆಯಾ ಕಾಲದವರಿಗೆ ಸಂಕೀರ್ಣವಾಗಿ ಕಂಡಿರುವುದನ್ನು ಇಲ್ಲಿ ಚರ್ಚಿಸಿರುವ ಕೆಲವು ವಾಗ್ವಾದಗಳಿಂದ ತಿಳಿಯಬಹುದು. ಆ ಹಿನ್ನೆಲೆಯಲ್ಲಿ ಕನ್ನಡ ಕಾವ್ಯಪರಂಪರೆಯ ಉದ್ದಕ್ಕೂ ಹಿರಿಯ ಮತ್ತು ಕಿರಿಯ ಕವಿಗಳ ವಿಮರ್ಶಕರ ನಡುವೆ ನಡೆದ ಕೆಲವು ಅರ್ಥಪೂರ್ಣ ವಾಗ್ವಾದಗಳನ್ನು ಚಾರಿತ್ರಿಕ ಹಿನ್ನೋಟವಾಗಿ ಇಲ್ಲಿ ಕೊಡಲಾಗಿದೆ. ಎಲ್ಲ ಕಾಲದ ಸಾಹಿತ್ಯ ಸಂದರ್ಭಗಳ ಬಗ್ಗೆ ಕುತೂಹಲ, ಆಸಕ್ತಿ ಇರುವವರಿಗೆ ಈ ವಾಗ್ವಾದಗಳ ಪರಿಚಯ ಅವಶ್ಯಕವಾಗಿದೆ ಎನಿಸುತ್ತದೆ.

### ೩.೩. ಹೊಸ ತಲೆಮಾರಿನ ಕವಿಗಳು: ನವಮೌಖಿಕತೆ ಮತ್ತು ತಂತ್ರಜ್ಞಾನ

ಮನುಷ್ಯ ಆಧುನಿಕನಾದಂತೆಲ್ಲ ತಾಂತ್ರಿಕವಾಗಿ ಹೊಸ ಶೋಧಕ್ಕೆ ತೊಡಗುತ್ತಾನೆ. ಮನುಷ್ಯನ ಈ ರೀತಿಯ ಅನ್ವೇಷಣೆಯ ಗುಣವೇ ಜಗತ್ತಿನ ಹಲವು ಶೋಧಗಳಿಗೆ ಪ್ರೇರಣೆಯಾಗಿರುವುದನ್ನು ನಮ್ಮ ಪರಂಪರೆಯನ್ನು ಅವಲೋಕಿಸಿದರೆ ಅರಿವಿಗೆ ಬರುತ್ತದೆ. ತಂತ್ರಜ್ಞಾನದ ಆವಿಷ್ಕಾರದಿಂದ ಬಹುತೇಕ ಎಲ್ಲ ಜ್ಞಾನಶಿಸ್ತುಗಳಲ್ಲೂ ಸಹ ಪಲ್ಲಟಗಳಾಗಿವೆ. ಅಷ್ಟೇ ಅಲ್ಲ, ಮಾನವನ ಜೀವನ

ವಿಧಾನದಲ್ಲೂ ಹಲವು ಬಗೆಯ ಪರಿವರ್ತನೆಗಳಾಗಿವೆ. ಸಾಹಿತ್ಯ, ಸಂಸ್ಕೃತಿ ಮತ್ತು ಭಾಷೆಯ ವಿಚಾರದಲ್ಲಿಯೂ ಈ ಮಾತು ಹೊರತಲ್ಲ.

ಯಾವುದೇ ಭಾಷೆಯ ಸಂವಹನಕ್ಕೆ ತಾಂತ್ರಿಕ ಬೆಳವಣಿಗೆಯೂ ಕೂಡ ಪೂರಕವಾಗುತ್ತದೆ. ಸಂವಹನ ಸಾಧ್ಯತೆಗಳು ವಿಸ್ತಾರವಾದಂತೆ ಭಾಷೆಯೂ ಕೂಡ ಸುಲಭಾಕಾಂಕ್ಷೆಗೆ ಒಳಗಾಗುತ್ತಿರುತ್ತದೆ. ಸಂವಹನದ ಹಲವು ಹೊಸ ಬಗೆಗಳು ಅನಾವರಣಗೊಳ್ಳುವ ರೀತಿ ಒಂದು ಬಗೆಯ ಆಶ್ಚರ್ಯಕರ. ಇತ್ತೀಚೆಗೆ ಸಾಮಾಜಿಕ ಮಾಧ್ಯಮಗಳು ಸಾಹಿತ್ಯರಚನೆಗೆ ವೇದಿಕೆಗಳಾಗುತ್ತಿವೆ. ಫೇಸ್‌ಬುಕ್(Facebook), ಬ್ಲಾಗ್(Blog), ವ್ಯಾಟ್ಸಪ್(Whatsapp), ಆಡಿಯೋ ಪುಸ್ತಕ, ಇ-ಬುಕ್ ಇನ್ನೂ ಮುಂತಾದ ತಂತ್ರಜ್ಞಾನ ಆಧಾರಿತ ಸಾಮಾಜಿಕ ಜಾಲತಾಣಗಳ ವೇದಿಕೆಗಳಲ್ಲಿ ಸಾಹಿತ್ಯರಚನೆ ಮಾಡುತ್ತಲೇ ಅದನ್ನು ಕ್ಷಣಾರ್ಧದಲ್ಲಿ ಪ್ರಸಾರ ಮಾಡುತ್ತಿದ್ದಾರೆ. ಅದರಲ್ಲೂ ಯುವಸಮುದಾಯ ಈ ಸಾಮಾಜಿಕ ಜಾಲತಾಣಗಳಲ್ಲಿ ಹೆಚ್ಚು ಸಕ್ರಿಯವಾಗಿ ತಂತ್ರಜ್ಞಾನವನ್ನು ಸಾಹಿತ್ಯರಚನೆ ಮತ್ತು ಸಂವಹನಕ್ಕೆ ಬಳಕೆ ಮಾಡಿಕೊಳ್ಳುತ್ತಿದ್ದಾರೆ. ಇಂದಿನ ಯುವ ಸಮುದಾಯ ಸಾಹಿತ್ಯದ ಓದಿನಿಂದ ದೂರ ಸರಿಯುತ್ತಿದ್ದಾರೆ ಎಂಬ ಆರೋಪದ ನಡುವೆ ಸಾಮಾಜಿಕ ಜಾಲತಾಣಗಳನ್ನು ಸಮರ್ಥವಾಗಿ ಬಳಸಿಕೊಂಡು ಸಾಹಿತ್ಯವನ್ನು ರಚಿಸುವ ಜೊತೆಗೆ ಓದು, ಸಂವಾದ, ಪ್ರಸಾರ ಇನ್ನೂ ಮುಂತಾದ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಅನೇಕ ಬರಹಗಾರರು ಫೇಸ್‌ಬುಕ್, ವಾಟ್ಸಪ್, ಯುಟ್ಯೂಬ್‌ಗಳಲ್ಲಿ ಕವಿತೆ ವಾಚಿಸಿ ವೀಡಿಯೋ ತುಣುಕುಗಳನ್ನು ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡುತ್ತಿದ್ದಾರೆ.

ತಂತ್ರಜ್ಞಾನದ ಅನುಕೂಲದಿಂದ ಸಾಮಾಜಿಕ ಮಾಧ್ಯಮಗಳನ್ನು ಬಳಸಿಕೊಳ್ಳುತ್ತಿರುವ ಅನೇಕ ಯುವಬರಹಗಾರರು ಫೇಸ್‌ಬುಕ್, ವ್ಯಾಟ್ಸಪ್, ಗೂಗಲ್ ಟಾಕ್, ಸ್ಕೈಪ್, ಯುಟ್ಯೂಬ್, ಸೌಂಡ್‌ಕ್ಲೌಡ್‌ನಂತಹ ಸಾಮಾಜಿಕ ಜಾಲತಾಣಗಳಲ್ಲಿ ಸ್ವತಂತ್ರ ವೇದಿಕೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಜಗತ್ತಿನ ಯಾವುದೇ ಮೂಲೆಗೂ ಕಥೆ, ಕವಿತೆಗಳನ್ನು ವಾಚಿಸಿ ವೀಡಿಯೋಗಳನ್ನು ಹಂಚಿಕೊಳ್ಳಬಹುದು. ಇದರಿಂದ ಶೀಘ್ರವಾಗಿ ತಲುಪಿಸಲು ಮತ್ತು ಪ್ರತಿಕ್ರಿಯಿಸಲು ತುಂಬಾ ಸುಲಭ. ನವಮೌಖಿಕತೆಯ ಸಾಧ್ಯತೆಗಳನ್ನು ಮತ್ತಷ್ಟು ವಿವರಿಸುವುದಾದರೆ ಇತ್ತೀಚೆಗೆ ಉನ್ನತ ಶಿಕ್ಷಣ ಮತ್ತು ಆಧುನಿಕ ತಂತ್ರಜ್ಞಾನದ ಪ್ರಯೋಜನವನ್ನು ಪಡೆದ ಸಾಹಿತ್ಯವಲಯವೊಂದು ಹೊಸ ತಿರುವನ್ನು ಪಡೆಯಲೆತ್ನಿಸುತ್ತಿದೆ. ಈ ವಲಯವು ತನ್ನ ಸೀಮಿತ ಪರಿಧಿಯೊಳಗೆ ನವಮಾಧ್ಯಮದ ಮೂಲಕ ಸಾಹಿತ್ಯದ ಅನುಸಂಧಾನವನ್ನು ನಡೆಸುತ್ತಿದೆ. ಅಂದರೆ ಹೊಸ ಕಾಲದ ತಾಂತ್ರಿಕ ಉಪಕರಣಗಳ ಸಹಾಯದಿಂದ ಈ ಕಾಲದ ಓದುಗರ ಆಸಕ್ತಿಗೆ ಅನುಸಾರವಾಗಿ ಸಾಹಿತ್ಯವನ್ನು ತಲುಪಿಸುವ ಹೊಸಬಗೆ ಇದು. ಹಿಂದೆ ಓದಲ್ಪಡುತ್ತಿದ್ದ 'ಪಠ್ಯ'ಗಳಿಗೆ ಪರ್ಯಾಯವಾಗಿ 'ಕೇಳುಪಠ್ಯ'ಗಳನ್ನು ಮಾರುಕಟ್ಟೆಗೆ ತರಲಾಗಿದೆ. ಇವುಗಳ ಮೂಲಕ ಸಾಹಿತ್ಯವನ್ನು ಓದುಗರಿಗೆ

ಮುಟ್ಟಿಸುವ ಕಾರ್ಯವನ್ನು ಮಾಡುತ್ತಿದೆ. 'ಕ್ಯಾಸೆಟ್ ಸಂಸ್ಕೃತಿ'ಯ ಮುಂದುವರಿಕೆಯಾಗಿ ಸಿ.ಡಿ.ಗಳ ಮೂಲಕ ಕಥೆ, ಕಾದಂಬರಿ, ಕವನ ಸಂಕಲನಗಳು 'ಕೇಳು ಪುಸ್ತಕ'ಗಳ ರೂಪದಲ್ಲಿ ಲಭ್ಯವಿವೆ.

ಈ ನವ ಮೌಖಿಕತೆ ಸರಳವಾಗಿ ಅರ್ಥವಾಗುವುದರಿಂದ ಅನಕ್ಷರಸ್ಥರಿಗೂ ಮುಟ್ಟಿಸಲು ಸಾಧ್ಯ. ಜಿ.ಎನ್. ಮೋಹನ್ ಅವರ 'ಪ್ರಶ್ನೆಗಳಿರುವುದು ಶೇಕ್ಸ್‌ಪಿಯರಿನಿಗೆ', ವೀರಣ್ಣ ಮಡಿವಾಳರ ಅವರ 'ನೆಲದ ಕರುಣೆಯ ದನಿ', ಎಚ್.ಎಸ್. ವೆಂಕಟೇಶಮೂರ್ತಿ ಅವರ 'ಚಕೋರಿಯಮ್ಮ' 'ಕೇಳುಪುಸ್ತಕ'ಗಳಾಗಿ ಲಭ್ಯವಿರುವ ಪ್ರಮುಖ ಕವನಸಂಕಲನಗಳು. ಹಿರಿಯ ಬರಹಗಾರರಾದ ಕುಂ. ವೀರಭದ್ರಪ್ಪ, ಟಿ.ಪಿ. ಅಶೋಕ, ಪ್ರತಿಭಾ ನಂದಕುಮಾರ್, ಎಂ.ಆರ್. ಕಮಲ, ಅಶೋಕ್ ಶೆಟ್ಟರ್, ಟಿ.ಎನ್. ಸೀತಾರಾಮ್, ವಸುಧೇಂದ್ರ, ಸುನಂದ ಪ್ರಕಾಶ ಕಡಮೆ ಇನ್ನೂ ಮುಂತಾದವರು ಕವಿತೆ ವಾಚಿಸಿ ವೀಡಿಯೋ ತುಣುಕುಗಳನ್ನು ಜಾಲತಾಣಗಳಲ್ಲಿ ಅಪ್‌ಲೋಡ್ ಮಾಡುವ ಮೂಲಕ ಯುವಬರಹಗಾರರಿಗೆ ಪ್ರೋತ್ಸಾಹ ನೀಡುತ್ತಿದ್ದಾರೆ. ಸರ್ಕಾರದ ವಿವಿಧ ಅಕಾಡೆಮಿಗಳು ಇಂಥ ಹಲವು ವೀಡಿಯೋ ತುಣುಕುಗಳನ್ನು ಸಾಮಾಜಿಕ ಮಾಧ್ಯಮಗಳಲ್ಲಿ ಬಿತ್ತರಿಸುತ್ತಿವೆ. ಹೊಸ ಬರಹಗಾರರ ಸಾಹಿತ್ಯರಚನೆಗಳನ್ನು ಪತ್ರಿಕೆ ಮತ್ತು ನಿಯತಕಾಲಿಕೆಗಳಲ್ಲಿ ಪ್ರಕಟಿಸುವುದು ತುಂಬ ಅಪರೂಪ. ಆದ್ದರಿಂದ ಸಾಮಾಜಿಕ ಜಾಲತಾಣಗಳಂತಹ ಪರ್ಯಾಯ ವೇದಿಕೆಗಳಲ್ಲಿ ತಮ್ಮ ಬರಹಗಳನ್ನು ಪ್ರಕಟಿಸಲು ಅನೇಕ ಬರಹಗಾರರು ಆಸಕ್ತಿಯಿಂದ ತೊಡಗಿಸಿಕೊಳ್ಳುತ್ತಿದ್ದಾರೆ. ಜೊತೆಗೆ ಹಿರಿಯ ಬರಹಗಾರರೂ ಸಹ ಇದೇ ರೀತಿಯ ವೇದಿಕೆಗಳಲ್ಲಿ ಪಾಲ್ಗೊಂಡು ತಮ್ಮ ಬರಹ ಮತ್ತು ವಿಚಾರಗಳನ್ನು ಹಂಚಿಕೊಳ್ಳುವ ಮೂಲಕ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಫೇಸ್‌ಬುಕ್, ವಾಟ್ಸಪ್, ಯುಟ್ಯೂಬ್, ಸೌಂಡ್‌ಕ್ಲೌಡ್‌ಗಳಲ್ಲಿ ತಮ್ಮ ಸ್ವರಚನೆಗಳನ್ನು ಅಪ್‌ಲೋಡ್ ಮಾಡುವ ಜೊತೆಗೆ, ಪಂಪ, ಕುಮಾರವ್ಯಾಸ, ವಚನಕಾರರು, ಕುವೆಂಪು, ಬೇಂದ್ರೆ ಮುಂತಾದವರ ರಚನೆಗಳನ್ನೂ ಸಹ ಅಪ್‌ಲೋಡ್ ಮಾಡಿದ್ದಾರೆ. ಹಾಗೆಯೇ ಯಾರು ಬೇಕಾದರೂ ಇವುಗಳನ್ನು ಆನ್‌ಲೈನ್‌ನಲ್ಲಿ ಕೇಳಿ ಆಸ್ವಾದಿಸಬಹುದು. ಇದಕ್ಕೆ ಮುಕ್ತ ಸ್ವಾತಂತ್ರ್ಯವಿದೆ.

ಕಾವ್ಯಮನೆ, ಪದಯಾತ್ರೆ, ಓದಿನ ಮನೆ, ಕಾಜಾಣ, ಪದ್ಯದಂಗಡಿ, ಸಾಹಿತ್ಯ ಲಹರಿ ವ್ಯಾಟ್ಸಪ್ ಬಳಗ, ಅನೇಕ, ದಿನಕ್ಕೊಂದು ಪದ್ಯ, ಮಹಿಳಾ ಕಾವ್ಯ, ಝೆನ್ ಕಾವ್ಯ, ರಾತ್ರಿ ಕವಿಗಳು, ಏನನ್ನಾದರೂ ಕುಡಿಯುತ್ತಿರು, ಫೀಲ್ ಹೈ ವಿತ್ ಪೊಯಮ್ಸ್, ಗೋಷ್ಠಿ ಆನ್ ಇನ್ನೂ ಮುಂತಾದ ಗ್ರೂಪ್‌ಗಳಲ್ಲಿ ನಿತ್ಯವೂ ಕಥೆ, ಕವನಗಳನ್ನು ರಚಿಸಿ ಪರಸ್ಪರ ಹಂಚಿಕೊಳ್ಳುವ ಮೂಲಕ ಸಾಹಿತ್ಯ ಚಟುವಟಿಕೆಗಳಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಂಡಿದ್ದಾರೆ. ಹೀಗೆ ತಂತ್ರಜ್ಞಾನದ ಹೊಸ ಸಾಧ್ಯತೆಯಿಂದ ಸಾಹಿತ್ಯಕೃಷಿಯಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗಿದೆ ಎಂಬುದು ಇಂಥ ಗುಂಪುಗಳ ಅಭಿಪ್ರಾಯ. "ಅನಾದಿ ಕಾಲದಿಂದಲೂ ವಿಜ್ಞಾನ ಮತ್ತು ತಂತ್ರಜ್ಞಾನಗಳು ಸಾಹಿತಿಗಳಿಗೆ ಹಲವಾರು ಅನುಕೂಲಗಳನ್ನು ಕೊಡುತ್ತಲೇ ಬಂದಿವೆ. ಆದರೆ ಅದು ಪ್ರೀತಿಯ ಕುಂಡಿ

ಚಿವುಟಿ, ತೊಟ್ಟಿಲ ತೂಗುವ ರೀತಿಯದ್ದು. ಪೇಪರು, ಪೆನ್ನು ಕಂಡುಹಿಡಿಯಿತು ಎಂದು ಸಂಭ್ರಮಿಸುವ ಹೊತ್ತಿಗೆ, ರೇಡಿಯೋ–ಸಿನಿಮಾ ಕಂಡುಹಿಡಿದು ಓದುಗರನ್ನು ನಮ್ಮಿಂದ ಆಚೆ ಕರೆದುಕೊಂಡು ಹೋಗುತ್ತದೆ. ಬಣ್ಣ ಬಣ್ಣದ ಆಕರ್ಷಕ ಮುದ್ರಣದ ಸಾಧ್ಯತೆಯನ್ನು ಸಾಹಿತಿಗಳಿಗೆ ತೋರಿಸಿಕೊಟ್ಟು, ಟಿವಿಯನ್ನು ಓದುಗರಿಗೆ ನಿಡುತ್ತದೆ. ಆಡಿಯೋ ಪುಸ್ತಕ, ಇ–ಪುಸ್ತಕ ಮಾಡಬಹುದು ಎಂದು ಹೇಳುತ್ತಲೇ ಶಕ್ತಿಯುತವಾಗಿ ಇಂಟರ್‌ನೆಟ್ ಅನ್ನು ಓದುಗರಿಗೆ ವಿತರಿಸುತ್ತದೆ. ಒಟ್ಟಾರೆಯಾಗಿ ಅದರ ಪ್ರೀತಿ ಸಾಹಿತಿಗಳ ಪರವಂತೂ ಅಲ್ಲ. ತನ್ನ ಪಾಡಿಗೆ ತಾನು ಏನಾದರೂ ಕಂಡುಹಿಡಿಯುತ್ತಲೇ ಹೋಗುತ್ತದೆ. ಅದರಲ್ಲಿ ಕೆಲವು ನಮಗೆ ಉಪಯೋಗವಾದರೆ, ಮತ್ತೆ ಕೆಲವು ಕಿರಿಕಿರಿ ಮಾಡುತ್ತವೆ. ಕೆಲವೊಂದಂತೂ ನಮ್ಮ ಅಸ್ತಿತ್ವವನ್ನೇ ನಿರಾಕರಿಸಿಬಿಡುವಷ್ಟು ಶಕ್ತಿದಾಯಕವಾಗಿರುತ್ತವೆ."[೩೮]

ಹೊಸ ಬದಲಾವಣೆಗಳಿಗಾಗಿ ತೆರೆದುಕೊಂಡು ಮುಕ್ತವಾಗಿ ಭಾಗವಹಿಸುವ ಹಿರಿಯ ಬರಹಗಾರರು ಕೂಡ ತರುಣ ಸಾಹಿತಿಗಳ ಸಾಹಿತ್ಯ ಚಟುವಟಿಕೆಗಳನ್ನು ಗಮನಿಸುತ್ತಾ ತಾವು ಕೂಡ ಮುಕ್ತವಾಗಿ ಪಾಲ್ಗೊಳ್ಳುತ್ತಿದ್ದಾರೆ. ಆದರೂ ಪುಸ್ತಕಸಂಸ್ಕೃತಿಯಲ್ಲಿ ನಂಬಿಕೆ, ಅಪಾರ ಪ್ರೀತಿ ಇರುವ ಹಿರಿಯ ಬರಹಗಾರರು ಡಿಜಿಟಲ್ ಮಾಧ್ಯಮಗಳನ್ನು ಒಪ್ಪಿಕೊಳ್ಳುವುದಕ್ಕೆ ನಿರುತ್ಸಾಹ ತಾಳುತ್ತಿದ್ದಾರೆ. ಕವಿತೆಯನ್ನೊ, ಕಥೆಯನ್ನೊ ಬರೆದು ಸಾಮಾಜಿಕ ಜಾಲತಾಣದಲ್ಲಿ ಹಾಕಿದ ಕೂಡಲೇ ಕ್ಷಣಾರ್ಧದಲ್ಲಿ ಹೆಚ್ಚು ಜನರಿಗೆ ತಲುಪುತ್ತದೆ. ಅತಿವೇಗದಲ್ಲಿ ಇಷ್ಟಪಟ್ಟು ಪ್ರತಿಕ್ರಿಯೆಗಳನ್ನೂ ವ್ಯಕ್ತಪಡಿಸುವುದರಿಂದ ಉತ್ತಮ ಕವಿತೆ ಬರೆಯಲು ಹಾಗೂ ಸಲಹೆ, ಸೂಚನೆಗಳನ್ನು ತಿದ್ದುಕೊಳ್ಳಲು ಸಾಧ್ಯವಾಗುತ್ತದೆ ಎಂಬುದು ಕೆಲವರ ವಾದ. ಆದರೆ ಇಷ್ಟೆಲ್ಲಾ ಸಾಧ್ಯತೆಗಳ ನಡುವೆಯೂ ಪುಸ್ತಕಗಳ ಒಡನಾಟ ಯುವಸಮುದಾಯದವರಲ್ಲಿ ಕಡಿಮೆ ಯಾಗುತ್ತಿರುವುದಂತೂ ಸತ್ಯ. "ಸಾಮಾಜಿಕ ಜಾಲತಾಣಗಳು ಮತ್ತು ಅಂತರ್ಜಾಲ ಪತ್ರಿಕೆಗಳು ಕಾವ್ಯದ ಪ್ರಸಾರವನ್ನು ವಿಸ್ತರಿಸುತ್ತಿರುವುದು ಆಶಾದಾಯಕವಾದರೂ, ಇನ್ನೊಂದೆಡೆ ಇದೇ ವಿದ್ಯಮಾನವು ಕಾವ್ಯವು ನಿರೀಕ್ಷಿಸುವ ತಾಳಿಕೊಳ್ಳುವ ಗುಣವನ್ನು ಕಡಿಮೆ ಮಾಡುತ್ತಿದೆಯೇನೋ ಎನ್ನುವ ಆತಂಕವೂ ಇದೆ."[೩೯] ಎಲ್ಲಕ್ಕಿಂತ ಮುಖ್ಯವಾಗಿ ಸಾಮಾಜಿಕ ಜಾಲತಾಣ ಒಂದು ಅರಳಿಕಟ್ಟೆ. ಅಲ್ಲಿ ಗಂಭೀರವಾದ ಚಿಂತನೆಗಳು ನಡೆಯುವುದಿಲ್ಲ. ಸಾಮಾಜಿಕ ಮಾಧ್ಯಮಗಳಲ್ಲಿ ಸಕ್ರಿಯವಾಗಿರುವ ವರ್ಗವೇ ಬೇರೆ. ಎಲ್ಲರೂ ಬರೆದ ತಕ್ಷಣ ಫೇಸ್‌ಬುಕ್‌ನಲ್ಲಿ ಹಾಕುವುದು; ಹಿಂದೆಯೇ ಲೈಕ್, ಕಾಮೆಂಟ್‌ಗಳನ್ನು ನಿರೀಕ್ಷಿಸುವುದು ರೂಢಿಯಾಗಿದೆ. ಅಷ್ಟೇ ಅಲ್ಲ, ಬಹುತೇಕ ಯುವಬರಹಗಾರರು ಕಾಲಿ ಚರ್ಚೆಯಲ್ಲಿ ಕಾಲ ಕಳೆಯುತ್ತಿದ್ದಾರೆ. ಇಂತಹ ಶಕ್ತಿಯುತ ಮಾಧ್ಯಮವನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ. ಜೊತೆಗೆ ಅಲ್ಲಿ ಗಂಭೀರವಾದ ಓದು, ವಿಮರ್ಶೆಗಳು ನಡೆಯುತ್ತಿಲ್ಲ. "ನವ ಮೌಖಿಕತೆಯೊಂದು ಈಗ ಚಾಲ್ತಿಯಲ್ಲಿದ್ದು ನಮ್ಮ ನಮ್ಮ ಹಳೆಯ ಮೌಖಿಕ ಸಂಸ್ಕೃತಿಯ ಹೃದಯಂಗಮ ಸನ್ನಿವೇಶವನ್ನು ನಿರ್ದಯವಾಗಿ ಹೊಸಕಿ ಹಾಕುವ ಜಾಹೀರಾತುಗಳ ಭಾಷೆ ಅತ್ಯಂತ ವಿಕೃತವಾಗುತ್ತಾ, ಅದೇ ಅತ್ಯಂತ ಅಕರ್ಷಕವೂ

ಆಗುತ್ತ ಜನ ತಮ್ಮ ಬೇರಿನ ಸಂಸ್ಕೃತಿಯನ್ನೇ ಬಲಿ ಕೊಡುವಂತೆ ಮಾಡುತ್ತಿದೆ. ಜಾಹೀರಾತಿನ ಭಾಷೆ ತಾತ್ಕಾಲಿಕವಾಗಿ ಮನೋರಂಜಕವಾಗಿದ್ದು ರೂಪಕಗಳ ಭ್ರಮೆಯನ್ನು ಹುಟ್ಟಿಸುವಂತಿರುತ್ತದೆ. ಈ ರೀತಿಯ ಭ್ರಮಾತ್ಮಕ ಭಾಷೆ ಇಂದು ಕವಿಯ ಜೀವಂತಿಕೆಗೇ ಎರವಾಗುವಂಥದು. ಇಂದಿನ ಕವಿಗೆ ಇದೊಂದು ಬಹು ದೊಡ್ಡ ಸವಾಲು. ಕವಿ ತಾನು ಸೃಷ್ಟಿಸುವ ರೂಪಕಗಳ ಎದುರು ಈ 'ನವಮೌಖಿಕ' ಭಾಷೆ ರುದ್ರನರ್ತನ ಮಾಡುತ್ತ ಕವಿಸೃಷ್ಟಿಯ ರೂಪಕಗಳು ಮೃತರೂಪಿ ಎಂಬ ಹಳಹಳಿಕೆಯನ್ನು ಉಂಟು ಮಾಡಿ ಇವತ್ತು ಅದೇ ಗೆಲುವಿನ ನಗೆಯನ್ನು ವಿಕಟವಾಗಿ ನಗುತ್ತಿದೆ. ಅದರ ಅಟ್ಟಹಾಸದಲ್ಲಿ ಕವಿಗಳೆಲ್ಲ ನಲುಗಿ ಹೋಗುವಂತಾಗಿದೆ. ಕವಿಗಳು ಇಂದು ಎಷ್ಟೇ ಪರಿಣಾಮಕಾರಿ ಕಾವ್ಯ ಸೃಷ್ಟಿಸಿದರೂ ಅದರ ಪರಿಣಾಮ ಎಷ್ಟು ಆಗಬೇಕೋ ಅಷ್ಟು ಪ್ರಮಾಣದಲ್ಲಿ ಆಗುತ್ತಿಲ್ಲ."[೪೦]

ಸಂವಹನದ ದೃಷ್ಟಿಯಿಂದ ಹಲವು ಸಾಧ್ಯತೆಗಳು ಈ ನವ ಮೌಖಿಕತೆಗೆ ಇದ್ದರೂ ಕೂಡ ಇದರ ಪ್ರಯೋಜನ ಲಭಿಸುವುದು ಸಮಾಜದ ಒಂದು ವರ್ಗಕ್ಕೆ ಮಾತ್ರ. ಅಂದರೆ ಈ ಮಾಧ್ಯಮವು ಮೇಲ್ವರ್ಗ, ಮಧ್ಯಮವರ್ಗ, ಕೆಳವರ್ಗ, ಗ್ರಾಮೀಣ ಮತ್ತು ನಗರವಾಸಿಗಳು ಹಾಗೂ ವಿದ್ಯಾವಂತ ಮತ್ತು ಅವಿದ್ಯಾವಂತರ ನಡುವೆ ದೊಡ್ಡ ಅಂತರವನ್ನು ಸೃಷ್ಟಿಸುತ್ತಿದೆ. ಇದರ ಪ್ರಯೋಜನವನ್ನು ಈಗ ಪಡೆಯುತ್ತಿರುವವರಲ್ಲಿ ನಗರವಾಸಿ ಮತ್ತು ಐಶಾರಾಮಿ ಜೀವನ ನಡೆಸುತ್ತಿರುವ ಹಾಗೂ ಕಂಪ್ಯೂಟರ್, ಅಂತರ್ಜಾಲದ ತಿಳುವಳಿಕೆ ಇರುವವರು ಮಾತ್ರ ಮುಂಚೂಣಿಯಲ್ಲಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ಇಂತಹ ನವ ಮಾಧ್ಯಮಗಳಲ್ಲಿ ರಚನೆಗೊಳ್ಳುತ್ತಿರುವ ಕಾವ್ಯ ಸಾಮಾಜಿಕ ಕಳಕಳಿಯಿಂದ ತುಂಬಾ ದೂರವಿದೆ. ಸಾಹಿತ್ಯಕೃಷಿಯಲ್ಲಿ ತೊಡಗುವವರು ಸತ್ವಶಾಲಿ ಬರಹಗಾರರಾಗಬೇಕಾದರೆ ಸಾಹಿತ್ಯರಚನೆ ಮಾಡುವ ಮೊದಲು ಭಾಷೆಯ ಮೇಲೆ ಪ್ರಭುತ್ವ ಸಾಧಿಸಬೇಕಾಗಿದೆ. ಹೊಸ ಹೊಸ ಪರಿಭಾಷೆ ಮತ್ತು ಶಬ್ದಗಳನ್ನು ಸೃಷ್ಟಿಸುವುದರಿಂದ ಕಾವ್ಯಕ್ಕೆ ಗಟ್ಟಿತನ ಹಾಗೂ ಮೆರುಗು ಬರುತ್ತದೆ.

ಡಿ.ಆರ್. ನಾಗರಾಜ್ ಹೇಳುವ ಹಾಗೆ ನವ ಮೌಖಿಕತೆಯು ಕವಿಯ ಜಗತ್ತನ್ನು ಕುಗ್ಗಿಸುತ್ತ, ಕರಗಿಸುತ್ತ ಹೋಗುತ್ತದೆ. ಭಾಷೆ ಎಂಬ ಉಪ್ಪಿನ ಗುಣ ಕೆಡದಂತೆ ನವ ಮೌಖಿಕತೆಯನ್ನು ಎದುರುಗೊಳ್ಳುವುದೇ ಕವಿಗೆ ಇರುವ ಪ್ರಧಾನ ಸವಾಲು ಎನ್ನುತ್ತಾರೆ. ಅಂದರೆ "ನವ ಮೌಖಿಕತೆಯಲ್ಲಿ ಈ ಪುನರಾವರ್ತನೆ ಎನ್ನುವ ಪ್ರಕ್ರಿಯೆ ತನ್ನ ಹಳೆಯ ಸೃಜನಶೀಲತೆಯನ್ನು ಕಳೆದುಕೊಂಡು ಹೊಸ ರೀತಿಯ ರೋಗಗಳನ್ನು ಕಾವ್ಯ ನಿರ್ಮಿತಿಯ ವಾತಾವರಣದಲ್ಲಿ ಹಬ್ಬಿಸುತ್ತಾ ಬರುತ್ತದೆ. ಈ ರೀತಿಯ ರೋಗಗಳಲ್ಲಿ ತುಂಬಾ ಮುಖ್ಯವಾದದ್ದು ಭಾಷಾಬಳಕೆ ಶೀಘ್ರಸ್ಖಲನದ ಒಂದು ರೂಪ ಆಗುವುದು. ಈ ನಿರ್ದಿಷ್ಟ ಅಂಶ ನಮ್ಮನ್ನು ಒಟ್ಟು ನವ ಮೌಖಿಕ ಮಾಧ್ಯಮ ಮತ್ತು ಆಧುನಿಕ ನಾಗರಿಕತೆಗಳ ನಡುವಣ ಸಂಬಂಧದ ಸ್ವರೂಪದ ಬಗ್ಗೆ ಚಿಂತಿಸುವಂತೆ ಮಾಡುತ್ತದೆ. ಆಧುನಿಕ ನಾಗರಿಕತೆಯ ಮೂಲಮಂತ್ರ ಎಂದರೆ ವೇಗ. ಎಲ್ಲವೂ ಇಲ್ಲಿ ವೇಗವರ್ಧಕಗಳೇ. ಎಲ್ಲವೂ ಇನ್‌ಸ್ಟಂಟ್ ಆಗಬೇಕು. ತಕ್ಷಣಕ್ಕೆ

ಕರಗಿ ಸುರಿದು ಹೋಗಿಬಿಡಬೇಕು. ಗಿರಾಕಿಗೆ ಹೆಚ್ಚು ಟೈಮಿಲ್ಲ. ರೂಮಿಯಲ್ಲೊ ಕನ್ನಡ ನವೋದಯದಲ್ಲೊ ಸೂಕ್ಷ್ಮಾನುಭವಗಳ ಶೋಧನೆಗೆ ಮಾಧ್ಯಮವಾಗುವ ವಸಂತದ ರೂಪಕ 'ಬಾರೊ ವಸಂತ' ಎಂಬ ಗೀತದ ಮಟ್ಟಕ್ಕೆ ಇಳಿಯುವುದು ಈ ಶೀಘ್ರಸ್ಖಲನದ ಗುಣದ ಜಾರಿಯಿಂದಾಗಿಯೇ. ಇದು ಪ್ರತಿಭಾವಂತ ಕವಿಗೆ ಹೊಳೆದೇ ಹೊಳೆಯುತ್ತದೆ. ಅವನಿಗೆ ಹೊಳೆಯದಿದ್ದರೆ ಸೂಕ್ಷ್ಮಜ್ಞರಾದ ಓದುಗರಿಗಾದರೂ, ಕೇಳುಗರಿಗಾದರೂ ಹೊಳೆಯುತ್ತದೆ. ಇಲ್ಲಿ ನಾನು ಒಂದು ನಾಗರಿಕತೆಯಿಂದ ಇನ್ನೊಂದು ನಾಗರಿಕತೆಗೆ ಹೊರಳುವಾಗ ಆಗುವ ಪರಿಸರ ಪಲ್ಲಟದ ಬಗೆಗೆ ಮಾತನಾಡುತ್ತಿದ್ದೇನೆ. ಹೀಗಾಗಿ, ೩೦-೪೦ ವರ್ಷ ನವ ಮೌಖಿಕ ಸಂಸ್ಕೃತಿ ಒಂದು ಜನಾಂಗದಲ್ಲಿ ಬೆಳೆದರೆ, ಬಹುಜನ ಲಭ್ಯವಾದ ಪದಗಳನ್ನು ಬಳಸಲಾಗದ ಸ್ಥಿತಿಗೆ ಕವಿಗಣ ಬಂದುಬಿಡುತ್ತದೆ. ಆ ಭಾಷೆಗೆ ತುಕ್ಕು ಹಿಡಿದಿರುತ್ತದೆ. ಮುಟ್ಟಿದ ತಕ್ಷಣ ಮುರಿದು ಬೀಳುತ್ತದೆ."[೪೧]

ನವಮೌಖಿಕತೆಯಿಂದ ಆಗುವ ಅಪಾಯಗಳಲ್ಲಿ ಭಾಷಾಬಳಕೆಯ ಏಕತಾನತೆ ಮತ್ತು ನುಡಿಯ ಸತ್ವಹೀನತೆ ಪ್ರಧಾನವಾದುವು. ಇದು ತಾಂತ್ರಿಕತೆ ಬೆಳೆದಂತೆಲ್ಲ ನೆಲದ ಸೊಗಡು ವಿಸ್ಮೃತಿಗೆ ಸರಿದುಬಿಡುತ್ತದೆ. ಸದ್ಯದ ಫೇಸ್‌ಬುಕ್, ಬ್ಲಾಗ್ ಮತ್ತು ವಾಟ್ಸ್‌ಆಪ್‌ಗಳಲ್ಲಿ ಹರಿದಾಡುವ ಬಹುತೇಕ ಕವಿತೆಗಳು, ಹನಿಗವಿತೆಗಳು ಇದಕ್ಕೆ ಉತ್ತಮ ನಿದರ್ಶನಗಳು.

ಈ ಆತಂಕದ ನಡುವೆಯೂ "ಓದುಗನಾದವನು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನೋ 'ಅನ್ನಾಕರೆನಿನಾ' ಕಾದಂಬರಿಯನ್ನೋ ಯಾವನೂ ಇಂಟರ್‌ನೆಟ್‌ನಲ್ಲಿ ಓದುತ್ತಾ ಕೂರಲಾರ. ಹಾಸಿಗೆಯ ಮೇಲೋ, ಆರಾಮಕುರ್ಚಿಯ ಮೇಲೋ ಓದುವ ಸುಖವನ್ನು ನಾವು ಅಷ್ಟು ಸುಲಭವಾಗಿ ಬಿಟ್ಟುಕೊಡಲಾರೆವು. ಹಾಗೆಯೇ ಪುಸ್ತಕ ಓದುತ್ತಾ, ಓದುತ್ತಾ ಯಾರ ಪ್ರವೇಶವೂ ಇಲ್ಲದ ಲೋಕವೊಂದನ್ನು ಸೃಷ್ಟಿಸಿಕೊಳ್ಳುವ ಸ್ವಾತಂತ್ರ್ಯವನ್ನು ಕೂಡ. ಜೊತೆಗೆ ಎಲೆಕ್ಟ್ರಾನಿಕ್ ಮಾಧ್ಯಮದ ಪ್ರಭಾವ ಹಬ್ಬುತ್ತಿದೆಯೆಂದರೆ ಹೊಸ ಕಾಲದ ಸೂಕ್ಷ್ಮ ಮನಸ್ಸುಗಳು ಹೆಚ್ಚುತ್ತಿವೆಯೆಂದೇ ಅರ್ಥ."[೪೨]

ಈ ಮಾತನ್ನು ಒಂದು ರೀತಿಯಲ್ಲಿ ಒಪ್ಪಬಹುದು. ಆದರೂ ನವ ಮೌಖಿಕತೆಯು ಕಾವ್ಯದ ಅಭಿವ್ಯಕ್ತಿ ಮತ್ತು ಸಂವಹನಕ್ಕೆ ಸುಲಭ ಗ್ರಾಹ್ಯವಾಗಬಹುದೇ ಹೊರತು, ಕಾವ್ಯದ ಅಂತಃಸತ್ವ ಮತ್ತು ಸಂವೇದನೆಗಳನ್ನು ಜೀವಂತವಾಗಿ ಸೃಜಿಸಲಾಗದು. ಪುಸ್ತಕ ಅಥವಾ ಪತ್ರಿಕೆಗಳಂತೆ ಟಿ.ವಿ.ಗಳನ್ನು ನಾವು ಎಲ್ಲೆಂದರಲ್ಲಿ ಕೊಂಡೊಯ್ಯಲಾರೆವು ಎನ್ನುವುದು ನಿಜವೇ. ಆದರೆ, ಆಧುನಿಕ ಸಾಧನಗಳ ವಿಕಾಸದ ಹಮ್ಮು ಬೇರೆಯೇ: ಅದೇ ಕಡಲತಡಿಯಲ್ಲಿ ಕುಳಿತು ಅಮೆಜಾನ್‌ನ ಕಿಂಡಲ್‌ನಲ್ಲಿ ಅಡಕವಾಗಿರುವ ನೂರಾರು ಪುಸ್ತಕ, ಪತ್ರಿಕೆಗಳನ್ನು ಓದುತ್ತ ತೆರೆಗಳು ನೀಡುವ ಆನಂದವನ್ನು ಸವಿಯಬಹುದು. ಅಷ್ಟರಮಟ್ಟಿಗೆ ಪ್ರಕಟಣಾ ಜಗತ್ತು ಭೌತಿಕವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಒಂದು ಪುಸ್ತಕದ ಬದಲು ನೂರು ಪುಸ್ತಕಗಳನ್ನು;

ಒಂದು ಪತ್ರಿಕೆಯ ಬದಲು ಬಗೆಬಗೆಯ ಪತ್ರಿಕೆಗಳನ್ನು ಅಂಗೈಯಗಲದ ಕಿಂಡರ್‌ನಲ್ಲಿ ಓದಲು ಸಾಧ್ಯವಾಗಿಸುವಲ್ಲಿಯೇ ಆಧುನಿಕತೆಯ ಸೋಜಿಗವಿರುವುದು.

ಆದರೆ ಈ ವಿಷಯವು ಆಯ್ಕೆಯ ಅವಕಾಶಗಳ ಕುರಿತು ಮೌನವಾಗಿರುತ್ತದೆ. "ಪರಿಕರ ನಮಗೆ ಒದಗಿಸುವ ಆಯ್ಕೆಗಳು ಮಾರುಕಟ್ಟೆ ನಿಯಮದಿಂದ; ರಾಜಕೀಯ ಹುನ್ನಾರಗಳಿಂದ; ಅಭಿರುಚಿಗಳನ್ನು ನಿಯಂತ್ರಿಸುವ ದುಷ್ಟಸಿದ್ಧಾಂತಗಳಿಂದ ಮುಕ್ತವಾಗಿವೆಯೇ, ಎಲ್ಲವನ್ನೂ ಒಳಗೊಳ್ಳುವ ನೈಜ ಜೀವನ ಸಿದ್ಧಾಂತಕ್ಕೆ ಬದ್ಧವಾಗಿ ಸಾಧನ ರೂಪುಗೊಂಡಿದೆಯೇ, ಈ ಕ್ಷಣಕ್ಕೆ ನನಗೆ ಆನಂದ ನೀಡುವ ನನ್ನ ಭಾಷೆಯ, ನನ್ನ ಆಯ್ಕೆಯ ಪುಸ್ತಕ ಆ ಸಾಧನದಲ್ಲಿದೆಯೇ? ಇತ್ಯಾದಿ ಪ್ರಶ್ನೆಗಳಿಗೆ ಈ ಆಧುನಿಕ ವಿಸ್ಮಯ ಸಮರ್ಪಕವಾದ ಉತ್ತರವನ್ನು ನೀಡಲಾರದು."[೪೩] ಆಧುನಿಕ ತಂತ್ರಜ್ಞಾನವೇ ಬೇರೆ, ಭಾಷೆ ಮತ್ತು ಸಾಹಿತ್ಯಕ ರಚನೆಗಳೇ ಬೇರೆ. ಈ ತಂತ್ರಜ್ಞಾನಗಳು ಮುದ್ರಣ, ಪ್ರಸಾರ ಹಾಗೂ ಸಂವಹನಕ್ಕೆ ದಾರಿಮಾಡಿಕೊಡಬಹುದೇ ಹೊರತು, ಸೃಜನಶೀಲವಾದ ಅಭಿವ್ಯಕ್ತಿಗೆ ಹೇಗೆ ಪೂರಕವಾಗುತ್ತದೆ ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾಗಿದೆ. ತಂತ್ರಜ್ಞಾನ ಮತ್ತು ನವಮಾಧ್ಯಮಗಳು ಸಂವಹನಕ್ಕೆ ಹೊಸ ಆಯಾಮಗಳನ್ನು ಕಲ್ಪಿಸಿಕೊಡಬಹುದು. ಬದಲಾಗಿ ಈ ಎಲ್ಲ ತಂತ್ರಜ್ಞಾನದ ಬಳಕೆಯಿದ್ದ ಮಾತ್ರಕ್ಕೆ ಕಥೆ, ಕಾವ್ಯ, ನಾಟಕಗಳನ್ನು ರಚಿಸಲಾಗುವುದಿಲ್ಲ. ಅಂದರೆ ಇದು ತಾಂತ್ರಿಕತೆಯ ಹೊಸ ಹುಡುಕಾಟವನ್ನು ಕಾಣಿಸುತ್ತದೆಯೇ ಹೊರತು, ಸೃಜನಶೀಲವಾದ ಶಕ್ತಿ ಸಂಚಯವನ್ನು ದಕ್ಕಿಸಿಕೊಡುವುದಿಲ್ಲ. ಈ ಎಚ್ಚರ ಹೊಸ ತಲೆಮಾರಿನ ಕವಿಗಳು ಅದರಲ್ಲೂ 'ಅನುಕರಣ ಪ್ರತಿಭೆ'ಗಳಿಗೆ ಇರಬೇಕಾದುದು ಅತ್ಯವಶ್ಯಕ.



**ಕೊನೆ ಟಿಪ್ಪಣಿಗಳು**

೧. ದೇವನೂರ ಮಹಾದೇವ, **ಎದೆಗೆ ಬಿದ್ದ ಅಕ್ಷರ,** ಪುಟ ೧೨೧.

೨. ಎನ್.ಕೆ. ಹನುಮಂತಯ್ಯ, ಕನ್ನಡ ಕಾವ್ಯದ ಇತ್ತೀಚಿನ ಒಲವುಗಳು, **ತಂಪು,** ಪುಟ ೯೦.

೩. ಅದೇ, ಪುಟ ೯೧.

೪. **ಗೋಪಾಲಕೃಷ್ಣ** ಅಡಿಗ, **ಬತ್ತಲಾರದ ಗಂಗೆ,** ಮುನ್ನುಡಿ.

೫. ಎನ್.ಕೆ. ಹನುಮಂತಯ್ಯ, ಕನ್ನಡ ಕಾವ್ಯದ ಇತ್ತೀಚಿನ ಒಲವುಗಳು, **ತಂಪು,** ಪುಟ ೯೨.

೬. ಮಂಜುನಾಥ್‌ಲತಾ, ಹೊಸಬರ ಕತೆಗಳು-ತವಕ, ತಲ್ಲಣಗಳ ನಾನಾ ಬಗೆಗಳು, **ತಂಪು,** ಪುಟ ೧೦೩.

೭. ಬಿ.ಎಂ. ಪುಟ್ಟಯ್ಯ, ಹೊಸತಲೆಮಾರು-ಸಂಶೋಧನೆ: ಕೆಲವು ಭಿನ್ನಮತಗಳು, **ತಂಪು,** ೧೧೭.

೮. ಕರೀಗೌಡ ಬೀಚನಹಳ್ಳಿ, **ಏನೋ ಉಳಿಯುವುದು ಮತ್ತೆ,** ಪುಟ ೧.

೯. ಜಿ.ಎಸ್. ಶಿವರುದ್ರಪ್ಪ, **ಗತಿಬಿಂಬ,** ಪುಟ ೩೮.

೧೦. ಕುವೆಂಪು, **ಸಮಗ್ರ ಗದ್ಯ-೨,** ಪುಟ ೪೨.

೧೧. ಜಿ.ಎಸ್. ಶಿವರುದ್ರಪ್ಪ, **ಕನ್ನಡ ಸಾಹಿತ್ಯ ಸಮೀಕ್ಷೆ,** ಪುಟ ೧೦೮.

೧೨. ಓ.ಎಲ್. ನಾಗಭೂಷಣಸ್ವಾಮಿ, **ಪ್ರಜಾವಾಣಿ, ದೀಪಾವಳಿ ವಿಶೇಷಾಂಕ-೨೦೧೧,** ಪುಟ ೨೬೬.

೧೩. **ಪೊನ್ನ, ಶಾಂತಿಪುರಾಣಂ,** ೧೨-೨೯.

೧೪. ರನ್ನ, ಗದಾಯುದ್ಧ, ೧-೪೭.

೧೫. ಮಲ್ಲಿಕಾರ್ಜುನ, ಸೂಕ್ತಿ ಸುಧಾರ್ಣವಂ, **ಪೀಠಿಕಾ ಪ್ರಕರಣಂ,** ಪುಟ ೩೫.

೧೬. ಓ.ಎಲ್. ನಾಗಭೂಷಣಸ್ವಾಮಿ **ಪ್ರಜಾವಾಣಿ, ದೀಪಾವಳಿ ವಿಶೇಷಾಂಕ-೨೦೧೧,** ಪುಟ ೨೬೬.

೧೭. ಟಿ.ಎಸ್. ವೆಂಕಣ್ಣಯ್ಯ, **ಕಿರಿಯರ ಕಾಣಿಕೆ,** ಮುನ್ನುಡಿ, ಪುಟ ೩-೪.

೧೮. ಅದೇ, ಪುಟ ೪.

೧೯. ಕುವೆಂಪು, **ವಿಭೂತಿ ಪೂಜೆ,** ಪುಟ ೧೮.

೨೦. ದ.ರಾ. ಬೇಂದ್ರೆ, **ಭಾವತರಂಗ,** ಮುನ್ನುಡಿ.

೨೧. ಗೋಪಾಲಕೃಷ್ಣ ಅಡಿಗ, **ಭಾವತರಂಗ,** ಪುಟ ೨.

೨೨. ಗೋಪಾಲಕೃಷ್ಣ ಅಡಿಗ, **ಸಮಗ್ರ ಕಾವ್ಯ,** ಪುಟ ೫೮೨.

೨೩. ಕೆ.ಎಸ್. ನರಸಿಂಹಸ್ವಾಮಿ, **ತೆರೆದ ಬಾಗಿಲು,** ಪುಟ ೩.

೨೪. ಕಿ.ರಂ. ನಾಗರಾಜ, **ಇನ್ನೊಂದು ದಿವಸ ಕಾದರೆ ನಷ್ಟವೇ? ಸಂಚಯ, ಸಂಪುಟ-೧೯, ಸಂಚಿಕೆ -೮೮,** ಪುಟ ೭೫.

೨೫. ಜಿ.ಎಸ್. ಶಿವರುದ್ರಪ್ಪ, **ಗತಿಬಿಂಬ,** ಪುಟ ೧೦೦.

೨೬. ಡಿ.ಆರ್. ನಾಗರಾಜ್, **ಅಮೃತ ಮತ್ತು ಗರುಡ,** ಪುಟ ೧೦೬.

೨೭. ಅದೇ, ಪುಟ ೧೦೬.

೨೮. ಸಿದ್ಧಲಿಂಗ ಪಟ್ಟಣಶೆಟ್ಟಿ, **ಸಾಹಿತ್ಯ ವಿಮರ್ಶೆ-೧೯೮೮,** ಪುಟ ೧೩.

೨೯. ಚಂದ್ರಶೇಖರ ಪಾಟೀಲ, **ಆಯ್ದ ಕವನಗಳು,** ಪುಟ ೩೧.

೩೦. ಕಿ.ರಂ. ನಾಗರಾಜ, **ಇನ್ನೊಂದು ದಿವಸ ಕಾದರೆ ನಷ್ಟವೇ? ಸಂಚಯ, ಸಂಪುಟ-೧೯, ಸಂಚಿಕೆ -೮೮,** ಪುಟ ೭೪.

೩೧. ಜಂಬಣ್ಣ ಅಮರಚಿಂತ, **ಅಧೋ ಜಗತ್ತಿನ ಅಕಾವ್ಯ,** ಪುಟ ೫೨.

೩೨. ಪ್ರತಿಭಾ ನಂದಕುಮಾರ್, **ಆಹಾ, ಪುರುಷಾಕಾರಂ,** ಮುನ್ನುಡಿ, ಪುಟ vi.

೩೩. ವೈದೇಹಿ, **ಹೂವ ಕಟ್ಟುವ ಕಾಯಕ,** ಪುಟ ೩೧.

೩೪. ಕೆ. ಷರೀಫಾ, **ಹೊಸ ಶತಮಾನದ ಕಾವ್ಯ,** ಮುನ್ನುಡಿ.

೩೫. ರಾಜೇಂದ್ರ ಚೆನ್ನಿ, **ಎಲ್ಲವೂ ಹೊಸದು,** ಪುಟ ೮೨.

೩೬. ಅದೇ.

೩೭. ಆರೀಫ್‌ರಾಜಾ, **ಕಲ್ಲಾದವರ ಮುಂದೆ ಕವಿತೆ,** ಪ್ರಜಾವಾಣಿ ಸಾಪ್ತಾಹಿಕ ಪುರವಣಿ, ೨೩ ಮಾರ್ಚ್, ೨೦೧೪.

೩೮. ವಸುಧೇಂದ್ರ, ಫೇಸ್‌ಬುಕ್, ಟ್ವೀಟರ್ ಮತ್ತು ಬ್ಲಾಗುಗಳು: ಸಮಸ್ಯೆ, ಪರಿಣಾಮ, **ಕಲ್ಯಾಣ ಕರ್ನಾಟಕ,** ಪುಟ ೪೧೩.

೩೯. ಜ.ನಾ. ತೇಜಶ್ರೀ, **ಕವಿತೆ: ೨೦೧೪,** ಕವಿತೆಯೆಂಬ ರೂಪಕ, ಪುಟ–೫.

೪೦. ಚಂದ್ರಶೇಖರ ತಾಳ್ಯ, ಕಾವ್ಯದ ಸಾವು ಮತ್ತು ನವ ಮೌಖಿಕತೆ, **ಅಗ್ನಿ, ಸಂಪುಟ–೧೩, ಸಂಚಿಕೆ–೧೬.**

೪೧. ಡಿ.ಆರ್. ನಾಗರಾಜ್, ನವಮೌಖಿಕತೆ ಮತ್ತು ಕಾವ್ಯ, **ಸಾಹಿತ್ಯ ಕಥನ,** ಪುಟ ೨೨೧.

೪೨. ನಟರಾಜ್ ಹುಳಿಯಾರ್, **ಗಾಳಿ ಬೆಳಕು,** ಪುಟ ೧೮೫.

೪೩. ಕೇಶವ ಮಳಗಿ, **ಕಡಲಾಚೆಯ ಚೆಲುವೆ,** ಪುಟ viii.



ಅಧ್ಯಾಯ : ನಾಲ್ಕು

# ಸಮಕಾಲೀನ ಕನ್ನಡ ಕಾವ್ಯ: ಪ್ರತಿರೋಧದ ನೆಲೆಗಳು

**೪.೧. ಜಾಗತೀಕರಣಕ್ಕೆ ತೋರಿದ ಪ್ರತಿಕ್ರಿಯೆ**

**೪.೨. ಕೋಮುವಾದ ಮತ್ತು ಮತೀಯ ಸಂಘರ್ಷದ ಸ್ವರೂಪ**

೪.೨.೧. ಸಂಘರ್ಷದ ನೆಲೆ

೪.೨.೨. ಧಾರ್ಮಿಕ ಹಿಂಸೆ: ಪ್ರತಿರೋಧದ ನೆಲೆ

೪.೨.೩. ಸೌಹಾರ್ದತೆಯ ನೆಲೆ

೪.೨.೪. ಮಾನವೀಯ ನೆಲೆ

**೪.೩. ಚರಿತ್ರೆ ಮತ್ತು ಪುರಾಣ: ಅನುಸಂಧಾನ**

೪.೩.೧. ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ

೪.೩.೨. ಹೆಮ್ಮೆ ಪಡುತ್ತೇನೆ ಹೆಣ್ಣಾಗಿ ಹುಟ್ಟಿದ್ದಕ್ಕೆ

**೪.೪. ಪ್ರತಿರೋಧದ ಸ್ವರೂಪ**

ಅಧ್ಯಾಯ :ನಾಲ್ಕು

# ಸಮಕಾಲೀನ ಕನ್ನಡ ಕಾವ್ಯ: ಪ್ರತಿರೋಧದ ನೆಲೆಗಳು

ಜಾಗತೀಕರಣವು ಬಡ ಹಾಗೂ ಶ್ರೀಮಂತ ರಾಷ್ಟ್ರಗಳ ನಡುವೆ ಆರ್ಥಿಕ, ಸಾಮಾಜಿಕ ಅಸಮಾನತೆಯನ್ನು ಉಂಟುಮಾಡಿ ಭಾರತದಂಥ ಬಡ ರಾಷ್ಟ್ರಗಳಲ್ಲಿನ ಜನಸಾಮಾನ್ಯರ ಬದುಕನ್ನು ಇಕ್ಕಟ್ಟಿಗೆ ಸಿಲುಕಿಸಿತು. ಅಷ್ಟೇ ಅಲ್ಲ, ಅವರ ಆರ್ಥಿಕತೆಯ ಮೇಲೆ ತೀವ್ರ ಪರಿಣಾಮ ಉಂಟುಮಾಡಿತು. ಈ ಪ್ರಕ್ರಿಯೆ ಜಾಗತಿಕ ಮಟ್ಟದಲ್ಲಿ ಬಡ ಮತ್ತು ಮಧ್ಯಮ ರಾಷ್ಟ್ರಗಳನ್ನು ಹೊಸ ರೀತಿಯ ಗುಲಾಮತನಕ್ಕೆ ದೂಡಿದೆ. ಅಲ್ಲದೆ ಶಿಕ್ಷಣ, ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳು ಪರಕೀಯ ಭಾವವನ್ನು ಅನುಭವಿಸುವಂತಾಯಿತು. ವಿಶ್ವಗ್ರಾಮ(Globle Village) ಎಂಬ ಹೆಸರಿನಲ್ಲಿ ಸಣ್ಣಪುಟ್ಟ ರಾಷ್ಟ್ರಗಳನ್ನು ದಾರಿದ್ರ್ಯಕ್ಕೆ ತಳ್ಳಲಾಯಿತು. ಬಹುರಾಷ್ಟ್ರೀಯ ಕಂಪನಿಗಳ ಪ್ರವೇಶದಿಂದ ನೈಸರ್ಗಿಕ ಸಂಪನ್ಮೂಲ ನಾಶವಾಗಿ ದೇಶಿಯ ಉದ್ದಿಮೆ ಮತ್ತು ಗುಡಿ ಕೈಗಾರಿಕೆಗಳು ವಿನಾಶದ ಅಂಚಿಗೆ ತಲುಪಿವೆ. ಗುಡಿ ಕೈಗಾರಿಕೆಗಳು ಹಾಗೂ ದೇಶಿಯ ಉದ್ದಿಮೆಗಳು ಮುಚ್ಚಲ್ಪಡುತ್ತಿರುವುದ ರಿಂದ ನಿರುದ್ಯೋಗ, ಬಡತನ ಸಮಸ್ಯೆಗಳು ಹೆಚ್ಚಳವಾಗಿ ದೇಶಿಯ ವಸ್ತುಗಳ ಉತ್ಪನ್ನಗಳ ಮೇಲೆ ಅಗಾಧವಾದ ಪರಿಣಾಮ ಬೀರಿತು.

ಹಿಂದೆ ಭೌತಿಕ ಸ್ವರೂಪದಲ್ಲಿದ್ದ ಶೋಷಣೆಯ ಬಗೆಗಳು ಇಂದು ಬೌದ್ಧಿಕವಾಗಿ ಮನುಷ್ಯರಲ್ಲಿ ಜಾಗೃತಗೊಂಡಿವೆ. ಆದ್ದರಿಂದ ಇದರ ಶೋಷಿತ ಮುಖಗಳು ಕಣ್ಣಿಗೆ ಕಾಣದಷ್ಟು ಅಮೂರ್ತ ವಾಗಿವೆ.

ಜಾಗತೀಕರಣವು ಹಸಿರುಕ್ರಾಂತಿಯ (Green Revolution) ರೂಪದಲ್ಲಿ ಭಾರತಕ್ಕೆ ಬಂದು, ತನ್ನ ಕಬಂಧ ಬಾಹುಗಳನ್ನು ಕ್ರಮೇಣ ವಿಸ್ತರಿಸಿತು. ಅಂದಿನಿಂದ ಈ ಜಾಗತೀಕರಣ ಪ್ರಕ್ರಿಯೆಯು ಜನರ ಜೀವನ ವಿಧಾನದಲ್ಲಿ ಬೇರೂರಿತು. ಅಷ್ಟೇ ಅಲ್ಲ, ಗ್ರಾಮ-ನಗರ ಸಂಘರ್ಷ, ಕುಟುಂಬ ವಿಘಟನೆ, ನಮ್ಮ ಆಲೋಚನಾ ವಿಧಾನಗಳ ಮೇಲೆ ತೀವ್ರವಾದ ಬದಲಾವಣೆ ಉಂಟುಮಾಡಿತು. ಜಾಗತೀಕರಣ ಭಾರತದಂತಹ ತೃತೀಯ ರಾಷ್ಟ್ರಗಳ ಮೇಲೆ ಪರಿಣಾಮ ಬೀರಿ, ಇಲ್ಲಿನ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ ವಲಯಗಳ ಮೇಲೆ ಸವಾರಿ ಮಾಡುತ್ತಿದೆ. ಅದರಲ್ಲೂ ಆರ್ಥಿಕತೆಯ ಮೇಲೆ ಇದು ಮೊದಲು ಪ್ರಭಾವಿಸಿತು. ನಂತರ ಸಾಮಾಜಿಕ,

ಶೈಕ್ಷಣಿಕ ವಲಯಗಳನ್ನು ಇದು ಆಕ್ರಮಿಸಿಕೊಂಡು ತನ್ನ ಹಿಡಿತದಲ್ಲಿರಿಸಿಕೊಳ್ಳುವ ಪ್ರಯತ್ನ ಮಾಡಿತು.

ಜಾಗತೀಕರಣದ ನಂತರ ನಮ್ಮ ಅಧ್ಯಯನ ಶಿಸ್ತುಗಳು ಬದಲಾದವು. ೨೦ನೆಯ ಶತಮಾನದಲ್ಲಿ ಭಾರತದಂತಹ ಹಿಂದುಳಿದ ರಾಷ್ಟ್ರಗಳು ವಸಾಹತುಶಾಹಿ ಅಥವಾ ಆಧುನೀಕರಣದ ಪ್ರಭಾವಕ್ಕೆ ಒಳಗಾದರೆ, ಪ್ರಸ್ತುತ ಸಂದರ್ಭದಲ್ಲಿ, ಅಂದರೆ ೨೧ನೆಯ ಶತಮಾನದ ನವವಸಾಹತುಶಾಹಿ ಸಂದರ್ಭದಲ್ಲಿ ನಮ್ಮ ಜೀವನ ವಿಧಾನವನ್ನು ಜಾಗತೀಕರಣವು ನಿಯಂತ್ರಿಸುತ್ತಿದೆ.

"ಇಂದು ಅತಿ ಬಳಕೆಯಲ್ಲಿರುವ ಪದವೆಂದರೆ ಜಾಗತೀಕರಣ. ಆರ್ಥಿಕ ವಿಷಯದ ಬಗ್ಗೆ ಚಿಂತಿಸುವವರು ಜಾಗತೀಕರಣವನ್ನು ಬಂಡವಾಳದ ಅನಿಯಮಿತ ಚಲನೆಯ ಸಂದರ್ಭ ಎನ್ನುತ್ತಾರೆ. ಬಲಹೀನವಾಗುವ ಪ್ರಭುತ್ವ, ಐಡೆಂಟಿಟಿ ರಾಜಕೀಯ, ಸಾಂಸ್ಕೃತಿಕ ರಾಜಕಾರಣ ಇತ್ಯಾದಿ ಅಂಶಗಳ ಮೂಲಕ ರಾಜಕೀಯ ವಲಯದಲ್ಲಿ ಜಾಗತೀಕರಣದ ಪ್ರಭಾವವನ್ನು ಗುರುತಿಸಲಾಗುತ್ತದೆ. ಪಶ್ಚಿಮದ ಸಾಂಸ್ಕೃತಿಕ ದಾಳಿಯಿಂದ ನಮ್ಮ ದೇಶೀ ಸಂಸ್ಕೃತಿಯ ಮೇಲೆ ಆಗುತ್ತಿರುವ ಪರಿಣಾಮ, ಸಾಂಸ್ಕೃತಿಕ ವಲಯದಲ್ಲಿ ನಡೆಯುತ್ತಿರುವ ಜಾಗತೀಕರಣದ ಚರ್ಚೆಯ ಮುಖ್ಯ ವಸ್ತು. ಪೆಪ್ಸಿ, ಕೋಕ್, ಹಾಲಿವುಡ್ ಸಿನಿಮಾಗಳು, ಪಾಪ್ ಮ್ಯೂಸಿಕ್, ಮೆಕ್‌ಡೊವೆಲ್ ಚೈನ್ ಸ್ಟೋರ್ ಇತ್ಯಾದಿಗಳು ನಮ್ಮ ಸಂಸ್ಕೃತಿಯನ್ನು ಕಾಡುವ ಸಂಗತಿಗಳಾಗಿವೆ. ಸಣ್ಣ ಕುಟುಂಬ, ದುಡಿಯುವ ಹೆಂಡತಿ, ಜಾತಿ ಐಡೆಂಟಿಟಿಯಲ್ಲಿ ಆಗುತ್ತಿರುವ ಬದಲಾವಣೆ, ಆಧುನಿಕ ಮಾಹಿತಿ ತಂತ್ರಜ್ಞಾನ, ಶಿಕ್ಷಣ ಇತ್ಯಾದಿಗಳು ಜಾಗತೀಕರಣದ ಸಾಮಾಜಿಕ ಪರಿಣಾಮಗಳೆಂದು ಪರಿಗಣಿಸಲಾಗುತ್ತಿದೆ. ಇದೊಂದು ರೀತಿಯಲ್ಲಿ ಕುರುಡರು ಆನೆ ಮುಟ್ಟಿ ನೋಡಿದ ಕತೆ ಇದ್ದಂತೆ. ಅವರವರ ಆಶಯದಂತೆ ಜಾಗತೀಕರಣ ಕೂಡ ವ್ಯಾಖ್ಯಾನಿಸಲ್ಪಡುತ್ತಿದೆ. ಹಾಗೆಂದು ಮೇಲಿನ ವಿವರಣೆಗಳು ತಪ್ಪೆನ್ನುವುದು ನನ್ನ ವಾದವಲ್ಲ. ಆದರೆ ಯಾವುದಾದರೂ ಒಂದು ದೃಷ್ಟಿಕೋನ ಜಾಗತೀಕರಣದ ಸಮಗ್ರತೆಯನ್ನು ಪರಿಚಯಿಸಲು ಸಾಧ್ಯವಿಲ್ಲ".[೧]

ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಆರ್ಥಿಕತೆಯನ್ನು ಸುಧಾರಿಸುವ ನಿಟ್ಟಿನಲ್ಲಿ ಈ ಜಾಗತೀಕರಣವು ವರದಾನವಾಗುತ್ತದೆಂಬ ನಂಬಿಕೆ ಇತ್ತು. ಅದರಲ್ಲೂ ಭಾರತದಂತಹ ಬಡರಾಷ್ಟ್ರಗಳಲ್ಲಿ ವಿದೇಶಿ ಬಂಡಾವಳ ಹೂಡಿಕೆಯಿಂದ ಮತ್ತು ಖಾಸಗಿ ಕಂಪನಿಗಳು ಉದ್ಯೋಗ ಸೃಷ್ಟಿ ಮಾಡುವುದರಿಂದ ಜನರ ಬದುಕು ಸುಧಾರಿಸಬಹುದೆಂದು ಭಾವಿಸಲಾಗಿತ್ತು. ಜೊತೆಗೆ ದೇಶದ ಮಾರುಕಟ್ಟೆ ಮತ್ತು ಆರ್ಥಿಕತೆ ವೃದ್ಧಿಯಾದಂತೆ ಪ್ರತಿಯೊಬ್ಬ ವ್ಯಕ್ತಿಯೂ ಇದರ ಲಾಭ ಪಡೆಯುತ್ತಾನೆ ಎಂದೇ ತಿಳಿಯಲಾಗಿತ್ತು. ಆದರೆ ಈ ನಿರೀಕ್ಷೆಗಳೆಲ್ಲ ಸುಳ್ಳು ಎಂದು ಜನರಿಗೆ ಆಮೇಲೆ ಗೊತ್ತಾಯಿತು. ಬದಲಾಗಿ ಉಳ್ಳವರು ಮತ್ತು ಇಲ್ಲದವರ ನಡುವೆ ಅಂತರ ಸೃಷ್ಟಿ ಮಾಡಿ ಸಾಮಾಜಿಕ ಮತ್ತು ಆರ್ಥಿಕ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿತು. ಅಷ್ಟೇ ಅಲ್ಲ; ಇದು ಪುರುಷ ಪ್ರಧಾನ ವ್ಯವಸ್ಥೆಯ ಪರವಾಗಿ ವಕಾಲತ್ತು ವಹಿಸುತ್ತಿರುವುದರಿಂದ ಸಾಂಪ್ರದಾಯಿಕ

ಮತ್ತು ಪುರುಷ ಪ್ರಧಾನ ಮೌಲ್ಯಗಳಿಗೆ ಪುಷ್ಟಿ ನೀಡುತ್ತಿದೆ. ಇದರಿಂದ ಸ್ತ್ರೀಯರು ಪುರುಷ ಪ್ರಧಾನ ವ್ಯವಸ್ಥೆಯಿಂದ ಮತ್ತಷ್ಟು ಶೋಷಣೆಗೆ ಒಳಗಾಗುತ್ತಿದ್ದಾರೆ. ಕೆಲವು ವಲಯಗಳಲ್ಲಿಯಾದರೂ ಮಹಿಳೆಯರಿಗೆ ಪ್ರಾತಿನಿಧ್ಯ ಸಿಗುತ್ತಿದೆಯಾದರೂ ಅವರಿಗೆ ಸೂಕ್ತ ರಕ್ಷಣೆಯಾಗಲಿ, ಗೌರವವಾಗಲಿ ಸಿಗುತ್ತಿಲ್ಲ. ಇಂಥ ಕಾರಣಗಳು ಮಹಿಳೆಯರ ನೆಮ್ಮದಿ ಮತ್ತು ರಕ್ಷಣೆಗಳಿಗೆ ಭಂಗತಂದಿವೆ. ಇವೆಲ್ಲವು ಪುರುಷ ಮತ್ತು ಸ್ತ್ರೀಯರ ನಡುವೆ ಮತ್ತಷ್ಟು ಅಸಮಾನತೆಯನ್ನು ಉಂಟುಮಾಡಿವೆ.

"ಭಾರತದ ಮಟ್ಟಿಗೆ ಈ ಜಾಗತೀಕರಣದ ಪ್ರಕ್ರಿಯೆ ಬಿರುಸುಗೊಂಡದ್ದು ಎಂಬತ್ತರ ದಶಕದಲ್ಲಿ. ಭಾರತ ತನ್ನ ಅಲಿಪ್ತ ನೀತಿಯನ್ನು ಬಿಟ್ಟುಕೊಟ್ಟು ಅಮೇರಿಕಕ್ಕೆ ಹತ್ತಿರವಾಗತೊಡಗಿದ್ದೂ ಅದೇ ಕಾಲದಲ್ಲಿ. ಆ ದಶಕದ ಇನ್ನೊಂದು ಬೆಳವಣಿಗೆ, ಹೆಚ್ಚುತ್ತ ಹೋದ ಹಿಂದುತ್ವವಾದದ ಪ್ರಭಾವ. ರಾಜೀವ್‌ಗಾಂಧಿ ಮತ್ತು ಮನಮೋಹನ್‌ಸಿಂಗ್ ಜಾಗತೀಕರಣದ ಕಾರ್ಯಕ್ರಮಗಳನ್ನು ಒಂದೊಂದಾಗಿ ಕೈಗೆತ್ತಿಕೊಳ್ಳುತ್ತಿದ್ದ ಕಾಲವೇ ರಾಮಜನ್ಮಭೂಮಿ ಚಳವಳಿಯ ಉನ್ಮಾದ ಮತ್ತು ಹಿಂಸೆಗಳ ಕಾಲವೂ ಆಗಿತ್ತು. ರಾಮಜನ್ಮಭೂಮಿ ಚಳವಳಿಯ ಸಮೂಹ ಸನ್ನಿಯಲ್ಲಿ ಅಧಿಕಾರಕ್ಕೆ ಏರಿದ ಬಿ.ಜೆ.ಪಿ, ಕಾಂಗ್ರೆಸ್ ಅನುಷ್ಠಾನಕ್ಕೆ ತಂದ ಜಾಗತೀಕರಣದ ಕ್ರಮಗಳನ್ನು ಚಾಚೂತಪ್ಪದೇ ಮುಂದುವರಿಸಿಕೊಂಡು ಹೋಗುತ್ತಿದೆ. ಅಷ್ಟು ಮಾತ್ರವೇ ಅಲ್ಲ, ಬಿ.ಜೆ.ಪಿ. ಸರಕಾರ, ಅಮೇರಿಕಾದ ಅಧ್ಯಕ್ಷರ ಎದುರು ತಗ್ಗಿ ಬಗ್ಗಿ ನಡೆದುಕೊಂಡಷ್ಟು ವಿಧೇಯವಾಗಿ ಹಿಂದಿನ ಯಾವ ಸರಕಾರವೂ ನಡೆದುಕೊಂಡಿರಲಿಲ್ಲ. ಬಿ.ಜೆ.ಪಿ.ಯದ್ದು ಜಗತ್ತಿನಲ್ಲಿ ಎಲ್ಲಿಯೂ ದೊರೆಯದ ಬ್ರಾಂಡಿನ ರಾಷ್ಟ್ರೀಯವಾದ. ಅದರಲ್ಲಿ ಎನ್ರಾನ್‌ನಂತಹ ತಲೆಬೋಳಿಸುವ ಒಪ್ಪಂದಕ್ಕೂ ಅವಕಾಶವಿದೆ. ಅಮೇರಿಕಾದ ಅಧ್ಯಕ್ಷರಿಗೆ ಚೆಂಬು ಹಿಡಿಯುವುದಕ್ಕೂ ಮನ್ನಣೆ ಇದೆ".[೨]

ಕೇಂದ್ರದಲ್ಲಿ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಸರ್ಕಾರಗಳ ದುರಾಡಳಿತ ಮತ್ತು ದೂರದ ಆಲೋಚನೆ ಇಲ್ಲದ ನೀತಿಗಳಿಂದ ಪ್ರವೇಶ ಮಾಡಿದ ಜಾಗತಿಕ ಮಾರುಕಟ್ಟೆಯು ಭಾರತದ ಸ್ಥಳೀಯ ಗುಡಿ ಕೈಗಾರಿಕೆ, ಕೃಷಿ, ಪರಿಸರ ಇನ್ನೂ ಮುಂತಾದ ಕ್ಷೇತ್ರಗಳ ಮೇಲೆ ತೀವ್ರ ಪರಿಣಾಮವನ್ನು ಉಂಟುಮಾಡಿತು. ಬಂಡವಾಳಶಾಹಿಗಳಿಗೆ ತಮ್ಮ ಮನಸ್ಸೋ ಇಚ್ಛೆ ವಿದೇಶಿ ಬಂಡವಾಳ ಊಡಲು ಅವಕಾಶ ಕಲ್ಪಿಸಿಕೊಟ್ಟು; ಇಲ್ಲಿನ ನೆಲ, ಜಲ, ಜನರ ಜೀವನ ವಿಧಾನ ಹಾಗೂ ಪ್ರಾಕೃತಿಕ ಸಂಪತ್ತನ್ನು ವಿನಾಶಗೊಳಿಸಲಾರಂಭಿಸಿದರು.

"ಜಾಗತೀಕರಣದ ಶಕ್ತಿಗಳು 'ಜಗತ್ತೇಹಳ್ಳಿ'ಯಾಗಿ ಮಾರ್ಪಾಡುಗೊಳ್ಳುತ್ತದೆ ಎಂದು ಪರಿಭಾವಿಸುವ ಕಲ್ಪನೆಯ ಒಳಗೆ ನಿಜವಾದ ಹಳ್ಳಿಗಳು ಗೈರು ಹಾಜರಾಗಿದೆ. ಹಳ್ಳಿಗಳ ಬಡರೈತರ ಕುಟುಂಬಗಳ ಮಹಿಳೆಯರ ಸ್ಥಿತಿ ಅತಿ ಧಾರುಣವಾಗಿದೆ. ಕೃಷಿ ಕ್ಷೇತ್ರದಲ್ಲಿ ಬಂಡವಾಳಶಾಹಿತ್ವದ ಪ್ರವೇಶದಿಂದಾಗಿ ಕೃಷಿ ಮತ್ತು ಹೈನುಗಾರಿಕೆಯನ್ನೆ ಆಶ್ರಯಿಸಿದ ಕುಟುಂಬಗಳ ಒಳಗಿರುವ ಬಡತನ, ಪುರುಷರ ಸಾಲ, ದಿವಾಳಿತನ, ಅವರ ಆತ್ಮಹತ್ಯೆ ಇಂಥವುಗಳಿಂದ ಮಕ್ಕಳನ್ನು ಸಾಕುವ ಜವಾಬ್ದಾರಿಗಳಿಂದ ಹಳ್ಳಿಯ ಬಡರೈತ ಹೆಣ್ಣು ಮಕ್ಕಳು ತತ್ತರಿಸಿ ಹೋಗಿದ್ದಾರೆ.

ಕುಟುಂಬದ ಒಳಗೆ ಮಹಿಳೆಯರಿಗೆ ಸಿಗಬೇಕಾದ ಭದ್ರತೆ ಹೇಳ ಹೆಸರಿಲ್ಲದೆ ಮಾಯವಾಗಿರುವ ಸ್ಥಿತಿ ಇದಾಗಿದೆ".[೩]

ಜಾಗತೀಕರಣ ಪ್ರಕ್ರಿಯೆಯ ಪರಿಣಾಮಗಳನ್ನು ಶೋಧಿಸುವಾಗ ಕೇವಲ ಆರ್ಥಿಕ ಯಜಮಾನಿಕೆಯನ್ನಷ್ಟೇ ಕೇಂದ್ರವಾಗಿಸಿಕೊಂಡು ವಿಶ್ಲೇಷಣೆಗೆ ತೊಡಗಬೇಕೆ? ಜಾಗತೀಕರಣದ ಪರಿಣಾಮ ತೃತೀಯ ರಾಷ್ಟ್ರಗಳು ಎಂದು ಕರೆಯಲ್ಪಡುವ ದೇಶಗಳಲ್ಲಷ್ಟೇ ಸಂಭವಿಸುತ್ತಿದೆಯೇ ಇತ್ಯಾದಿ ಸಂಕೀರ್ಣ ವಾಸ್ತವಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಇಲ್ಲದೆ ಹೋದರೆ ಜಾಗತೀಕರಣದ ವಿಶ್ವಮಾನವನ್ನು ಸರಳೀಕರಿಸಿದಂತಾಗುತ್ತದೆ. ಇತ್ತೀಚೆಗಂತು ಕನ್ನಡದ ಸಂದರ್ಭದಲ್ಲಿ ಪ್ರತಿಯೊಂದು ಸಮಸ್ಯೆಗೂ ಈ ಜಾಗತೀಕರಣವೇ ಹೊಣೆ ಎಂದು ಬೆಟ್ಟು ಮಾಡಿ ತೋರಿಸುವುದು ತುಂಬಾ ಕ್ಲೀಷೆ ಎನಿಸುತ್ತಿದೆ. ಏಕೆಂದರೆ ಜಾಗತೀಕರಣವು ವಸಾಹತುಶಾಹಿಯ ಇನ್ನೊಂದು ಹಂತವಾಗಿ ನಮಗೆ ಗೋಚರಿಸುತ್ತಿರುವಾಗ ಹಾಗೂ ಇದರ ಬೇರೆ ಬೇರೆ ಮುಖಗಳಾದ ಉದಾರೀಕರಣ, ಖಾಸಗೀಕರಣ, ನಗರೀಕರಣಗಳ ಬಗೆಗೂ ಗಂಭೀರವಾಗಿ ಚಿಂತಿಸಬೇಕಾದ ತುರ್ತು ತುಂಬಾ ಇದೆ. ಆಗ ಇದನ್ನು ಇನ್ನಷ್ಟು ಸ್ಪಷ್ಟವಾಗಿ ಮೌಲ್ಯೀಕರಿಸಲು ಸಾಧ್ಯ.

ಜಾಗತೀಕರಣವು ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಗಳ ಮೇಲೆ ಪ್ರಭಾವಿಸಿದೆಯೇ ಎಂಬ ಪ್ರಶ್ನೆ ಬಹುತೇಕರಿಗೆ ಎದುರಾಗಿದೆ. ಒಂದು ವೇಳೆ ಈ ಜಾಗತೀಕರಣದ ಪ್ರಭಾವ ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಗಳ ಮೇಲೆ ಆಗಿದ್ದರೆ ಅದನ್ನು ಸ್ಪಷ್ಟ ಮತ್ತು ಖಚಿತವಾಗಿ ಗುರುತಿಸಲು ಸಾಧ್ಯವಾಗುತ್ತಿಲ್ಲ ಏಕೆ? ಎಂಬ ಪ್ರಶ್ನೆಗಳು ಸಹ ಇಲ್ಲಿ ಉದ್ಭವಿಸಿವೆ. ಆದ್ದರಿಂದ ಜಾಗತೀಕರಣ ಪ್ರಕ್ರಿಯೆಯ ನಂತರ ಜರುಗಿದ ವಿದ್ಯಮಾನಗಳು ಮತ್ತು ಅದಕ್ಕೆ ವ್ಯಕ್ತವಾದ ಪ್ರತಿಕ್ರಿಯೆಗಳ ಹಿನ್ನೆಲೆಯಲ್ಲಿ ಈ ಚರ್ಚೆಯನ್ನು ಬೆಳೆಸಬಹುದು ಅನಿಸುತ್ತದೆ.

ಜಾಗತೀಕರಣ ಎಂಬ ಪದವನ್ನು ೯೦ರ ದಶಕದಿಂದ ಇತ್ತೀಚೆಗೆ ಹೆಚ್ಚಾಗಿ ಬಳಸಲಾಗುತ್ತಿದೆ. ನಮ್ಮ ಚಿಂತನಾ ವಲಯಗಳಲ್ಲಿ ತುಂಬಾ ಕೇಳಿಬರುತ್ತಿರುವ ಪದಗಳಲ್ಲಿ ಇದೂ ಒಂದು. ಆದ್ದರಿಂದ "ಜಗತ್ತಿನಲ್ಲಿ ಏನಾದರೂ ಹೊಸ ಬದಲಾವಣೆಗಳಾದಾಗ ಮನುಷ್ಯ ಅದನ್ನು ಮತ್ತೆ ಮತ್ತೆ ಚರ್ಚಿಸಲು ತೊಡಗುತ್ತಾನೆ. ಜಾಗತೀಕರಣದ ವಿಷಯದಲ್ಲೂ ಕೂಡ ಅದೇ ರೀತಿಯ ಚರ್ಚೆಗಳು ಹುಟ್ಟಿಕೊಂಡವು. 'ಜಾಗತೀಕರಣ' ಪದದ ಅತಿಯಾದ ಬಳಕೆಯಿಂದ ಅದಕ್ಕೆ ಇರಬೇಕಾದ ಖಚಿತತೆ ಹೊರಟುಹೋಗಿದೆ."[೪] ಅಷ್ಟೇ ಅಲ್ಲ, ಸಾಹಿತ್ಯ ಮತ್ತು ಚರಿತ್ರೆಯ ನಡುವಿನ ಸಂಬಂಧವನ್ನು ಸೂಕ್ಷ್ಮವಾಗಿ ಅವಲೋಕನ ಮಾಡಿ ನೋಡದಿದ್ದಾಗ ಈ ಸಮಸ್ಯೆ ಉದ್ಭವಿಸುತ್ತದೆ. ಕನ್ನಡವನ್ನು ಒಳಗೊಂಡಂತೆ ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ರಚನೆಯಾಗುತ್ತಿರುವ ಸಾಹಿತ್ಯ, ಸಂಸ್ಕೃತಿಯ ಮೇಲೆ ಜಾಗತೀಕರಣದ ಪ್ರಭಾವ ಆಗುತ್ತಿದೆಯೇ? ಎಂಬ ಪ್ರಶ್ನೆ ಇತ್ತೀಚಿನ ಸಾಹಿತ್ಯ, ಸಂಸ್ಕೃತಿಯ ಚರ್ಚೆಗಳ ಸಂದರ್ಭದಲ್ಲಿ ಕೇಳಿಬರುತ್ತಿದೆ. ಜೊತೆಗೆ ಈ ವಿಷಯದ ಬಗೆಗೆ ಬಹುತೇಕರಲ್ಲಿ ದ್ವಂದ್ವಗಳಿದ್ದಂತೆ ಕಾಣುತ್ತದೆ. ೯೦ರ ದಶಕದಿಂದ

ಈಚೇಗೆ ರಚನೆಯಾಗುತ್ತಿರುವ ಕನ್ನಡ ಕಾವ್ಯದಲ್ಲಿ ಜಾಗತೀಕರಣ, ನಗರೀಕರಣ ಮತ್ತು ಉದಾರೀಕರಣ ಪ್ರಕ್ರಿಯೆಗಳ ಬಗ್ಗೆ ವ್ಯಕ್ತವಾಗಿರುವ ಪ್ರತಿಕ್ರಿಯೆಗಳನ್ನು ಗಮನಿಸಿದರೆ ಕನ್ನಡ ಸಾಹಿತ್ಯದ ಮೇಲೆ ಜಾಗತೀಕರಣದ ಪ್ರಭಾವ ಆಗಿದೆಯೇ? ಅಥವಾ ಇಲ್ಲವೇ? ಎಂಬ ಪ್ರಶ್ನೆಗೆ ಉತ್ತರ ದೊರೆಯುತ್ತದೆ.

ಕುತೂಹಲದ ವಿಷಯವೆಂದರೆ "ಇವತ್ತು ನಾವು ಹೇಳುತ್ತಿರುವ ನಾವೊಂದು ಪ್ರಪಾತದ ಅಂಚಿನಲ್ಲಿದ್ದೇವೆ, ಇನ್ನು ಮುಂದೆ ಸಾಹಿತ್ಯಸೃಷ್ಟಿ ಎನ್ನುವದು ನಾಶವಾಗಬಹುದು, ಆ ಸಾಹಿತ್ಯಕ್ಕೆ ತಳಹದಿಯಾಗಬಲ್ಲ ನಮ್ಮ ಸಂಸ್ಕೃತಿಗಳು, ಸ್ಥಳೀಯ ಸಂಸ್ಕೃತಿಗಳು ವಿನಾಶವನ್ನು ತಲುಪಬಹುದು ಎಂಬಂತಹ ನಮ್ಮ ವಿಚಾರಗಳಿವೆಯಲ್ಲ ಇದೇ ವಿಚಾರಗಳನ್ನು ಹೇಳುವ ರೂಪಗಳನ್ನು ಆಧುನೀಕರಣದ ಸಂದರ್ಭದಲ್ಲಿ ಕೂಡ ನಮ್ಮ ಸಂಸ್ಕೃತಿ ಭಾಷೆಗಳು ಬೆಳೆಸಿರುವುದನ್ನು ಗಮನಿಸಬಹುದು."[೫] ಅಂದರೆ ನಮ್ಮ ಸಂಸ್ಕೃತಿ ನಿರ್ವಚನಗಳಲ್ಲಿಯೇ ಗೊಂದಲಗಳಿವೆ ಎಂಬುದನ್ನು ಜಾಗತೀಕರಣದ ಬಗೆಗಿನ ಚರ್ಚೆಗಳ ಮೂಲಕ ಅರಿಯಬಹುದು. ಅದರಲ್ಲೂ 'ಸಂಸ್ಕೃತಿ'ಯೆಂದರೆ 'ಸ್ಥಳಿಯ'ವಾದದ್ದು, 'ಜಾಗತೀಕರಣ'ವೆಂದರೆ 'ವಿಶ್ವಾತ್ಮಕ'ವಾದದ್ದು ಎಂಬ ಗ್ರಹಿಕೆ ನಮ್ಮಲ್ಲಿದೆ. ಜೊತೆಗೆ 'ಜಾಗತೀಕರಣ' ಪ್ರಕ್ರಿಯೆ ತೃತೀಯ ರಾಷ್ಟ್ರಗಳೆಂದು ಕರೆಯಲ್ಪಡುವ 'ಅಭಿವೃದ್ಧಿಶೀಲ ದೇಶಗಳಲ್ಲಿ ಮಾತ್ರ ಸಂಭವಿಸುತ್ತಿದೆ ಎಂಬ ನಿಲುವುಗಳೂ ಇವೆ. ಆದರೆ "ಅದೇ ರೀತಿಯ ಆತಂಕವನ್ನು ಲ್ಯಾಟಿನ್ ಅಮೇರಿಕ ದೇಶದ ಜನರೂ ಪಡುತ್ತಿದ್ದಾರೆ. ವಿಶ್ವದ ಹಲವಾರು ಚಿಕ್ಕಪುಟ್ಟ ಸಮುದಾಯಗಳಲ್ಲಿ ಬಹುಮುಖಿ ಸಂಸ್ಕೃತಿ ಇರುವ, ಬಹುಭಾಷಿಕ ಸಮುದಾಯಗಳಿರುವ ಎಲ್ಲ ಕಡೆಗಳಲ್ಲಿಯೂ ಈ ರೀತಿಯ ಅಪಾಯ ಎದುರಾಗಿರುವುದನ್ನು ಕಾಣಬಹುದು."[೬] ಇದರ ಹೊರತಾಗಿಯೂ ಅದೇ ಅಮೆರಿಕಾದಂಥ ಬೃಹತ್ ರಾಷ್ಟ್ರಗಳು ಏಕರೂಪಿಯಾದ ಅಂತರವಾಷ್ಟ್ರೀಯ ನೀತಿಯನ್ನು ಅಪೇಕ್ಷಿಸುವಂತೆಯೇ, ಏಕರೂಪಿಯಾದ ಜೀವನಕ್ರಮವನ್ನೇ ಬಯಸುತ್ತವೆ. ಇಂಥ ಯಜಮಾನಿಕೆಯ ಗುಣವೇ ವಿಶ್ವದ ಆರ್ಥಿಕ ನೀತಿಗಳನ್ನು ನಿಯಂತ್ರಿಸುವಲ್ಲಿ ಪಾತ್ರವಹಿಸುತ್ತವೆ. ಇದಕ್ಕೆ ಈಗಾಗಲೇ ಹಲವು ರೀತಿಯ ಪ್ರತಿರೋಧಗಳೂ ಕೇಳಿಬರುತ್ತಿವೆ.

"ನೆಲ ಕಳೆದುಕೊಂಡವರನ್ನು, ಹೊಲಗಳನ್ನು ಕಳೆದುಕೊಂಡವರನ್ನು ಖಾಸಗೀಕರಣದಿಂದ ಏನನ್ನೆಲ್ಲ ಕಳೆದುಕೊಂಡವರನ್ನು ನಾವು ಗಮನಿಸುತ್ತಾ ಹೋದರೆ ಜಾಗತೀಕರಣಕ್ಕೆ ಪ್ರತಿರೋಧವನ್ನು ಉಂಟುಮಾಡುವ ನೆಲೆಗಳು ಸಾಹಿತ್ಯದಲ್ಲಿ ಸೃಷ್ಟಿಯಾಗಲು ಸಾಧ್ಯ. ಸಾಹಿತಿಗಳು ನಾವು ಇವುಗಳಿಗೆಲ್ಲ ಸ್ಪಂದಿಸಬೇಕು. ಇವುಗಳನ್ನೆಲ್ಲ ಬರೆಯಲೇಬೇಕು ಎಂಬ ಹಠದಿಂದ ಈ ಮಾತನ್ನು ನಾನು ಹೇಳತ್ತಿಲ್ಲ ಅಥವಾ ಹಾಗೆ ಹೇಳಲು ನಮಗೆ ಸಾಧ್ಯವೇ ಇಲ್ಲವಾ? ಎಂದೂ ನಾನು ಪ್ರಶ್ನಿಸುತ್ತೇನೆ."[೭] ಈ ಪ್ರಶ್ನೆಗಳು ನಮಗೆ ಎದುರಾದರೆ ಕನ್ನಡ ಕಾವ್ಯದ ಮೇಲೆ ಜಾಗತೀಕರಣವು ಉಂಟುಮಾಡಿದ ಪರಿಣಾಮಗಳನ್ನು ಚರ್ಚಿಸಲು ಸಾಧ್ಯ.

ಜಾಗತೀಕರಣದ ಚರಿತ್ರೆಗೆ ಉತ್ತರ '೧೭೭೬ರಲ್ಲಿ ತನ್ನ 'ರಾಷ್ಟ್ರಗಳ ಸಂಪತ್ತು'(ವೆಲ್ತ್ ಆಫ್ ನೇಷನ್ಸ್) ಕೃತಿಯಲ್ಲಿ ಆಡಂಸ್ಮಿತ್ ಪ್ರತಿಪಾದಿಸಿದ ನವ ಉದಾರವಾದದ ನೀತಿಗಳಲ್ಲಿ ಅಡಗಿದೆ."[೮] ಈ ನವ ಉದಾರವಾದಿ ನೀತಿಯು ಯಾವುದೇ ರಾಷ್ಟ್ರಗಳು ಆರ್ಥಿಕವಾಗಿ ಪ್ರಗತಿಸಾಧಿಸಲು 'ಮುಕ್ತವಾಣಿಜ್ಯ ನೀತಿಯಿಂದ ಮಾತ್ರ ಸಾಧ್ಯ ಎಂದು ಪ್ರತಿಪಾದಿಸಿತು. ಭಾರತದಲ್ಲಿ ೧೯೮೦ರ ದಶಕದಲ್ಲಿ ಜಾಗತೀಕರಣ ಪರಿಣಾಮದ ಚಹರೆಗಳು ಕಂಡುಬರುತ್ತವೆಯಾದರೂ ೧೯೯೧ರಲ್ಲಿ ಮುಕ್ತ ಮಾರುಕಟ್ಟೆ ನೀತಿ ಭಾರತವನ್ನು ಪ್ರವೇಶಿಸಿದ ನಂತರ ಇದರ ವಿವಿಧ ಆಯಾಮಗಳು ನಮಗೆ ಗೋಚರವಾಗತೊಡಗಿದವು. ಬಡರಾಷ್ಟ್ರಗಳ ಆರ್ಥಿಕ ಸ್ಥಿತಿ-ಗತಿಗಳನ್ನು ಸುಧಾರಿಸುವ ಮೂಲಕ ಪ್ರವೇಶ ಪಡೆದ ಜಾಗತೀಕರಣ ಪ್ರಕ್ರಿಯೆ ಇಂದು ಆರ್ಥಿಕ ಸುಧಾರಣೆಯ ಜೊತೆಗೆ ಶೈಕ್ಷಣಿಕ, ಪ್ರಾಕೃತಿಕ ರಾಜಕೀಯ, ಸಾಮಾಜಿಕ ವಲಯಗಳಿಗೂ ಪ್ರವೇಶಿಸಿ ಸುಧಾರಣೆ ತರುವ ನಾಟಕವಾಡುತ್ತಿದೆ. ಆರ್ಥಿಕ ಸುಧಾರಣೆ ಎಂಬುದು ಮುಕ್ತಮಾರುಕಟ್ಟೆ ನೀತಿಯ ಹಿಂದಿರುವ ಸೋಗು; ಅಷ್ಟೇ ಅಲ್ಲ, ಅದು ಒಂದು ಕುರುಡು ನೆಪವಷ್ಟೆ.

"ಜಾಗತೀಕರಣ ನೀತಿಗಳನ್ನು ಅನುಷ್ಠಾನಗೊಳಿಸಲು ಬಳಸಲಾಗುತ್ತಿರುವ ಸಾಂಸ್ಥಿಕ ಸಂರಚನೆಗಳು ಮೂಲಭೂತವಾಗಿ ಭಾರಿ ಬಂಡವಾಳಿಗರ ಪರವಾಗಿವೆ. ತನ್ನ ಅಲ್ಪಕಾಲಿಕ ಅಧಿಕ ಲಾಭ ಗಳಿಕೆಯ ಮಾದರಿಗಳನ್ನು ಉಪಯೋಗಿಸಿ ಅಮೆರಿಕದ ಹಿತಾಸಕ್ತಿಗಳನ್ನು ರಕ್ಷಿಸುವುದು ಈ ಬಂಡವಾಳಿಗರ ಮೂಲಧ್ಯೇಯವಾಗಿರುತ್ತದೆ. ದಾರಿದ್ರ್ಯ, ಬಡತನ, ಅಸಮಾನತೆ, ಪರಿಸರ ನಾಶವನ್ನು ಪ್ರೇರೇಪಿಸುವ ಈ ನೀತಿಗಳ ಜನವಿರೋಧಿ, ಶ್ರಮವಿರೋಧಿ ಲಕ್ಷಣಗಳೂ ಅದರ ಸಂರಚನೆಯಲ್ಲೇ ಅಡಕವಾಗಿದೆ."[೯] ಇಂಥ ಬಂಡವಾಳಶಾಹಿ ಪರವಾದ ಚಿಂತನೆಗಳನ್ನು ಅನೇಕರು ಪ್ರತಿರೋಧಿಸುತ್ತಲೇ ಬಂದಿದ್ದಾರೆ. ಭಾರತದಂತಹ ಬಡರಾಷ್ಟ್ರಗಳ ಮೇಲೆ ಅಮೆರಿಕಾ ಹೇರುವ ಯಜಮಾನಿಕೆಯ ಕ್ರೌರ್ಯವನ್ನು ಹಲವರು ಟೀಕಿಸಿದ್ದಾರೆ. ಇಡೀ ಜಗತ್ತಿಗೆ ಅಮೆರಿಕಾದಂಥ ಬಂಡವಾಳಶಾಹಿ ರಾಷ್ಟ್ರಗಳ ನಿಜ ಬಣ್ಣ ಬಯಲಾಗುತ್ತಿದೆ. ಆದರೂ ನಮ್ಮ ಮುಂದಿರುವ ಜಾಗತೀಕರಣದ ಬಿಕ್ಕಟ್ಟನ್ನು ದಿಟ್ಟವಾಗಿ ಎಲ್ಲರೂ ಎದುರಿಸಬೇಕಾಗಿದೆ. ಏಕೆಂದರೆ "ಜಾಗತೀಕರಣವೆನ್ನುವುದು ಒಂದು ಅನಿವಾರ್ಯವಾದ ಚಾರಿತ್ರಿಕ ಪ್ರಕ್ರಿಯೆ. ಅದಕ್ಕೆ ತನ್ನದೇ ಆದ ತರ್ಕವಿದೆ. ಅದನ್ನು ಯಾರೂ ತಡೆಯಲಾಗದು. ಹೀಗಾಗಿ ವಿಶ್ವಬ್ಯಾಂಕ್, WTO ಮುಂತಾದ ಸಂಸ್ಥೆಗಳ ಯಾವುದೇ ನಿರ್ದೇಶನವನ್ನು ಭಾರತದಂಥ ದೇಶ ಪಾಲಿಸಬೇಕು."[೧೦]

ಗ್ಯಾಟ್ ಒಪ್ಪಂದದ ಹಿಂದಿರುವ ಬಂಡವಾಳಶಾಹಿ ಹುನ್ನಾರ ಮತ್ತು ತರ್ಕವನ್ನು ಗಮನಿಸಿದರೆ ಅದು ಬಹುರಾಷ್ಟ್ರೀಯರ ಹಿತಾಸಕ್ತಿಗಳನ್ನು ಹೆಚ್ಚಿಸಲು ಸನ್ನದ್ಧವಾಗಿರುವ ಒಂದು ರೀತಿಯ ಸಂರಕ್ಷಣಾ ನೀತಿಗಳ ಮತ್ತು ಉದಾರೀಕರಣ ವಿಶ್ವಾಸಗಳ ಸಂಕೀರ್ಣ ಜೋಡಣೆಯಾಗಿ ಕಂಡುಬರುತ್ತದೆ. "ಗ್ಯಾಟ್‌ನಂತಹ ಒಪ್ಪಂದಗಳ ಉದ್ದೇಶವೇ ಕೃಷಿ ಉತ್ಪಾದನೆಯನ್ನು ಬಹುರಾಷ್ಟ್ರೀಯರ ಏಕಾಧಿಪತ್ಯದಲ್ಲಿ ಇಡುವುದು ಮತ್ತು ತೃತೀಯ ಜಗತ್ತಿಗೆ ಏನೂ ಸಿಗದಂತೆ

ಮಾಡುವುದು."[೧೧] ಗ್ಯಾಟ್ ಒಪ್ಪಂದ ಭಾರತದಲ್ಲಿ ಮಾಡಿದ್ದು ಇದನ್ನೆ. ಇದಕ್ಕೆ ನಮ್ಮ ಪ್ರಭುತ್ವ ಮತ್ತು ಬಂಡವಾಳಶಾಹಿಗಳ ಉದಾರ ಬೆಂಬಲವೂ ಇತ್ತು. ದುರಂತವೆಂದರೆ ಈ ಜಾಗತೀಕರಣದ ಪರಿಣಾಮವನ್ನು ನೇರವಾಗಿ ಎದುರಿಸುತ್ತಿರುವವರು ದಲಿತರು ಮತ್ತು ಶೂದ್ರರೇ ಹೆಚ್ಚು. ಇಂಥ ಜನವಿರೋಧಿ ನೀತಿಗಳ ಬಿಸಿ ಜನರಿಗೆ ಈಗೀಗ ತಟ್ಟುತ್ತಿದೆ. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಬೌದ್ಧಿಕ ಜಗತ್ತು ಚಿಂತನಾವಲಯ ತೀಕ್ಷ್ಣವಾಗಿ ಜಾಗತೀಕರಣಕ್ಕೆ ಪ್ರತಿಕ್ರಿಯಿಸುತ್ತಿದೆ.

**೪.೧. ಜಾಗತೀಕರಣಕ್ಕೆ ತೋರಿದ ಪ್ರತಿಕ್ರಿಯೆ**

ಜಾಗತೀಕರಣ ತಂದೊಡ್ಡಿರುವ ಬಿಕ್ಕಟ್ಟುಗಳನ್ನು ಸಮಕಾಲೀನ ಕನ್ನಡ ಕಾವ್ಯ ಸಶಕ್ತವಾಗಿ ಅಭಿವ್ಯಕ್ತಿಸಿದೆ. ಜೊತೆಗೆ ಅದರ ಅಪಾಯಗಳ ಬಗ್ಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದೆ. ಜಾಗತೀಕರಣದ ಹೆಸರಿನಲ್ಲಿ ಬಡರಾಷ್ಟ್ರಗಳ ಮೇಲೆ ಹೇರಲ್ಪಡುವ ಯಜಮಾನಿಕೆ, ಫ್ಯಾಸಿಸಂನ ಚಹರೆಗಳು, ಸ್ವದೇಶಿ–ವಿದೇಶಿಗಳ ಹಾಗೂ ಗ್ರಾಮ–ನಗರಗಳ ನಡುವಿನ ಸಂಘರ್ಷ, ಆಧುನಿಕತೆ ಮತ್ತು ಪರಂಪರೆಗಳ ನಡುವಿನ ಜಿಜ್ಞಾಸೆ, ರೈತರು, ಸಣ್ಣ ಹಿಡುವಳಿದಾರರು, ಗುಡಿ ಕೈಗಾರಿಕೆ ಮತ್ತು ಭೂಮಿಯ ಪ್ರಶ್ನೆಗಳು ಇವೇ ಮುಂತಾದ ವಿಷಯಗಳು ಸಮಕಾಲೀನ ಕನ್ನಡ ಕಾವ್ಯದಲ್ಲಿ ಪ್ರಸ್ತಾಪವಾಗಿವೆ.

ಆಧುನಿಕ ಜೀವನಕ್ರಮ ಮತ್ತು ಮನುಷ್ಯನ ನಾಗಾಲೋಟದ ಸ್ಥಿತಿಯನ್ನು ಕವಿ ಹೀಗೆ ಚಿತ್ರಿಸಿದ್ದಾನೆ.

"ಊರಿಗೊಂದು ದೇಶವಾಗಿ
ದೇಶಕ್ಕೊಬ್ಬ ರಾಜನಾಗಿ
ಊರೇ ಇಲ್ಲದ ದೇಶಗಳಲ್ಲಿ
ಮಲಗೋದು ಇಲ್ಲಿ
ಏಳೋದು ಅಲ್ಲಿ

ದೇಶಕ್ಕೊಂದು ಬಾಹುವಾಗಿ
ಬಾವುಟಕ್ಕೊಂದು ಚರಿತ್ರೆಯಾಗಿ
ನೆನಪೇ ಉಳಿಯದ ದೇಶಗಳಲ್ಲಿ
ಅಣ್ಣ ಸ್ವದೇಶಿ
ತಮ್ಮ ವಿದೇಶಿ"[೧೨]

ಒಂದು ದೇಶ ತನ್ನ 'ಅಸ್ಮಿತೆ'ಯನ್ನು ಇಲ್ಲವಾಗಿಸಿಕೊಳ್ಳುತ್ತಿರುವ ಆತಂಕ ಇಲ್ಲಿನದು. 'ಊರೇ ಇಲ್ಲದ ದೇಶ'ವೆಂದರೆ ಅದು 'ವಿಸ್ಮೃತಿ'ಗೆ ಒಳಗಾಗುತ್ತಿರುವ ಸೂಚನೆಯೇ ಅಲ್ಲವೆ? ಹೀಗೆ 'ನೆನಪೇ ಉಳಿಯದ ದೇಶ'ದ ಸ್ಥಿತಿ ಒಂದು ಬಗೆಯ ಅತಂತ್ರ ಸ್ಥಿತಯೇ ಆಗಿದೆ.

ಅಷ್ಟೇ ಅಲ್ಲ, ನಗರ ಜೀವನದ ಅನಾಥ ಪ್ರಜ್ಞೆಯನ್ನು ಇಲ್ಲಿ ಕಾಣಿಸುತ್ತದೆ. 'ಊರಿಲ್ಲದ ದೇಶ' ಎಂಬ ರೂಪಕವೇ ಅನೇಕ ಅರ್ಥ ಸುರಳಿಗಳನ್ನು ಹೊಳೆಯಿಸುತ್ತದೆ ಮತ್ತು ಚಿಂತನೆಗೆ ಒಳಗುಮಾಡುತ್ತದೆ.

ಜಾಗತೀಕರಣದ ಅಸಲಿತನವನ್ನು ಈ ಕವಿತೆ ಇನ್ನಷ್ಟು ಸ್ಪಷ್ಟಪಡಿಸುತ್ತದೆ. ಬಹುರಾಷ್ಟ್ರೀಯ ಕಂಪನಿಗಳ ದೂರ್ತತನ ಮತ್ತು ಗೋಸುಂಬೆತನಗಳ ಚಿತ್ರಣ ಇಲ್ಲಿದೆ.

"ಇಸ್ತ್ರಿಕೆಡದ ಬಟ್ಟೆ ತೊಟ್ಟು
ಎಲ್ಲಾದರು ಸಲ್ಲುವಂಥ
ಇತ್ತೀಚಿನ ಕಾರ್ಡನಿಟ್ಟು
ಮಿತಿಯನೆಂದು ಮೀರದಂಥ
ಮೆದು ಮಾತಿನ ದೂತರು
ಬಹುರಾಷ್ಟ್ರಾ ಕಂಪನಿಗಳ ಸಭ್ಯ ಶೇರುದಾರರಿವರು
ಜಗತ್ ಪ್ರಜೆಗಳು.

ಅದೇ ಶುಚಿಯ ಅದೇ ರುಚಿಯ
ಅದೇ ಹವದ ಹೋಟೆಲು
ಎಂದೊ ಒಮ್ಮೆ ಮಧ್ಯರಾತ್ರಿ
ಯಾರು ನಾನು? ಇರುವುದೆಲ್ಲಿ?
ಎಂಬ ದಿಗಿಲು ನಿಲ್ಲಿ ಎಂದು
ಮರೆತು ಬಿಡುವ ಸೇನ್ ಜನರು
ಬಹುರಾಷ್ಟ್ರಾ ಕಂಪನಿಗಳ ಸದ್ಯೋಜಾತ ಧೀರರಿವರು
ಬಹಳ ಜಾಣರು."[೧೩]

ಬಹುರಾಷ್ಟ್ರೀಯ ಕಂಪನಿಗಳ ಒಡೆಯರು ಕೇವಲ ವ್ಯವಹಾರಿಕ ಬುದ್ದಿವಂತರಲ್ಲ; ಅವರು ನವ ಪುರೋಹಿತಶಾಹಿಗಳೂ ಹೌದು. 'ಕಲಿ ಕಾಲನ ದೂತ' 'ಸ್ವಯಮಾಚಾರ್ಯ' ಮತ್ತು ಬಹುರಾಷ್ಟ್ರ ಕಂಪನಿಗಳ ಮಾಲೀಕರೂ ಆಗುವಲ್ಲಿ ಕೇವಲ ವ್ಯವಹಾರಿಕ ಬುದ್ಧಿಯಷ್ಟೇ ಇರಲಾರದು.

ನಗರೀಕರಣದ ಅನುಭವ ಹೊಸ ಬಂಡವಾಳಶಾಹಿಯ ಕುರೂಪಗಳನ್ನು ಮತ್ತು ಮಾರುಕಟ್ಟೆ ಸಂಸ್ಕೃತಿಯ ಸ್ವಾರ್ಥ ಹಾಗೂ ದುರಾಸೆಗಳನ್ನು ಶಿವಪ್ರಕಾಶರ ಕವಿತೆಗಳು ಬಿಚ್ಚಿಡುತ್ತವೆ.

ನಗರಗಳು ಸರ್ವನಾಶವಾಗುವ ಕಥೆಯೊಂದು ಈ ರೀತಿ ಇದೆ:

“ಮುಳುಗಿ ಹೋಗುವ ಟೆಹರಿ ನಗರ
ಹೇಳಿತು ಮುಟ್ಟಿ ನನ್ನ ಕರುಳ:

‘ಇಗೋ ಬರುತ್ತಾ ಇದೆ ಜಲಪ್ರಳಯ
ಅಷ್ಟಾದಶ ಪುರಾಣಗಳರಿಯದ ಪ್ರಳಯ
ಮುಳುಗುತ್ತಾ ಇದೆ ನನ್ನ ಸಹಸ್ರವರ್ಷದ ಇತಿಹಾಸ

ಅಣೆಕಟ್ಟು ಏಳುತ್ತಿದೆ
ಕಡೆಯ ಪೂಜೆ ನಡೆಯುತ್ತಿದೆ ನನ್ನ ದೇಗುಲಗಳಲ್ಲಿ
ಕೇಳಿಸಿಕೊ ಮಾರ್ದನಿಸಿವೆ ಆ ಕಂಪನಗಳು ಈ ಏರುಗಳಲ್ಲಿ ಆ ತಗ್ಗುಗಳಲ್ಲಿ
ಗಣೇಶ ಪ್ರಯಾಗದ ಗದಗದಿಸುವ ಜಲದಲ್ಲಿ’
ಎಲ್ಲಾ ಮುಳುಗುತ್ತಾ ಇವೆ:
ನಲಿಯದಿದ್ದರೂ ನಗುತ್ತಾ ಇದ್ದ ಜೋಪಡಿಗಳು
ದಿಬ್ಬಗಳ ಮೇಲೆ ದಣಿದು ಬೆಳೆಸಿದ್ದ
ಹೊಲಗಳು ಗದ್ದೆಗಳು
ವಂಕಿ ವಂಕಿ ಅನಂತ ವರ್ಣಮಾಲೆಯ ಹಾಗಿರುವ
ರಸ್ತೆ ತಿರುವುಗಳು
ಈ ಪರ್ವತಾಂತರ ಸೀಮೆಯ ವಿಶಿಷ್ಟ
ಸಸ್ಯಜೀವ ರೂಪಗಳು
ಇಲ್ಲಿನ ಮಿಠಾಯಿಯಂಗಡಿಯಲ್ಲಿ ಮಾತ್ರ
ತಿನ್ನ ಸಿಗುವ ಅತ್ಯುತ್ಕೃಷ್ಟ ಸಿಂಗೂರಗಳು”[೧೪]

ಜಾಗತೀಕರಣಕ್ಕೆ ಸಂಬಂಧಿಸಿದ ಬಹುತೇಕ ಕವಿತೆಗಳಲ್ಲಿ ದೇಸಿ ಸಂಸ್ಕೃತಿ ಮತ್ತು ಗ್ರಾಮೀಣ ಪರಿಸರವು ನಾಶವಾಗುವ ಚಿತ್ರಣವಿದ್ದರೆ, ಈ ಕವಿತೆಯಲ್ಲಿ ನಗರಗಳು ನಾಶವಾಗುವ ಸೂಚನೆಯು ಚಿತ್ರಣಗೊಂಡಿದೆ. ಇಲ್ಲಿ ಜಲಪ್ರಳಯದ ರೀತಿಯಲ್ಲಿ ನಮ್ಮ ‘ಇತಿಹಾಸ’ ಮತ್ತು ‘ಅಣೆಕಟ್ಟು’ಗಳು ಮುಂದೊಂದು ದಿನ ಇಲ್ಲವಾಗುವ ಬಗೆಯನ್ನು ಈ ಕವಿತೆ ಸೂಚಿಸುತ್ತಿದೆ. ಎಲ್ಲವೂ ನೆನಪುಗಳ ಜೊತೆ ಮಾಯವಾಗುವ ಪರಿ ಇಲ್ಲಿ ವಿಭಿನ್ನವಾಗಿ ಚಿತ್ರಣಗೊಂಡಿದೆ.

ಕೃಷಿಯ ಪಲ್ಲಟಗಳಿಂದ ಗ್ರಾಮೀಣ ಬದುಕಿನ ಮೇಲೆ ತೀವ್ರವಾದ ಪರಿಣಾಮಗಳಾಗಿವೆ. ನಗರ ಸಂಸ್ಕೃತಿಯ ಸೆಳೆತದಿಂದ ಇಡೀ ಹಳ್ಳಿಯ ಚಿತ್ರಣವೇ ಸ್ಥಿತ್ಯಂತರಕ್ಕೆ ಒಳಗಾಗಿದೆ. ಇಂಥ ಗ್ರಾಮಸಮಾಜದ ಪಲ್ಲಟಗಳ ಬಗ್ಗೆ ಅನೇಕ ಕವಿತೆಗಳು ಪ್ರತಿಕ್ರಿಯಿಸಿವೆ.

ಒಕ್ಕಲುತನವು ಪಲ್ಲಟಗೊಂಡು ತನ್ನ ಅಸ್ಮಿತೆಯನ್ನು ಕಳೆದುಕೊಂಡಿರುವ ಬಗೆ ಹೀಗಿದೆ:

"ಹೊಲವೆಂಬ ನಮ್ಮ ಆ ಪುರಾಣ ಸತ್ಯವೆಲ್ಲಿ
ಫಾರಮ್ಮಾಗಿರುವ ಈ ಕೃತಕ ನೆಲೆಯೆಲ್ಲಿ
ನಾವು ಬೆಳೆದದ್ದು ಹಸಿವೆಗೆ
ಗೆಡ್ಡೆ ಗೆಣಸು ಕಾಯಿ ಪಲ್ಯಗಳು
ಇವರು ಬೆಳೆವುದು ಒಸಗೆಗೆ
ಗೊಡ್ಡು ಚಿಗುರು ಚಿತ್ತಾರದ ಪಕಳೆಗಳು

ನಾವು ಏತ ಎತ್ತಿದ ಹೊಂಡ
ಮೋಜಿನ ಈಜುಕೊಳವಾಗಿದೆ ಇಲ್ಲಿ
ಎತ್ತು ಮೇಯುವ ಗರುಕೆ
ಮೆತ್ತನೆಯ ಹಸುರು ಹಾಸು.

ಆ ಹೊಲಕ್ಕೊಂದು ಹೃದಯವಿತ್ತು
ಹಕ್ಕಿಗಳು ಹಾರಾಡುತ್ತಿದ್ದವು
ಗೂಡು ಕಟ್ಟುತ್ತಿದ್ದವು.

ಈ ಫಾರಮ್ಮಿಗೆ ಕೃತಕ ಜೋಡಣೆ ಎಲ್ಲ
ಹಸಿರು ಉಸಿರು ಜೀವಜಲ
ಎಲ್ಲ ಸ್ತಬ್ಧ
ವಿದ್ಯುತ್ ಸಂಚಾರ ನಿಂತರೆ ಒಂದು ಸಲ.
ಎಲ್ಲಿದೆ ನಮ್ಮ ಹೊ
ಆ ನಮ್ಮ ನೆಲ?"[೧೫]

ಹೈಬ್ರಿಡ್ ಸಂಸ್ಕೃತಿಯ ಬಹುಮುಖಿ ಆಯಾಮಗಳನ್ನು ಮತ್ತು ಅದರ ಕೇಡನ್ನು ಚಿತ್ರಿಸುವ ಈ ಕವಿತೆ ಕೃಷಿಕನ ಬವಣೆಯ ಜೊತೆಗೆ ಇಡೀ ಪ್ರಾಣಿ-ಪಕ್ಷಿ ಸಂಕುಲ ಅನಾಥವಾಗುವ ದೀನ ಸ್ಥಿತಿಯನ್ನು ಚಿತ್ರಿಸುತ್ತಿದೆ. ಮೊದಲು ಹೊಲದಲ್ಲಿ ಹಕ್ಕಿಗಳು ಹಾರಾಡುತ್ತಿದ್ದವು, ಗೂಡು ಕಟ್ಟುತ್ತಿದ್ದವು, ಆದರೆ ಈಗ ಪರಿಸ್ಥಿತಿಯೇ ಬೇರೆ! ಹೀಗೆ ಜಾಗತೀಕರಣ ಉಂಟುಮಾಡಿದ ಅಭಿವೃದ್ಧಿ ಹೆಸರಿನ ಅವಿವೇಕತನದಿಂದ ಜನರ ಬದುಕು ಛಿದ್ರವಾಗಿದೆ. ಹಳ್ಳಿಗಳು ತನ್ನ ಮೂಲ ಕಸುಬನ್ನು ದೂರ ಮಾಡುವ ಹುನ್ನಾರಗಳನ್ನೂ ಹುಟ್ಟುಹಾಕಿವೆ.

"ಶಿಳ್ಳೆ ಹಾಕುವ ಸರ್ಪರೈಲು
ಹಿಡಿದರೋ ನೋಡು ಚಚ್ಚಿಕಾಸಿದರು
ಗುಳ ಗುದ್ದಲಿ ಹಾರೆ ಚಲಿಕೆ ಮಾಡಿದರು

ಕಳೆ ಅತ್ತರು ಬಾತ್ತಿದರು
ತೂಗಿ ತೊನೆದವು ತೆನೆ ಅಚ್ಚ ಹಸಿರು
ಕಣ ಕಣಜ ಅಣಕಿಸುವಂತೆ ಸಗ್ಗ ಸುಗ್ಗಿ

ದೇವಗೆ ಕಾಲಿಗೆ ಹಾಕಿ
ಕರೆದರೋ ಬಿಳಿಯಾನೆ ಬಿಳಿಯ ಹಾಲು
ಕುಣಿ ಕುಣಿದರೋ
ಹೊಟ್ಟೆಗೆ ಕಟ್ಟಿ ರುಮಾಲು
ಹೆಣ ಹೆಣದರೋ
ಕರುಳ ಜತೆ ಮಿದುಳ ಬಳ್ಳಿ
ಊರಿಗೆ ಬಂತೋ ನೀರಿಗೆ ಬಂತೋ ರೈಲು

ಕನಸೇ!
ಎದ್ದು ನೋಡಿದರೆ ಕಲಸಿತ್ತು ರಂಗೋಲಿ
ಇಂಡಿಯದ ಗೆರೆಗಳೇ ಇರಲಿಲ್ಲ ಅಲ್ಲಿ."[೧೬]

ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣಗಳು ಸೃಷ್ಟಿಸಿದ ಮುಕ್ತ ಮಾರುಕಟ್ಟೆಯಿಂದ ದೇಶ ದೇಶಗಳ ನಡುವಿನ ವ್ಯಾಪಾರ ವಹಿವಾಟಿಗೆ ಅನುಕೂಲ ಕಲ್ಪಿಸಿಕೊಟ್ಟಿದ್ದೇನೋ ನಿಜ. ಆದರೆ ಅದರಿಂದ ಒದಗಿದ ವಿಪತ್ತು ನಮ್ಮ ನೆಲದ ಕರುಳಬಳ್ಳಿಯ ಸಂಬಂಧಕ್ಕೆ ಕೊಡಲಿಪೆಟ್ಟಾಯಿತು.

"ಭೂಮಿ ಕೊಡಬೇಕಂತ ಮಾತಾತು ಊರಾಗ
ಭೂಮಿ ಕೊಡಬೇಕಂತ ಮಾತಾತು ಮನಿಯಾಗ
ಭೂಮೀನ ಕೊಟ್ಟರ ರೊಕ್ಕಾ ಕೊಡತಾರಂತ
ಭೂಮೀನ ಕೊಟ್ಟರ ಕೆಲಸ ಕೊಡತಾರಂತ"[೧೭]

ಮನುಷ್ಯ ಮತ್ತು ನೆಲದ ನಡುವಿನ ಸಂಬಂಧ ಪ್ರಾಚೀನವಾದುದು. ಇಂತಹ ಸಂಬಂಧಗಳ ನುಡವೆ ಈಗ ದೊಡ್ಡ ಬಿರುಕು ಕಾಣಿಸುತ್ತಿರುವುದು ರೈತನಲ್ಲಿ ಸಹಜವಾಗಿ ಆತಂಕ ಮೂಡಿಸಿದೆ. ಬಹುರಾಷ್ಟ್ರೀಯ ಕಂಪನಿಗಳು ಕೈಗಾರಿಕೆಗಳನ್ನು ಸ್ಥಾಪಿಸಲು ಫಲವತ್ತಾದ ಕೃಷಿ ಭೂಮಿಯನ್ನು ಆಕ್ರಮಿಸಿಕೊಂಡು ರೈತರ ಹೊಟ್ಟೆಯ ಮೇಲೆ ಬರೆಹಾಕುತ್ತಿವೆ. ಅದಕ್ಕೆ 'ವಿಶೇಷ ಆರ್ಥಿಕ ವಲಯ'(SEZ) ಎಂಬ ಹೆಸರಿನಲ್ಲಿ ರೈತರ ಬದುಕಿನ ಮೇಲೆ ದಾಳಿ ಮಾಡಲಾಗುತ್ತಿದೆ. ಇದರಿಂದ ರೈತರು ಕೃಷಿಯಿಂದಲೇ ವಿಮುಖರಾಗುವ ವಾತಾವರಣ ಸೃಷ್ಟಿಯಾಗಿದೆ.

ಬಂಡವಾಳಶಾಹಿಗಳು ಹಣದ ಆಮಿಷವೊಡ್ಡಿ ರೈತರ ಬದುಕನ್ನು ಮಾರಿಕೊಳ್ಳುವಂತೆ ಮಾಡುತ್ತಿದ್ದಾರೆ. ಇನ್ನೊಂದು ಕಡೆ ಅಂತರ್ಜಲ ಮಟ್ಟ ಕುಗ್ಗಿ ಹೋಗುತ್ತಿದೆ. ಕೂಲಿಗಾಗಿ ಜನರು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಇಂಥ ಧಾರುಣ ಸ್ಥಿತಿಯಲ್ಲಿ ಮನುಷ್ಯನು ಸರ್ಕಾರಗಳು ಕೊಡುವ ಬಿಡಿಗಾಸಿಗೆ ಕಾಯುತ್ತಿದ್ದಾನೆ.

"ಬಹುರಾಷ್ಟ್ರೀಯ ಬಂಡವಾಳವು
ಭಾರತವನ್ನೆಲ್ಲ ಹರಡಿಕೊಂಡಿತು
ಕಂಡ ಕಂಡಲ್ಲಿ ಕಂಪನಿ ಸ್ಥಾಪಿಸಿ
ಕಡಿಮೆ ಖರ್ಚಿನಲಿ ಕಡಿಮೆ ಕೂಲಿಯಲಿ
ಹಿಂಡುತಿರುವರು ದೇಶದ ಗುಂಡಿಗೆ|"[೧೮]

ಮುಕ್ತ ಮಾರುಕಟ್ಟೆ ನೀತಿಯ ಪರಿಣಾಮವಾಗಿ ತಮ್ಮ ಇಚ್ಛೆಗನುಸಾರವಾಗಿ ಭೂಮಿಯನ್ನು ಕೊಳ್ಳೆ ಹೊಡೆಯುತ್ತಿದ್ದಾರೆ. ರೈತರು ಮತ್ತು ಕೂಲಿ ಕಾರ್ಮಿಕರ ಬಾಯಿಗೆ ತುಪ್ಪ ಸವರಿ ಕಂಪನಿ ಮಾಲೀಕರು ಮಾತ್ರ ಸುಖದ ಸುಪ್ಪತ್ತಿಗೆಯಲ್ಲಿ ಬದುಕುತ್ತಿದ್ದಾರೆ. ಇಂಥ ಅಸಮಾನ ಚಿತ್ರಣ ಇಲ್ಲಿದೆ.

"ಐಎಂಎಫ್ ಪ್ರಪಂಚ ಬ್ಯಾಂಕ್
ಭಾರತ ನುಂಗುಂತಾ ಬಲಿತು ಬೆಳೆಯುತಿವೆ
ಚಿನ್ನ ಬೆಳ್ಳಿ ಮುತ್ತು ರತ್ನಗಳು
ತೇಗ ಮುತ್ತಿ ಗಂಧದ ವನಗಳು
ಪರಕೀಯರಿಂದ ಲೂಟಿಯಾಗುತಿವೆ
ಗಂಗೆ ತುಂಗೆ ಕಾವೇರಿ ನದಿಗಳು
ಕಶ್ಮಲ ತುಂಬಿ ನರಕವಾಗುತಿವೆ |ಪಲ್ಲವಿ|

ಊಳುವ ರೈತಗೆ ಭೂಮಿ ಇಲ್ಲವೊ
ಕೂಲಿಕಾರರಿಗೆ ಕೂಲಿ ಇಲ್ಲವೊ
ಕಾರ್ಮಿಕಣ್ಣರ ಕಷ್ಟ ತಪ್ಪದು
ವಿದ್ಯಾರ್ಥಿ ಯುವಜನರ ಬದುಕು
ಕೆಲಸವಿಲ್ಲದೆ ಕಮರಿ ಹೋಗುತಿದೆ.
ಅಕ್ಕ ತಂಗಿಯರ ಮಾನ ಪ್ರಾಣಗಳು
ಹಣ್ಣಿನಂತೆ ಹರಾಜಾಗುತಿವೆ|"[೧೯]

೬೦ರ ದಶಕದಿಂದೀಚೆಗೆ ಸಮಕಾಲೀನ ಸಂದರ್ಭದಲ್ಲಿ ಸಾಲುಬಾಧೆಯಿಂದ ರೈತರು ಹೆಚ್ಚಿನ ಪ್ರಮಾಣದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಇದಕ್ಕೆ ಸರ್ಕಾರಗಳ ಅವೈಜ್ಞಾನಿಕ ನೀತಿ ಮತ್ತು ಯೋಜನೆಗಳೇ ಮೂಲಕಾರಣ ಆಗಿವೆ. ಏಕೆಂದರೆ ರೈತರು ದುಡಿದ ಹಣವೆಲ್ಲ ಕೃಷಿ

ಉಪಕರಣಗಳು, ಕಳಪೆ ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ, ಅವೈಜ್ಞಾನಿಕ ಬೆಲೆ ಮತ್ತು ಮಾರುಕಟ್ಟೆ ವ್ಯವಸ್ಥೆ, ಮಧ್ಯವರ್ತಿ ಮತ್ತು ದಳ್ಳಾಳಿಗಳ ಹಾವಳಿ, ನೀರು ಮತ್ತು ವಿದ್ಯುತ್ ಸಮಸ್ಯೆ ಇವೆಲ್ಲವೂ ರೈತರ ಬದುಕಿಗೆ ಉರುಳಾಗಿವೆ.

"ಪ್ರಗತಿ ವಿರೋಧಿ ರೈತ ವಿರೋಧಿ
ಡಂಕಲ್ ನೀತಿಗೆ ಕೈಯ್ಯನು ಕುಲುಕಿಸಿ
ಭೂಮಿ ಮಾರಿದರು ಸೀಮೆ ಮಾರಿದರು
ಮುತ್ತಿನ ಬಿತ್ತನೆ ಬೀಜ ಮಾರಿದರು
ದನ ಮಾರಿದರು ಕರು ಮಾರಿದರು
ಹಾಲು ಕರೆವ ಕರ ಮಗಿ ಮಾರಿದರು"[೨೦]

ತಮ್ಮನ್ನು ತಾವು ಮಾರಿಕೊಳ್ಳುವ ಸ್ಥಿತಿಗೆ ತಲುಪಿರುವ ಜನರ ಅಸಹಾಯಕ ಸ್ಥಿತಿಯನ್ನು ಈ ಹೋರಾಟದ ಹಾಡು ಅಭಿವ್ಯಕ್ತಿಸುತ್ತಿದೆ.

'ಲಕ್ಕವ್ವನಗುಡ್ಡ' ಎಂಬ ಕವಿತೆಯಲ್ಲಿ ಜಾಗತೀಕರಣಕ್ಕೆ ತೋರಿದ ಪ್ರತಿಕ್ರಿಯೆ ಈ ರೀತಿ ಇದೆ. ಇದು ಇಂಡಿಯಾದ ಸದ್ಯದ ದೈನೇಸಿ ಸ್ಥಿತಿಯನ್ನು ಸಹ ಕಟ್ಟಿಕೊಡುತ್ತಿದೆ.

"ನೆನಪನಾಳಕ್ಕೆ ಲಗ್ಗೆಯನ್ನಿಟ್ಟು
ಅವ್ವನ ಗುಡ್ಡದ ಸುಖವನ್ನು ಸುಟ್ಟು
ಊರುಗಳಳಿಸಿ
ಕಾಡುಗಳುದುರಿಸಿ
ನೋಟುಗಳೆಣಿಸುತಾ
ಪೇಟೆಯ ಕಟ್ಟುತಾ
ಲಾರಿಗಳೋಡುವವು
ಓಡುವವು ರೈಲುಗಳೋಡುವವು
ತೇಲುವವು ಹಡಗುಗಳು ತೇಲುವವು
ಹಾರುವವು ವಿಮಾನ ಹಾರುವವು
ಅವ್ವನ ಸೀರೆ ಹಾದಕ್ಕೆಟ್ಟು
ಹಾಕುವುದು ಕೇಕೇ ಹಾಕುವವು...."[೨೧]

ತಿಳಿಯಾಗಿದ್ದ ನಮ್ಮ ಪರಿಸರ ಮತ್ತು ಬದುಕನ್ನು ಕಲುಷಿತಗೊಳಿಸಿರುವ ಯಂತ್ರ ನಾಗರಿಕತೆಯ ಚಿತ್ರಣ ಈ ಕವಿತೆಯಲ್ಲಿದೆ. ನಗರೀಕರಣ, ಖಾಸಗೀಕರಣ ಹಾಗೂ ಉದಾರೀಕರಣಗಳ ಪ್ರೋತ್ಸಾಹದಿಂದ ಹಣಕ್ಕೆ ಎಂದಿಲ್ಲದ ಬೇಡಿಕೆ ಹೆಚ್ಚಾಗಿದೆ. ಹಣದ ಮುಂದೆ ಮನುಷ್ಯನಿಗೆ ನೀರು, ಗಾಳಿ, ಆಹಾರ, ನಾಡು-ಕಾಡು ಏನೂ ಕೂಡ ಕಾಣದಾಗಿದೆ. ಇಂಥ ದಿಕ್ಕೆಟ್ಟ ಪರಿಸ್ಥಿತಿ ಕವಿಗೆ 'ಅವ್ವನ ಸೀರೆ ಹಾದಕೆಟ್ಟಂತೆ' ಭಾಸವಾಗುತ್ತಿದೆ.

‘ನೀರಿನ ಜೋಗಿ’ ಕವಿತೆ ಜಾಗತೀಕರಣ, ಉದಾರೀಕರಣ ಹಾಗೂ ನಗರೀಕರಣಗಳ ವಿರಾಟ್ ಸ್ವರೂಪವನ್ನು ದರ್ಶಿಸುತ್ತಿದೆ. ಬಹುಮುಖ್ಯವಾಗಿ ನೀರಿಗೆ ಉಂಟಾದ ಹಾಹಾಕಾರ, ಮುಕ್ತ ಮಾರುಕಟ್ಟೆಯ ಬಿಕ್ಕಟ್ಟು, ಗ್ರಾಮ ಮತ್ತು ನಗರ ಜೀವನದ ದುಸ್ಥಿತಿಯನ್ನು ನಿರೂಪಿಸುತ್ತಿದೆ.

‘ನೀರನ್ನು ಜೋಗಿಯಾಗಿ ಪರಿಭಾವಿಸಿ ಅನುಭಾವದ ನೆಲೆಯಲ್ಲಿ ನೀರು, ತೇವ, ಕರುಣದ ಕಣ್ಣುಗಳನ್ನು ಹುಡುಕಾಟ ಮಾಡುವ ಬಗೆ ಇಲ್ಲಿ ವಿಶಿಷ್ಟವಾಗಿದೆ.

“ನೀರಿನ ಜೋಗಿ ನೀರಿನ ಜೋಗಿ
ಎಲ್ಲಿದೆ ಹೇಳೋ ನೀರಕಣ್ಣು
ಮಣ್ಣಿನ ಜೀವದ ತೇವದ ಕಣ್ಣು

ಕೋಕೋ ನೀರು ಲಿಮ್ಕಾ ನೀರು
ಬಾಟಲ ಸೆರೆಯಲಿ ಸೇರಿದ ನೀರು
ಮಾರುಕಟ್ಟೆಯ ಮಾಯಾಕಾರ
ಮಾಟದ ಛೂ ಛೂ ಮಂತ್ರದ ನೀರು
ಬೆವರಿನ ನೀರು ರಗುತದ ನೀರು
ಪಾಪು ಚಟಾಕು ಸವ್ವಾಸೇರು
ಕುಡಿದೂ ಕುಡಿದೂ ಕುಡಿದೂ ಕುಡಿದೂ
ಸಾಕು ಸಾಕು ಸಾಕಾಗಿ ಹೋಗಿದೆ
ನಾಲಗೆ ಕಾದ ಜಡಿನಂತಾಗಿದೆ
ಗುಂಡಿಗೆಯೊಳಗೆ ಕಿಚ್ಚು ಹೊತ್ತಿದೆ
ಬಸರಿನ ಒಳಗೆ ಕ್ಷಾಮ ಬಂದಿದೆ”[೨೨]

ಜಾಗತೀಕರಣ, ನಗರೀಕರಣ, ಉದಾರೀಕರಣಗಳು ಉಂಟುಮಾಡಿದ ಪರಿಣಾಮ, ಪರಿಸರ ನಾಶ - ಇವು ನೈಸರ್ಗಿಕ ಸಂಪನ್ಮೂಲಗಳ ವಿನಾಶಕ್ಕೆ ದಾರಿ ಮಾಡಿಕೊಟ್ಟವು. ಇದರ ಫಲವಾಗಿ ಕೋ ಕೋ ನೀರು, ಲಿಮ್ಕಾ ನೀರು, ಬಾಟಲಿ ನೀರಿನ ಬಿಸಿ ಇಡೀ ರಾಷ್ಟ್ರವನ್ನು ಗುಲಾಮತನಕ್ಕೆ ದೂಡಿತು. ಒಂದೆಡೆ ಬಹುರಾಷ್ಟ್ರೀಯ ಕಂಪನಿಗಳು ಸಾಮಾನ್ಯ ಜನರ ಗುಡಿ ಕೈಗಾರಿಕೆ, ಕೃಷಿ ಹಾಗೂ ಸಾರ್ವಜನಿಕ ಕ್ಷೇತ್ರಗಳ ಮೇಲೆ ಹಿಡಿತ ಸಾಧಿಸಿ ಜನರನ್ನು ನಿರುದ್ಯೋಗಿಗಳನ್ನಾಗಿ ಮಾಡಿದರೆ, ಇನ್ನೊಂದೆಡೆ ಹಳ್ಳಿಗಳಲ್ಲೂ ಬಾಳಲಾಗದ, ನಗರಗಳಲ್ಲೂ ನೆಲೆನಿಲ್ಲದ ದಿಕ್ಕೆಟ್ಟ ಸ್ಥಿತಿಗಳಲ್ಲಿ ಜನ ತಬ್ಬಲಿಗಳಾಗಿ ನಿರುದ್ಯೋಗ, ಬಡತನ, ಹಸಿವು ಅಸಹಾಯಕತೆಗಳಿಂದ ನರಳುತ್ತಿದ್ದಾರೆ.

“ಹರಾಜು ಹಾಕಿದ ನದಿಗಳು ಕೂಗಿವೆ
ನೀರಿನ ಜೋಗಿ
ನೀರಿನ ಜೋಗಿ

ದಿನಾಲು ಸಾಯುವ ಸಮುದ್ರ ಕರೆದಿದೆ
ನೀರಿನ ಜೋಗಿ ನೀರಿನ ಜೋಗಿ
ಹೆಣಗಳು ತೇಲುವ ಬಾವಿ ಕಿರುಚಿದೆ
ನೀರಿನ ಜೋಗಿ ನೀರಿನ ಜೋಗಿ
ಕೆರೆಗಳ ಗೋಳಿಗೆ ಕಡೆಯೇ ಇಲ್ಲ.

ನೀರಿನ ಜೋಗಿ ನೀರಿನ ಜೋಗಿ
ಕೆರೆ ಬಾವಿ ನದಿ ಸಮುದ್ರ
ಒಕ್ಕೊರಲಲ್ಲಿ ಮೊರೆಯಿಕ್ಕುತ್ತಿವೆ
ನೀರಿನ ಜೋಗಿ ನೀರಿನ ಜೋಗಿ
ನಮ್ಮ ನೀರಲ್ಲಿ ತಣುವೇ ಇಲ್ಲ
ಎಲ್ಲಿದೆ ಹೇಳೋ ನೀರಿನ ಜೋಗಿ
ನಮ್ಮ ನೀರಡಿಕೆ ಆರಿಸುವ
ಪಾತಾಳದ ಸಕ್ಕರೆ ನೀರಿನ ಕಣ್ಣ"[೨೩]

ಕೆರೆ, ಬಾವಿ, ನದಿ, ಸಮುದ್ರಗಳು ನೀರಿಲ್ಲದೆ ಒಕ್ಕೊರಲಲ್ಲಿ ಮೊರೆಯಿಡುತ್ತಿರುವಾಗ ನೀರಡಿಕೆ ಆರಿಸುವ ಜೀವಜಲದ ಹುಡುಕಾಟವನ್ನು ಕವಿ ಮಾಡಲೆತ್ನಿಸಿದ್ದಾರೆ. ಗಂಗಾವತರಣದ ರೀತಿಯಲ್ಲಿ ಹೊಸ ಜಲಕಣ್ಣಿನ ಉದಯಕ್ಕೆ ಕವಿ ಎದುರು ನೋಡುತ್ತಿದ್ದಾರೆ.

"ಮಲಗಿದ ಕೋವೆಯ ಎಚ್ಚರಿಸಯ್ಯಾ
ಜಲಕಣ್ಣಿನ ಕಡೆ ಕರೆದೊಯ್ಯಯ್ಯಾ
ಇಗೊ ಇಲ್ಲಿದೆ ಇಲ್ಲೇ ಇಲ್ಲೇ
ಖಾಯಿಲೆಗೆಲ್ಲಾ ಕೊನೇ ಕಷಾಯ
ಜೀವದಾಯಿ ಬುಳು ಬುಳು ಜಲಕಣ್ಣು
ಎಂದು ನೀ ನಮಗೆ ಹೇಳುವುದೆಂದೋ
ಎಲ್ಲಿದೆ ತೋರಿಸೊ ನೀರಿನ ಕಣ್ಣು
ಜಲಜಂಗಮನೆ ನೀರಿನ ಜೋಗಿ"[೨೪]

ಕೋಕೋ ನೀರು, ಲಿಮ್ಕಾ ನೀರು, ಮಂತ್ರದ ನೀರು, ಬೆವರಿನ ನೀರು, ರಗುತದ ನೀರು ಇವು ಜಾಗತೀಕರಣದ ಕ್ರೌರ್ಯದ ಕರಾಳ ರೂಪವನ್ನು ದರ್ಶಿಸುತ್ತಿವೆ. 'ಹೆಣಗಳು ತೇಲುವ ಬಾವಿ ಕಿರುಚಿ/ಕೆರೆಗಳ ಗೋಳಿಗೆ ಕಡೆಯೇ ಇಲ್ಲ' ಹಾಗೂ 'ಖಾಯಿಲೆಗೆಲ್ಲಾ ಕೊನೇ ಕಷಾಯ' ಇಂಥ ಸಾಲುಗಳು ಜಲಕ್ಷಾಮದ ಭೀಕರತೆಯನ್ನು ವಿಡಂಬನೆಯ ದಾಟಿಯಲ್ಲಿ ಅಭಿವ್ಯಕ್ತಿಸುತ್ತಿವೆ. "ಪ್ರಕೃತಿ ಮತ್ತು ಪರಿಸರದ ಬಗ್ಗೆ ಶಿವಪ್ರಕಾಶರ ಕಾಳಜಿ ತುಂಬಾ ಅರ್ಥಪೂರ್ಣ. ಮನುಷ್ಯ ಮತ್ತು ಭೂಮಿಯ ಕ್ಲಿಷ್ಟ ಸಂಬಂಧವನ್ನು ಎಳೆಎಳೆಯಾಗಿ ಬಿಡಿಸುತ್ತಾರೆ. 'ನೀರಿನ ಜೋಗಿ'

ಕವಿತೆಯಲ್ಲಿ ಕಲ್ಮಶ ಮತ್ತು ವಿಷದಿಂದ ತುಂಬಿರುವ ಜಗದ ನೀರಿನ ಬಗ್ಗೆ ಚಿಂತಿಸುತ್ತಾರೆ. ಅವರ ನೀರಿನ ಜೋಗಿ ಒಬ್ಬ ಮಾಂತ್ರಿಕ. ಅವನಿಗೆ ಇಡೀ ಜಗತ್ತಿನ ಕೆರೆ, ಬಾವಿ, ನದಿ ಮತ್ತು ಸಾಗರಗಳಿಗೆ ಮರುಜೀವ ತರುವ ಶಕ್ತಿಯಿದೆ. ಆದರೆ ಅವನಿಗೂ ನೀರಿನ ಕಣ್ಣು ತೋರುವ ಆಸಕ್ತಿಯಿಲ್ಲ".[೨೫] ಹೀಗೆ ಜಾಗತೀಕರಣಕ್ಕೆ ಕನ್ನಡ ಕಾವ್ಯ ಪ್ರತಿರೋಧ ಒಡ್ಡಿದೆ.

### ೪.೨. ಕೋಮುವಾದ ಮತ್ತು ಮತೀಯ ಸಂಘರ್ಷದ ಸ್ವರೂಪ

ಜಾತಿವಾದ ಮತ್ತು ಕೋಮುವಾದ ಎಲ್ಲೆಡೆ ಆಳವಾಗಿ ಬೇರೂರುತ್ತಿರುವ ಈ ಸಂದರ್ಭದಲ್ಲಿ ಕೋಮುವಾದದ ಸಮಸ್ಯೆಯನ್ನು ಎದುರಿಸುವ ಬಗೆ ಯಾವುದು ಎಂಬುದು ಬಹಳ ಮುಖ್ಯವಾದ ಮತ್ತು ಮೂಲಭೂತವಾದ ಪ್ರಶ್ನೆ ನಮ್ಮ ಎದುರಿಗಿದೆ. ಕೋಮುವಾದ ಮತ್ತು ಜಾತಿವಾದದಲ್ಲಿ ನಂಬಿಕೆ ಇಟ್ಟಿರುವ ಜನ ಒಂದೆಡೆ ಇದ್ದರೆ, ಈ ಕೋಮುವಾದಕ್ಕೆ ಕುಮ್ಮಕ್ಕು ಕೊಡುತ್ತ ಇದರಿಂದ ಲಾಭ ಪಡೆಯುವ ಜನ ಇನ್ನೊಂದೆಡೆ ಇದ್ದಾರೆ. ಇವೆರಡರ ನಡುವೆ ಕೋಮುವಾದವನ್ನು ವಿರೋಧಿಸಿ ಅದನ್ನು ಬುಡಮಟ್ಟ ಕೀಳಬಯಸುವ ಮಾನವತಾವಾದಿಗಳ ಕೂಗು ಕೇಳಿಬರುತ್ತಿದೆ. ದೇಶದಲ್ಲಿ ಇತ್ತೀಚೆಗೆ ಕೋಮುವಾದ ಮತ್ತು ಜಾತಿವಾದವನ್ನು ಪ್ರಚಾರ ಮಾಡುತ್ತ ಜಾತಿಯ ವಿಷಬೀಜಗಳನ್ನು ಬಿತ್ತುತ್ತ 'ದೇಶಪ್ರೇಮ'ದ ಹೆಸರಿನಲ್ಲಿ ಜನರನ್ನು ದಾರಿ ತಪ್ಪಿಸುತ್ತಿದ್ದಾರೆ. ತಮ್ಮ ಹಿತಾಸಕ್ತಿಗಳನ್ನು ಈಡೇರಿಸಿಕೊಳ್ಳಲು ಹಲವು ಸಂಘಟನೆಗಳು ಶಿಸ್ತಿನ ಹೆಸರಿನಲ್ಲಿ ಸಣ್ಣಸಣ್ಣ ಮಕ್ಕಳನ್ನು ತಮ್ಮತ್ತ ಸೆಳೆದು, ಅವರ ಮನಸ್ಸಿನಲ್ಲಿ 'ಮೂಲಭೂತವಾದ'ದ ವಿಷಬೀಜಗಳನ್ನು ಬಿತ್ತುತ್ತಿದ್ದಾರೆ.

ಯಾವುದೇ ಧರ್ಮ, ಜಾತಿಗಳು ತಾವೇ ಎಲ್ಲರಿಗಿಂತಲೂ ಶ್ರೇಷ್ಠ ಎಂಬ ಭಾವನೆಯನ್ನು ಮನಸಿನಲ್ಲಿ ತುಂಬಿಕೊಂಡಾಗ ಮೂಲಭೂತವಾದ ಅಂಥವರಲ್ಲಿ ಪ್ರವೇಶ ಪಡೆಯುತ್ತದೆ. ಈ ಮೂಲಭೂತವಾದ ಯಾವುದೇ ಧರ್ಮ, ಜಾತಿಯಲ್ಲಿದ್ದರೂ, ಅಷ್ಟೇ ಅಲ್ಲ ವ್ಯಕ್ತಿಯೊಳಗಿದ್ದರೂ ಅಪಾಯಕಾರಿಯೇ. ಬಹುಸಂಸ್ಕೃತಿಯ ನಿರಾಕರಣೆ ಮತ್ತು ಏಕಸಂಸ್ಕೃತಿಯ ಪಾವಿತ್ರೀಕರಣ ಮೂಲಭೂತವಾದದ ಪ್ರಧಾನ ಸ್ವರೂಪ. 'ಎಲ್ಲಾ ಧರ್ಮಗಳೂ ಸಮಾನ, ಎಲ್ಲರೂ ಸಮಾನರು; ಎಲ್ಲರ ದೇಹದಲ್ಲಿ ಇರುವುದು ಒಂದೇ ರಕ್ತ' ಎಂಬ ಸಮಾನಭಾವ ಮನುಷ್ಯರಲ್ಲಿ ಬೇರೂರಿದಾಗ ಈ ಕೋಮುವಾದದ ಸಮಸ್ಯೆ ತಲೆದೋರುವುದಿಲ್ಲ. ಆದರೆ ನಮ್ಮನ್ನು ಆಳುವ ಸರ್ಕಾರಗಳೂ ಸೇರಿದಂತೆ ಈ ದೇಶದ ಮುಗ್ಧ ಜನರನ್ನು, ಅಮಾಯಕರನ್ನು ಹಾಗೂ ಮಕ್ಕಳನ್ನು ತಮ್ಮ ವೈಯಕ್ತಿಕ ಲಾಭ-ನಷ್ಟಗಳಿಗೆ ಬಳಸಿಕೊಳ್ಳುತ್ತ ಕೋಮುದ್ವೇಷಕ್ಕೆ ಇನ್ನಷ್ಟು ಪುಷ್ಟಿನೀಡುತ್ತಿದ್ದಾರೆ.

೯೦ರ ದಶಕದಿಂದ ಈಚೆಗೆ ದೇಶದಲ್ಲಿ ನಡೆದ 'ಬಾಬ್ರಿ ಮಸೀದಿ' ಧ್ವಂಸ 'ಅಥವಾ ರಾಮಮಂದಿರ ನಿರ್ಮಾಣ'ದಂಥ ವಿಷಯಗಳು ಭಾರತದಾದ್ಯಂತ ಕೋಮುಗಲಭೆಗೆ ಇನ್ನಷ್ಟು ತೀವ್ರತೆಯನ್ನು ತಂದುಕೊಟ್ಟವು. ಅಂದಿನಿಂದ ನಮ್ಮನ್ನು ಆಳುತ್ತಿರುವ ರಾಜಕೀಯ ಪಕ್ಷಗಳು ಇವೆರಡು ಅಜೆಂಡಾಗಳನ್ನು ಇಟ್ಟುಕೊಂಡು ಆಡಳಿತ ನಡೆಸುತ್ತಿದ್ದಾರೆ. ಬಾಬ್ರಿಮಸೀದಿಯ ಹೆಸರಿನಲ್ಲಿ

ಕಾಂಗ್ರೆಸ್ ಮತ್ತು ರಾಮಮಂದಿರದ ಹೆಸರಿನಲ್ಲಿ ಬಿಜೆಪಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿವೆ. ಚುನಾವಣೆಯ ಪ್ರಣಾಳಿಕೆಗಳಲ್ಲಿ ಅಭಿವೃದ್ಧಿಯ ಹಿತಕ್ಕಿಂತ ಮುಖ್ಯವಾಗಿ ಬಾಬ್ರಿಮಸೀದಿ ಮತ್ತು ರಾಮಮಂದಿರ ನಿರ್ಮಾಣದ ವಿಚಾರಗಳಿಗೆ ಆದ್ಯತೆ ಕೊಡುತ್ತ ಈ ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತಿದ್ದಾರೆ. ಇದರ ಪರಿಣಾಮ ಹಿಂದೂ ಮತ್ತು ಮುಸ್ಲಿಮರ ನಡುವೆ ದ್ವೇಷ, ವೈರತ್ವದ ಭಾವನೆಗಳು ಮೂಡುವ ಹಾಗೆ ಮಾಡುತ್ತಿದ್ದಾರೆ. ಇಂಥ ಎಲ್ಲದರ ಅತಿರೇಖದಿಂದ ನಮ್ಮ ವ್ಯವಸ್ಥೆ ಕಲುಷಿತಗೊಂಡಿದೆ. ಮನುಷ್ಯ-ಮನುಷ್ಯರ ನಡುವೆ ದ್ವೇಷ, ಅಸೂಯೆಗಳು ತುಂಬಿವೆ. ಎಲ್ಲರನ್ನೂ ಅನುಮಾನದಿಂದ ನೋಡುವ ಭಯದ ವಾತಾವರಣ ಸೃಷ್ಟಿಯಾಗುತ್ತಿದೆ. ಎಲ್ಲಕ್ಕಿಂತ ಮುಖ್ಯವಾಗಿ 'ಅಭಿವ್ಯಕ್ತಿ ಸ್ವಾತಂತ್ರ್ಯ'ಕ್ಕೆ ಧಕ್ಕೆ ಉಂಟಾಗುತ್ತಿದೆ. ಇಂಥ ಸಂದಿಗ್ಧತೆಯ ಸಂದರ್ಭದಲ್ಲಿ ಬರಹಗಾರರ ಜವಾಬ್ದಾರಿಗಳು ತುಂಬಾ ಇವೆ.

ಮನುಷ್ಯ-ಮನುಷ್ಯರನ್ನು ಪ್ರೀತಿಸುವಂಥ ಸಾಹಿತ್ಯ ಸೃಷ್ಟಿ ಇಂದು ತುರ್ತಾಗಿ ಆಗಬೇಕಾಗಿದೆ. ಜನರಲ್ಲಿ ದ್ವೇಷವನ್ನು ಬಿತ್ತದೆ, ಮಾನವೀಯ ಅಂಶಗಳನ್ನು ಎಲ್ಲರೆದೆಗೆ ಬಿತ್ತುವಂಥ ಸಾಹಿತ್ಯ ರಚನೆ ಇಂದಿನ ಬಹುಮುಖ್ಯ ಅವಶ್ಯಕತೆಯಾಗಿದೆ.

'ಕೋಮುವಾದ'ವು ೯೦ರ ದಶಕದಿಂದ ಈಚೆಗೆ ಕೇಳಿಬರುತ್ತಿರುವ ಪದವಾದರೂ ಇದರ ಮೂಲಬೇರುಗಳನ್ನು ಪ್ರಾಚೀನ ಕಾಲದಿಂದಲೇ ಗುರುತಿಸಬಹುದು. ನಮ್ಮ ಸಾಮಾಜಿಕ-ಸಾಂಸ್ಕೃತಿಕ ಸನ್ನಿವೇಶದಲ್ಲೇ ಕೋಮುವಾದ ಅಥವಾ ಮತೀಯ ಮೂಲಭೂತವಾದದ ಬೇರುಗಳಿದ್ದವು ಎಂಬುದಕ್ಕೆ ಕನ್ನಡ ಸಾಹಿತ್ಯದಲ್ಲಿ ಹಲವು ನಿದರ್ಶನಗಳಿವೆ. ಇದನ್ನು 'ಕೋಮುವಾದ' ಮತ್ತು 'ಮತೀಯ ಸಂಘರ್ಷ'ವೆಂಬ ಹೆಸರಿನಿಂದ ಕರೆಯದಿದ್ದರೂ ಅಂಥ ಲಕ್ಷಣಗಳನ್ನೊಳಗೊಂಡ ಸನ್ನಿವೇಶಗಳನ್ನು ನಮ್ಮ ಸಾಮಾಜಿಕ-ಸಾಂಸ್ಕೃತಿಕ ಇತಿಹಾಸದಲ್ಲಿ ಗುರುತಿಸಬಹುದಾಗಿದೆ.

ನಮ್ಮ ಸಾಮಾಜಿಕ-ಸಾಂಸ್ಕೃತಿಕ ಸನ್ನಿವೇಶದಲ್ಲೇ ಕೋಮುವಾದ ಅಥವಾ ಮತೀಯ ಮೂಲಭೂತವಾದದ ಬೇರುಗಳಿದ್ದವು ಎಂಬುದಕ್ಕೆ ಕನ್ನಡ ಸಾಹಿತ್ಯದಲ್ಲಿ ಹಲವು ನಿದರ್ಶನಗಳಿವೆ. ಇದನ್ನು 'ಕೋಮುವಾದ' ಮತ್ತು 'ಮತೀಯ ಸಂಘರ್ಷ'ವೆಂಬ ಹೆಸರಿನಿಂದ ಕರೆಯದಿದ್ದರೂ ಅಂಥ ಲಕ್ಷಣಗಳನ್ನೊಳಗೊಂಡ ಸನ್ನಿವೇಶವನ್ನು ನಮ್ಮ ಸಾಮಾಜಿಕ-ಸಾಂಸ್ಕೃತಿಕ ಇತಿಹಾಸದಲ್ಲಿ ಗುರುತಿಸಬಹುದಾಗಿದೆ.

೧೯೯೨ರಲ್ಲಿ ನಡೆದ ಬಾಬ್ರಿ ಮಸೀದಿ ಧ್ವಂಸ, ಕೋಮು ಗಲಭೆಗಳು, ರಾಮಜನ್ಮಭೂಮಿ ವಿವಾದ, ಗೋದ್ರಾ ಹತ್ಯಾಕಾಂಡ, ಗೋಮಾಂಸದ ಹೆಸರಿನಲ್ಲಿ ನಡೆದ 'ಆಹಾರ ರಾಜಕಾರಣ'ದ ಚರ್ಚೆ ಮತ್ತು ಅದಕ್ಕೆ ಬೆನ್ನೆಲುಬಾಗಿದ್ದ ಮತೀಯ ರಾಜಕಾರಣ ಇಂಥ ಅನೇಕ ವಿಕೃತಗಳಿಗೆ ಸಮಕಾಲೀನ ಕವಿಗಳು ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸಿದ್ದಾರೆ. ಎನ್.ಕೆ. ಹನುಮಂತಯ್ಯ, ಸುಬ್ಬು ಹೊಲೆಯಾರ್, ಸವಿತಾ ನಾಗಭೂಷಣ, ವಿನಯಾ ಒಕ್ಕುಂದ, ಎಂ.ಡಿ. ಒಕ್ಕುಂದ, ಟಿ. ಯಲ್ಲಪ್ಪ, ಸರಜೂ ಕಾಟ್ಕರ್, ಲಕ್ಕೂರು ಆನಂದ, ಎಚ್. ಲಕ್ಷ್ಮೀನಾರಾಯಣ ಸ್ವಾಮಿ ಇನ್ನೂ

ಮುಂತಾದವರ ಕವಿತೆಗಳಲ್ಲಿ ಕೋಮುವಾದ ಮತ್ತು ಮತೀಯ ಸಂಘರ್ಷಕ್ಕೆ ಹಲವು ಬಗೆಯ ಪ್ರತಿರೋಧದ ಧ್ವನಿಗಳು ಕಾಣಿಸುತ್ತವೆ.

“ಅಸ್ಪೃಶ್ಯ!
ಹೌದು; ನಾನು ವಿದ್ಯುತ್ತಿನ ಹಾಗೆ
ನಿಮ್ಮ ತಣ್ಣನೆಯ ಸ್ಪರ್ಶಕ್ಕೆ
ಸಿಕ್ಕಲಾರೆ

ಅಸ್ಪೃಶ್ಯ!
ಹೌದು; ನಾನು ಕಡಲ ಆಳದ ಹಾಗೆ
ನಿಮ್ಮ ಸುಡುಗಣ್ಣು ಸ್ಪರ್ಶಕ್ಕೆ
ಸಿಕ್ಕಲಾರೆ”[೨೬]

ಮಾನವನ ಪ್ರಾಣಕ್ಕಿಂತಲೂ ಹಸುವಿನ ಪ್ರಾಣವೇ ಹೆಚ್ಚು ಎಂಬ ಕುರುಡು ನಂಬಿಕೆ ಸಂಘ ಪರಿವಾರದ್ದು. ಅಸ್ಪೃಶ್ಯನನ್ನು ಸಾಯಿಸುವುದಕ್ಕಿಂತ ಗೋಹತ್ಯೆಯು ಶಿಕ್ಷಾರ್ಹವಾದ ಅಪರಾಧವೆಂದು ಸನಾತನ ಧರ್ಮ ಹೇಳುತ್ತದೆ. ಓದುಗರ ಮನಸ್ಸಿನಲ್ಲಿ ಹೊಸಕ್ರಾಂತಿಯನ್ನು ಉಂಟುಮಾಡುತ್ತದೆ; ಅವರ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ.

“ಅಸ್ಪೃಶ್ಯ!
ಹೌದು; ನೀರು ನಾಳೆಗಳಿಲ್ಲದೆ
ಹಣ ಅಣ್ವಸ್ತ್ರಗಳ ಕುಲುಮೆಯಾಗಿರುವ
ನಿಮ್ಮ ಕಣ್ಣಿನ ಪ್ರಭೆಗೆ
ಹೆದರಲಾರೆ
ನಿಮ್ಮ ಮಲ ತಿಂದು ನಿಮ್ಮ ಮನೆ ಕಾಯುವ
ನಾಯಿಗೆ ಹೆದರುತ್ತೇನೆ
ಕೃತಕ ಕಣ್ಣಿಗೆ ಕನಸು ಕಾಣುವುದಿಲ್ಲ

ಅಸ್ಪೃಶ್ಯ!
ಹೌದು; ನಾನು ಗೋವು ತಿನ್ನುತ್ತೇನೆ
ಗೋವು ತಿಂದು ಗೋವಿನಂತಾಗಿ
ಗಿರಿ ಕಣಿವೆ ಬಯಲೊಳಗೆಲ್ಲ
ಕುಣಿಯುತ್ತೇನೆ
ನೆಲದ ಮೇಲೆಯೇ ನಿಂತು
ಬಾಲ ಎತ್ತಿ ಕಾಮನಬಿಲ್ಲಿಗೆ
ಬಡಿಯುತ್ತೇನೆ
ಮಳೆಮೋಡಗಳ ತಿವಿದು
ಸುಡುಗಾಡಿಗೆ ಕೆಡವುತ್ತೇನೆ”[೨೭]

ಎನ್ನುವಲ್ಲಿ ಕವಿಯ ಮಹತ್ವಾಕಾಂಕ್ಷೆ ವ್ಯಕ್ತವಾಗುತ್ತದೆ.

“ನಾನು ಅಸ್ಪೃಶ್ಯ ಎಂದು ಹೇಳಿಕೊಳ್ಳುವುದೇ ದಲಿತರಿಗೆ ಇಂದು ಸ್ವಾಭಿಮಾನದ ಸಂಕೇತವಾಗಿದೆ. ಇದೇ ಮುಟ್ಟಿಸಿಕೊಳ್ಳದವರ ಬದುಕನ್ನು ಶ್ರೇಷ್ಠತೆಯ ಮಟ್ಟಕ್ಕೆ ಕೊಂಡೊಯ್ಯುತ್ತದೆ. ನೀವು ಮುಟ್ಟುವುದಿಲ್ಲ ಎಂಬುದಕ್ಕಿಂತ ನಿಮ್ಮ ಕೈಯಲ್ಲಿ ಮುಟ್ಟಲಾಗುವುದಿಲ್ಲ ಎಂಬುದೇ ದಲಿತರ ಎಚ್ಚರದ ಪ್ರಜ್ಞೆಯಾಗಿದೆ. ‘ಗೋವು’ ಮೂಕಪ್ರಾಣಿ, ಹಾಲು ಕೊಡುವ ಕಾರಣ ಶ್ರೇಷ್ಠ ಪ್ರಾಣಿ, ಕೆಲವೊಂದು ಜನಾಂಗಕ್ಕಂತೂ ಇದು ದೇವರ ಪ್ರತಿರೂಪ. ಅದರ ಕೆಚ್ಚಲಿನಲ್ಲಿ ಮುಕ್ಕೋಟಿ ದೇವತೆಗಳೇ ಅಡಗಿಸಿಕೊಂಡಿದ್ದಾರೆ ಎಂಬ ಧಾರ್ಮಿಕ ದೃಷ್ಟಿಕೋನ ಹೊಂದಿ ಅದಕ್ಕೆ ಪವಿತ್ರ ಸ್ಥಾನವನ್ನು ನೀಡಿದ್ದಾರೆ. ಆದರೆ ದಲಿತರಿಗೆ ಅದೇ ಆಹಾರಕ್ಕಾಗಿ ಪರಿಣಮಿಸಿದೆ”.[೨೮]

ಈ ಉಭಯ ವೈರುಧ್ಯಗಳನ್ನು ಅರಿಯದೆ; ಕೋಮುವಾದಿಗಳು, ಮೂಲಭೂತವಾದಿಗಳು ಸಮಾಜದಲ್ಲಿ ಗಲಭೆ ಉಂಟುಮಾಡುವ ಮೂಲಕ ಶಾಂತಿಯನ್ನು ಕದಡುತ್ತಿದ್ದಾರೆ. ಆ ಮೂಲಕ ತಿನ್ನುವ ಹಕ್ಕನ್ನು ಕಿತ್ತುಕೊಳ್ಳುತ್ತಿದ್ದಾರೆ.

“ಅಸ್ಪೃಶ್ಯ!
ಹೌದು; ನಾನು ಗೋವು ತಿನ್ನುತ್ತೇನೆ
ಗೋವು ತಿಂದು ಗೋವಿನಂತಾಗಿ
ರೋಮ ರೋಮಗಳಲ್ಲು ಕೆಚ್ಚಲನು ಹೊತ್ತು
ತಿರುಗುತ್ತೇನೆ
ಕಸದ ತೊಟ್ಟಿಯಲ್ಲಿ ಬಿದ್ದ ಕೂಸುಗಳಿಗೆ
ಹಾಲು ಕುಡಿಸುತ್ತೇನೆ.

ಅಸ್ಪೃಶ್ಯ!
ಹೌದು; ನಾನು ಗೋವು ತಿಂದು
ಗೋವಿನಂತಾದವನು
ನೀವು ನೀಡುವ ಮೇವು ತಿಂದು
ನಿಮ್ಮಂಥ ಮನುಷ್ಯನಾಗಲಾರೆ
ಮನುಷ್ಯರನ್ನು ತಿನ್ನಲಾರೆ”[೨೯]

ನಟರಾಜ್ ಹುಳಿಯಾರ್ ಅವರ ಮಾತುಗಳು ಈ ಕವಿತೆಗೆ ಮತ್ತಷ್ಟು ಜೀವಕಳೆ ತಂದಿವೆ.

“ಈಚಿನ ದಿನಗಳಲ್ಲಿ ‘ಗೋವು ತಿಂದು ಗೋವಿನಂತಾದವನು’ ಎನ್ನುವಷ್ಟು ಒರಿಜಿನಲ್ ಆದ ರೂಪಕವೊಂದನ್ನು ನಾನು ಕಂಡಿರಲಿಲ್ಲ. ಕವಿ ಎಜ್ರಾಪೌಂಡ್ ಹೇಳಿದ ಮಾತು ಇಲ್ಲಿ ಮತ್ತೊಮ್ಮೆ ನೆನಪಾಯಿತು: ಬೃಹತ್ ಕೃತಿಗಳನ್ನು ಉತ್ಪಾದಿಸುವುದಕ್ಕಿಂತ ಒಂದು ಅಪ್ಪಟ ಪ್ರತಿಮೆಯನ್ನು ನಿರ್ಮಿಸುವುದು ಮೇಲು’. ಇಂಥ ಅಪ್ಪಟ ಪ್ರತಿಮೆ ಕೊಟ್ಟ ಹನುಮಂತಯ್ಯ ಇದೇ ಪದ್ಯದಲ್ಲಿ ಸವರ್ಣೀಯರಿಂದ ನೋವುಂಡ ದಲಿತರ ತಾಯ್ತನದ ಸ್ವರೂಪವನ್ನೂ ಕಾಣಿಸಿದ್ದರು”.[೩೦]

'ನೀವು ನೀಡುವ ಮೇವು ತಿಂದು, ನಿಮ್ಮಂಥ ಮನುಷ್ಯನಾಗಲಾರೆ, ಮನುಷ್ಯರನ್ನು ತಿನ್ನಲಾರೆ' ಎಂದು ಕವಿತೆ ಪ್ರತಿರೋಧವನ್ನು ಒಡ್ಡುತ್ತಿದೆ. ಮನುಷ್ಯರ ಹಸಿವು ಪ್ರಾಣಕ್ಕಿಂತ ಗೋವು ಶ್ರೇಷ್ಠ ಎಂಬ ಮಾನವವಿರೋಧಿ ನಿಲುವನ್ನು ಕವಿತೆ ಪ್ರಶ್ನಿಸುತ್ತಿದೆ.

"ಹಸಿವು
ಅದಕ್ಕೆ ತಿಂದೆವು
ಗೋವು"[೩೧]

ಎಂಬ ಪಥ್ಯ ಹಸಿವಿನ ಕ್ರೌರ್ಯವನ್ನು ತಾಳಲಾರದೆ ಗೋಮಾಂಸವನ್ನು ತಿಂದದ್ದನ್ನು ಒಪ್ಪಿಕೊಳ್ಳುವ ಎದೆಗಾರಿಕೆಯನ್ನು ನಿರ್ಭಯವಾಗಿ ವ್ಯಕ್ತಪಡಿಸುತ್ತಿದೆ. ಯಾವ ಮುಲಾಜಿಗೂ ಒಳಗಾಗದೆ ಇದು ನನ್ನ ಆಹಾರ, ಅದನ್ನು ತಿನ್ನುವ ಹಕ್ಕು ನನಗಿದೆ ಎಂಬ ಪ್ರತಿರೋಧದ ಧ್ವನಿಯಲ್ಲಿ ಈ ಕವಿತೆ ಮೂಲಭೂತ ನುಡಿಗಳಿಗೆ ಸವಾಲು ಹಾಕುತ್ತಿವೆ.

"ಸತ್ತ ದನಗಳು
ನಮಗೆ ಸೂತಕವೂ ಅಲ್ಲ
ಹಸಿದ ಒಡಲಿನಲಿ ಬಸಿದ ಉಸಿರು
ಸತ್ತ ದನಗಳು
ನಮಗೆ ಬರಿಯ ದನಗಳು ಅಲ್ಲ
ಬತ್ತಿದ ಎದೆಯಲ್ಲಿ ಉಕ್ಕಿದ ಜೀವ ಜಲವು"[೩೨]

ಗೋವಿನ ಬಗೆಗಿರುವ ಪಾವಿತ್ರ್ಯದ ಭಾವನೆ, ಕಲ್ಪನೆಗಳನ್ನು ಈ ಕವಿತೆ ಛಿದ್ರಗೊಳಿಸುತ್ತಿದೆ. ಆ ಮೂಲಕ ಒಂದು ಪ್ರಬಲ ಸಂಸ್ಕೃತಿಯು ಇನ್ನೊಂದು ಸಂಸ್ಕೃತಿಯ ಆಹಾರದ ಹಕ್ಕನ್ನು ಕಸಿಯುವ, ನಿಯಂತ್ರಿಸುವ ಬಗೆಗಳನ್ನು ಪ್ರಶ್ನಿಸುತ್ತಿದೆ. ನಿರೂಪಕನಿಗೆ ಹಸಿವು ಮುಖ್ಯ; ಮತೀಯವಾದಿಗಳಿಗೆ ಗೋವು ಶ್ರೇಷ್ಠ. ಈ ಇಬ್ಬಂದಿತನದಿಂದ ಹೊರಬರಲು ಕವಿ ಇಲ್ಲಿ ಹಲವು ಕೀಲಿಕೈಗಳನ್ನು ನೀಡಿದ್ದಾನೆ. ಕವಿತೆಯ ಕೊನೆಯಲ್ಲಿ

"ದೇವರ ಮಕ್ಕಳು
ನಾವು! ಅದಕ್ಕೆ ದೇವರ ಹೆಣಗಳ
ಹಕ್ಕುದಾರರು ನಾವು!"[೩೩]

ಎಂದು ಹಕ್ಕೊತ್ತಾಯದ ರೀತಿಯಲ್ಲಿ ಈ ಆಹಾರ ರಾಜಕಾರಣದ ಜಿಜ್ಞಾಸೆಗೆ ತೆರೆ ಎಳೆಯುತ್ತಿದೆ.

ಈ ಕವಿತೆಯನ್ನು ಓದುವಾಗ ನಮ್ಮೊಳಗೆ ಎಸ್.ಕೆ. ಹನುಮಂತಯ್ಯ ಅವರ 'ಗೋವು ತಿಂದು ಗೋವಿನಂತಾದವನು' ಕವಿತೆಯ ಚಿತ್ರವೇ ಕಣ್ಮುಂದೆ ಬರುತ್ತದೆ. ಆ ಕವಿತೆಯಷ್ಟು ಸಶಕ್ತವಾಗಿ ಮೂಡಿಬಂದಿಲ್ಲವಾದರೂ ಆಹಾರ ಸಂಸ್ಕೃತಿಯ ವಿರುದ್ಧ ಬಂಡೇಳುವ ಕವಿಯು ಪ್ರಯತ್ನ ಸ್ವಾಗತಾರ್ಹವಾದುದು.

"ನಿದ್ದೆ ತರದ ಜೋಪಡಿಯಲ್ಲಿ
ಕನಸ್ಸುಗಳನ್ನು ಕೂಡ ಮಾರುತ್ತಿದ್ದೆವು"[೩೪]

ಎಂಬ ಮಾತು ಎನ್.ಕೆ. ಹನುಮಂತಯ್ಯ ಅವರದೇ ಸಂತೆಯಲ್ಲಿ ಕಣ್ಣೀರನ್ನು ಮಾರುವ ಕೆಲಸ ಕೊಟ್ಟಿದ್ದಕ್ಕೆ ಧನ್ಯವಾದಗಳು ಎಂಬ ಸಾಲುಗಳನ್ನು ನೆನಪಿಗೆ ತರುತ್ತದೆ.

**೪.೨.೧. ಸಂಘರ್ಷದ ನೆಲೆ**

ಮತೀಯ ಸಂಘರ್ಷದ ಕರಾಳ ಚಿತ್ರಣವನ್ನು ನೆನಪಿಸುವ ಈ ಕವಿತೆ, ಬೂದಿ ಮುಚ್ಚಿದ ಕೆಂಡದಂತಿರುವ ಗಾಯಗೊಂಡ ಸ್ಥಿತಿಯೊಂದನ್ನು ಕಾಣಿಸುತ್ತಿದೆ. 'ಹಾವು-ಪೊರೆ' ಎಂಬ ಸಂಕೇತಗಳು ಈ ವ್ಯವಸ್ಥೆಯಲ್ಲಿ ಸಂಭವಿಸುವ ಸಂಘರ್ಷಾತ್ಮಕ ಪರಿಸ್ಥಿತಿಯನ್ನು ಕಣ್ಣಿಗೆ ಕಟ್ಟುತ್ತದಲೇ ಇರುವುದರಿಂದ ಮುಂತಾದ ಪರಿಣಾಮವನ್ನು ಕಲ್ಪನೆಗೆ ತರುತ್ತವೆ.

"ಬೆಂಕಿ ಉರಿದು
ಆರಿದೆ;
ಆಕಾಶ ತುಂಬಿದೆ
ಹೊಗೆ

ಮಂದಿರವೊ
ಮಸೀದಿಯೊ
ಬೀಜ ಬಿತ್ತಿದವರಿಲ್ಲ
ಈಗ;
ವಿಷವೃಕ್ಷ
ಬೆಳೆದು ನಿಂತಿದೆ
ಎಲ್ಲೆಲ್ಲೂ"[೩೫]

ಮತೀಯ ಜ್ವಾಲೆ ವಿಷವೃಕ್ಷದ ಹಾಗೆ ಬೃಹದಾಕಾರವಾಗಿ ಹಬ್ಬುತ್ತಿರುವ ಸಂದರ್ಭದಲ್ಲಿ ಮಂದಿರ ಮಸೀದಿಗಳ ಹೆಸರಿನಲ್ಲಿ ಸಣ್ಣ ಸಣ್ಣ ವಿಷಯಗಳಿಗೂ ಗಲಭೆಗಳು ನಡೆಯಬಹುದು. ಇಂಥ ಭಯ ಮತ್ತು ಆತಂಕದ ಸನ್ನಿವೇಶ ಕವಿಯ ಮನಸ್ಸನ್ನು ಕದಡಿದೆ. 'ಬೆಂಕಿ ಉರಿದು ಆರಿ ಅದರ ಹೊಗೆ ಆಕಾಶಕ್ಕೂ ತುಂಬಿ ತನ್ನ ಇಡೀ ಸುತ್ತಣ ಜಗತ್ತನ್ನು ಕತ್ತಲೆಯ ಕೂಪಕ್ಕೆ ತಳ್ಳಿದೆ. ಇಡೀ ಪರಿಸರವೇ ಸ್ಮಶಾನ ಮೌನಕ್ಕೆ ಜಾರಿದೆ. ಅಷ್ಟರ ಮಟ್ಟಿಗೆ ಈ ಮನೆಯ ಸಂಘರ್ಷದ ವಿಷಜ್ವಾಲೆ ಆವರಿಸಿದೆ.

ಇಂಥದ್ದೇ ಒಂದು ಕರಾಳ ಮತ್ತು ರೌದ್ರ ಜಗತ್ತನ್ನು ಕಾಣಿಸುವ ಕವಿ 'ಬಣ್ಣ ಬಣ್ಣದ ವೇಷತೊಟ್ಟ ಪಟ್ಟೆನಾಮಧಾರಿ'ಗಳ ಅಸಲಿ ಮುಖವನ್ನು ಕಳಚಿಬಿಡುತ್ತಾರೆ. ಗುಜರಾತಿನ ಭೀಕರ ನರಮೇಧಕ್ಕೆ ಕವಿಯ ಪ್ರತಿಕ್ರಿಯೆ ಹೀಗಿದೆ:

"ಒಮ್ಮೆ ನೆಲ ನಡುಗಿದ್ದು ಬಿಟ್ಟರೆ
ಇಲ್ಲಿ ಎಲ್ಲವೂ ನಿತ್ಯದ ಹಾಗೆ

ಗುಡ್ಡ ಬೆಟ್ಟ ಕಾನೂ ಬಾನು
ಮೌನ ಮುರಿಯದ ಹೆಬ್ಬಂಡೆಗಳು
ಸಂಜೆಯ ಆಕಾಶದ ರಂಗು
ಮುಸ್ಸಂಜೆಗೆ ಇಳಿಯುವ ಕರಿಪರದೆ

ಬದಲಾಗುವ ಋತುಚಕ್ರ
ಚಿಗಿಯುವ ಮರಗಿಡಗಳು
ಹೂ ಬಳ್ಳಿಗಳು ಮಿಣುಕು ಚುಕ್ಕೆಗಳು

ಹಾಡುವ ಹಕ್ಕಿಗಳು ಕೊನೆಯುವ ಪಯಿರು
ಕಡಲಲ್ಲಿ ಹೊರಟ ಹಾಯಿ ದೋಣಿಗಳು
ಕಡಲುಪ್ಪು ನೀರಿಗೆ ಸೇರುವ ಬೆವರು
ನಿತ್ಯದ ನಿರಂತರ ಹುಡುಕಾಟ"[೩೬]

ಸಮಾಜದಲ್ಲಿ ಉಂಟಾಗಿರುವ ಒಂದು ರೀತಿಯ ಆತಂಕದ ಸ್ಥಿತಿ ಮನುಷ್ಯರನ್ನು ದಿಗ್ಮೂಢರನ್ನಾಗಿಸಿದೆ. 'ಗುಜರಾತು' ಭಯದ ನೆರಳಲ್ಲಿ ಬಸವಳಿದಿದೆ. ಸಾಮಾಜಿಕ ಬಿಕ್ಕಟ್ಟು, ಹತಾಶೆ, ಆತಂಕ, ಪ್ರತಿಭಟನೆ ಸಾಮಾನ್ಯವಾಗಿವೆ. ನಿತ್ಯ ಘಟಿಸುವ ಸಾವು–ನೋವುಗಳಿಗೆ ಎಲ್ಲೆಲ್ಲೂ ಮೌನ ಆವರಿಸಿದೆ.

"ಎಲ್ಲಿಂದ ಬಂದರು ಇವರು
ನಮ್ಮೊಳಗೇ ಇದ್ದವರೊ?
ಬಣ್ಣ ಬಣ್ಣದ ವೇಷತೊಟ್ಟು
ಪಟ್ಟೆನಾಮಗಳ ಇಟ್ಟು
ಮುಖಗಳ ಕಳಚಿ ಮುಖವಾಡಗಳ ತೊಟ್ಟು
ಮಂತ್ರ ಪಠಿಸಿ ತಂತ್ರಗಳ ರೂಪಿಸಿ
ನೆಲಬಿಟ್ಟು ಹೆಜ್ಜೆ ಇಟ್ಟವರು
ಬೀದಿಗಳಲ್ಲಿ ಕುಣಿದವರು ನೆತ್ತರ ಮೊಗೆಮೊಗೆದು
ಕುಡಿದವರು
ಕೊಳ್ಳಿದೆವ್ವಗಳ ಕುಣಿತ ನಿಲ್ಲುವುದಿಲ್ಲ
ಕತ್ತಲೆ ಕಳೆದು ನಿಶೆ ಇಳಿವವರೆಗೆ"[೩೭]

ಧರ್ಮದ ಹೆಸರಿನಲ್ಲಿ ಸಂಭವಿಸುವ ಘರ್ಷಣೆಗಳು ಅಮಾನವೀಯವಾದವು. ಇದರಿಂದ ಸಮಾಜದ ಸ್ವಾಸ್ಥ್ಯ ಕೆಡುತ್ತದೆ. ಸದಾ ಘಟಿಸುವ ಇಂಥ ಸಾಮಾಜಿಕ ಕೇಡುಗಳಿಗೆ ಕವಿಗಳು

ಆತಂಕ, ವಿಷಾದ ಮತ್ತು ಪ್ರತಿರೋಧದ ನೆಲೆಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಧರ್ಮ ಮತ್ತು ಅದರ ಕೇಡುಗಳು ಹೊಸ ತಲೆಮಾರಿನ ಕವಿಗಳಿಗೆ ಜೀವನ್ಮರಣದ ಪ್ರಶ್ನೆಗಳಾಗಿವೆ.

"ನಮ್ಮ ಮೇಲೆ ಆಗುವ ಭೂತ, ವರ್ತಮಾನ ಮತ್ತು ಭವಿಷ್ಯತ್ಕಾಲಗಳ ಜೀವವಿರೋಧಿ ಆಕ್ರಮಣಗಳ ವಿರುದ್ಧದ ಆಂತರಿಕ ದಂಗೆಯೇ ಬರಹ. ಹಾಗಾಗಿ ಅದು ರಮ್ಯ ಅಥವಾ ಪವಾಡಕ್ರಿಯೆಯಲ್ಲ. ಪರಂಪರಾಗತ ಸಮಾಜಮುಖಿ ಚಿಂತನೆ ಮತ್ತು ಚಳುವಳಿಯ ಮುಂದುವರೆದ ಭಾಗವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ನನ್ನ ಬರಹ ನನ್ನನ್ನು ಆಂತರಿಕವಾಗಿ ಮತ್ತು ಬಾಹ್ಯವಾಗಿ ಆವರಿಸಿದ ಜಾತಿ ಧರ್ಮದ ಹಿಂಸೆಯ ಕೋಟೆಯನ್ನು ಸ್ಫೋಟಿಸಿ ನನ್ನ ಸ್ವಂತಿಕೆ, ಸ್ವಾತಂತ್ರ್ಯ ಮತ್ತು ಸ್ವಾಭಿಮಾನದ ವ್ಯಕ್ತಿತ್ವವನ್ನು ವಿಸ್ತರಿಸುವ ಗುರುವಾಗಿದೆ."[೩೮]

ಹೀಗೆ ಕೋಮುವಾದ ಮತ್ತು ಧಾರ್ಮಿಕ ಸಂಘರ್ಷಕ್ಕೆ ಕಾರಣವಾದ ಅಂಶಗಳ ಬಗ್ಗೆ ಕನ್ನಡ ಕಾವ್ಯದಲ್ಲಿ ಹಲವು ಪ್ರತಿರೋಧದ ನೆಲೆಗಳು ಕಾಣುತ್ತವೆ.

**೪.೨.೨. ಧಾರ್ಮಿಕ ಹಿಂಸೆ: ಪ್ರತಿರೋಧದ ನೆಲೆ**

ಮತೀಯವಾದಿಗಳು ಮಂದಿರ, ಮಸೀದಿ ಹಾಗೂ ಚರ್ಚ್‌ಗಳ ಮೇಲೆ ದಾಳಿ ಮಾಡಿ ಕೋಮುಗಲಭೆಗೆ ಪುಷ್ಟಿ ನೀಡುತ್ತಾರೆ. ಇಂಥ ವಿಕೃತಿಗಳು ಧರ್ಮ–ಧರ್ಮಗಳ ನಡುವಿನ ಗಲಭೆಗೆ ಕಾರಣವಾಗುತ್ತವೆ. ಚರ್ಚ್‌ಗಳ ಮೇಲಿನ ನಿರಂತರ ದಾಳಿಯನ್ನು ಈ ಕವಿತೆ ವ್ಯಂಗ್ಯಭರಿತ ದಾಟಿಯಲ್ಲಿ ಬಿಚ್ಚಿಡುತ್ತದೆ.

"ಕ್ರಿಸ್ತಪಾದ್ರಿಗಳು ಮುಖ್ಯಮಂತ್ರಿಗಳ ಭೇಟಿ
ಕ್ರಿಸ್ತರ ದುಃಖ ಆಕ್ರೋಶಕ್ಕೆ ಇಲ್ಲವೇ ಇಲ್ಲ ಸಾಟಿ
ದೇಶದ ಮುಂದೆ–
ಅವರದ್ದು ಒಂದೇ ಒಂದು ದೂರು
ಅಪಾಯದಲ್ಲಿದೆ ಕ್ರಿಸ್ತರ ಆತ್ಮದ ಸೂರು

"ಚಡ್ಡಿಗಳ ಅಧಿಕಾರ ಅಹಂಕಾರದ ಮಸ್ತಿ
ಅಮಾಯಕ ಕ್ರಿಸ್ತರ ಮೇಲೆ ಕುಕಾರಣ ಕುಸ್ತಿ
ಪುರೋಹಿತ ಪುರಾಣ ರಾಕ್ಷಸ ನರ್ತನ
ಎಲ್ಲೆಲ್ಲೂ ಚರ್ಚ್‌ಗಳ ನಿರಂತರ ದಮನ"

ಹೀಗೆ ನಡೆದಿತ್ತು ಮಾತು ಕತೆ–
ಪಾದ್ರಿಗಳದು ಒಂದೇ ಒಂದು ಪ್ರಶ್ನೆ
"ಮಾನ್ಯ ಮುಖ್ಯಮಂತ್ರಿಗಳೆ.....
ನಿಮ್ಮ ಸರ್ಕಾರಕ್ಕಿದು ಶೋಭವೆ?"

ಆ ಪಾದ್ರಿಗಳ ಈ ಪ್ರಶ್ನೆಯಿಂದ ಕೆರಳಿ
ಕೂರ್ಮಾವತಾರವನ್ನೇ ತಾಳಿದ....
ಮುಖ್ಯಮಂತ್ರಿಗಳು
"ಶೋಭಾ ವಿಷಯ ನಿಮಿಗ್ಯಾಕ್ರಿ?"[೬೯]

ಧರ್ಮಗಳು ಕೋಮುವಾದಕ್ಕೆ ಕಾರಣವಾಗುತ್ತವೆ. ಅಂತಹ ಆತಂಕಕಾರಿ ವಿಷಯಗಳನ್ನು ಪ್ರಭುತ್ವ ಸರಿಪಡಿಸಬೇಕಾದ ಅನಿವಾರ್ಯತೆ ಇರುತ್ತದೆ. ಚರ್ಚ್, ಮಸೀದಿ, ಮಂದಿರಗಳ ಮೇಲೆ ದಾಳಿಗಳು ನಡೆಯುತ್ತಲೆ ಇರುತ್ತವೆ. ಈ ಘಟನೆಗಳಿಗೆ ಕಾರಣಗಳೇನು? ಕಾರಣ ಪ್ರಭುತ್ವ ನಿರಾಕರಿಸುವುದನ್ನು ಕುರಿತು ಕಾವ್ಯ ರಚಿಸಿದ್ದಾರೆ. ಪ್ರಭುತ್ವದಲ್ಲಿನ ವ್ಯಕ್ತಿಗಳನ್ನು ಕುರಿತು ವ್ಯಂಗ್ಯವಾಗಿ ಪ್ರಭುತ್ವವನ್ನು ಟೀಕಿಸಿದಂತಿದೆ.

ಪ್ರಭುತ್ವದ ಅಧಿಕಾವನ್ನು ಹಿಡಿದವರು ಯಾರು? ಅವರ ಚಿಂತನೆಗಳು ಮತ್ತು ಆಲೋಚನೆಗಳು ಇವುಗಳನ್ನು ನಿರ್ಧರಿಸಿರುತ್ತವೆ. ಮೂಲಭೂತವಾದಿ ಚಿಂತನೆಗಳು ಇವರಲ್ಲೂ ಅಡಗಿಕೊಂಡು ಪ್ರಭುತ್ವವನ್ನು ನಡೆಸಿದ್ದಾರೆ. ಸಮಾಜದ ಎಲ್ಲ ಅಹಿತಕರ ಘಟನೆಗಳಿಗೆ ಪ್ರಭುತ್ವವೇ ಕಾರಣವಾಗುತ್ತದೆ ಎಂದು ಕವಿ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.

ಎಲ್ಲಾ ಧರ್ಮಗಳು ಒಂದೇ ಎಂದು ತಿಳಿಯಿರಿ, ಎಲ್ಲಾ ಮನುಷ್ಯರ ಕಷ್ಟಗಳು ಒಂದೇ ಆಗಿದೆ ಯಾರ ಮೇಲೆ ದಾಳಿ ಆಗಲಿ ದಾಳಿಗೆ ಕಾರಣವಾದವರನ್ನು ಶಿಕ್ಷಿಸಿ, ನ್ಯಾಯ ಒದಗಿಸಿ ಎಂದು ಕವಿ ಈ ಕವಿತೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಭಾರತದ ಅಲ್ಪ ಸಂಖ್ಯಾತರಾದ ಮುಸ್ಲಿಮರ ಬದುಕಿನ ಯಾತನೆಯನ್ನು ಇಲ್ಲಿ ಕಾಣಬಹುದು.

"ಓ ನನ್ನ ಹುಚ್ಚು ಭಾಯೀ,
ಹುಷಾರು!
ಖಬರಗೇಡಿಯದಾಗಿ ಹಾದಿ ತಪ್ಪದಿರು!

ನನಗೆ ಗೊತ್ತು;
ನಿನ್ನ ನಾಡನಿಷ್ಠೆಯನೆ ಆಗೀಗ
ಶಂಕಿಸಲಾಗುತ್ತಿದೆ;
ಮಲತಾಯಿ ಮಗನಂತೆ ಬೇರೆ
ಕಾಣಲಾಗುತ್ತಿದೆ!"[೭೦]

ಭಾರತದಂಥ ಸರ್ವಧರ್ಮ ರಾಷ್ಟ್ರದಲ್ಲಿ ಧಾರ್ಮಿಕ ಅಲ್ಪಸಂಖ್ಯಾತರು ಮತ್ತು ಸಣ್ಣಪುಟ್ಟ ಸಮುದಾಯಗಳ ಜನರನ್ನು ಪರಕೀಯರನ್ನಾಗಿ ನೋಡುವ ಕ್ರಮವನ್ನು ಇಲ್ಲಿ ಖಂಡಿಸಲಾಗುತ್ತಿದೆ. ಇಂಥ ಆತಂಕ ಮತ್ತು ಭಯದ ನಡುವೆಯೂ ಮಾನವೀಯ ಪ್ರೀತಿ ಎಂಥವರ ದ್ವೇಷ–ಅಸೂಯೆಗಳನ್ನು ಸಹ ಇಲ್ಲವಾಗಿಸುತ್ತದೆ ಎಂಬ ನಂಬಿಕೆ ಕವಿಗಿದೆ.

ಇನ್ನೊಂದು ಪದ್ಯದಲ್ಲಿ ಇದೇ ರೀತಿಯ ಶಂಕೆ ಕವಿಯ ಮನಸ್ಸಿನಲ್ಲಿ ಮೂಡಿದೆ. ಅದು ಕೂಡ ಈ 'ನಾಡ ನಿಷ್ಠೆ'ಯನ್ನು ಶಂಕಿಸುವ ಮೂಲಭೂತವಾದಿ ಸ್ವರೂಪದ್ದು.

"ಓ!
ನಿನ್ನ ನಾಡ ನಿಷ್ಠೆಯನೆ ಶಂಕಿಸುವ
ಕ್ರೂರ ಕಣ್ಣು ನಿನ್ನ ಮೇಲೆರಗಿದೆ–
ತಲೆ ಮೇಲೆ ತೂಗುವ ಕತ್ತಿಯಾಗಿದೆ!"[೪೧]

ಕೋಮುವಾದವೆಂದರೆ ಕೇವಲ ಹಿಂದೂ–ಮುಸ್ಲಿಮರ ನಡುವಣ ಧಾರ್ಮಿಕ ಕದನ ಎಂದಷ್ಟೇ ಕೆಲವರು ಭಾವಿಸಿದ್ದಾರೆ. ಇಲ್ಲಿ ಕವಿ ಕೇವಲ ಬಹುಸಂಖ್ಯಾತರಾದ ಹಿಂದೂಗಳು, ಮುಸ್ಲಿಮರ ಮೇಲೆ ನಡೆಸುವ ಗಲಭೆಗಳ ಚಿತ್ರಣಗಳನ್ನಷ್ಟೇ ಕೊಟ್ಟಿಲ್ಲ; ಮುಸ್ಲಿಂ ಮೂಲಭೂತವಾದದ ಕ್ರೂರಹಿಂಸೆಯನ್ನೂ ಸಹ ಖಂಡಿಸಿದ್ದಾರೆ.

"ಸಾಮಾಜಿಕ ಕಳಕಳಿಯನ್ನು ಮೂಲದಲ್ಲಿಟ್ಟುಕೊಂಡು ಈ ಕಾಲದಲ್ಲಿ ಬರೆದ ಎಷ್ಟು ಕವಿಗಳು ನಮ್ಮಲ್ಲಿ ಎಂಥ ತಾತ್ವಿಕ ತಾಟಸ್ಥ್ಯವನ್ನು ಸಾಧಿಸಿದ್ದಾರೆ? ಬಹು ಕಡಿಮೆ. ಅದಕ್ಕೇ ಅಕಬರ ಅಲಿಯವರು ಈ ದೃಷ್ಟಿಯಿಂದ ನಮ್ಮ ಕಾಲದ ಅಪರೂಪದ ಕವಿ. ಅವರ ಕೊನೆಯ ಎರಡು ಕವನ ಸಂಗ್ರಹಗಳು ಮಸ್ಲಿಮ್ ಜೀವನವನ್ನು ಕಾವ್ಯವಸ್ತುವನ್ನಾಗಿ ಹೊಂದಿದ ಹಲವಾರು ಕವನಗಳನ್ನು ಹೊಂದಿವೆ. ಆದರೆ ಅವರು ಎಲ್ಲಿಯೂ ಪಕ್ಷಪಾತಿಗಳಾಗಿಲ್ಲ. ಮಾನವೀಯತೆಯನ್ನು ಮರೆತಿಲ್ಲ ಮತ್ತು ತನ್ಮೂಲಕ ಕಾವ್ಯಧರ್ಮವನ್ನು ಮೀರಿಲ್ಲ. ಸಾಮಾಜಿಕ ಅನ್ಯಾಯದ ವಿರುದ್ಧ ದನಿ ಎತ್ತಿದಾಗಲೂ ಅವರು ತತ್ವಜ್ಞಾನಿಯ ದೃಷ್ಟಿಕೋನವನ್ನೇ ಹೊಂದಿದ್ದಾರೆ."[೪೨]

"ಯಾರು ಕದ್ದರು,
ಸಂತರ ಎದೆಯ ಬೆಳಕು
ಶಬ್ದದೊಳಗಿನ ನಿಶ್ಶಬ್ದ
ನೀರವ ಕತ್ತಲೆಯ ಚಂದ್ರನನ್ನು....

ಯಾರು ಕದ್ದರು,
ದರ್ಗಾದ ಗೋರಿಗಳ ಮೇಲಿನ ಗುಲಾಬಿ
ಮಂದಿರದ ಮೂಲೆಮೂಲೆಯ ದೀಪ
ಶಿಲುಬೆಗಂಟಿದ ಕ್ರಿಸ್ತನ ಕರುಣೆ....

ಯಾರು ಕದ್ದರು,
ಫಕೀರರ ಬಟ್ಟಲೊಳಗಿನ ಕಾಸು
ಜಂಗಮರ ಜೋಳಿಗೆಯ ಹಿಟ್ಟು
ಭಿಕಾರಿಗಳ ಹಳಸಿದನ್ನದ ಗಂಟು...

ಯಾರು ಕದ್ದರು,
ಕೂಸಿನ ಪಾಲಿಗಿಟ್ಟದ್ದ ಹಾಲು
ಮನುಜರ ಎದೆಯಾಳದ ಕನಸು
ಉರಿವ ಈ ನೆಲದ ನೆಮ್ಮದಿ..."[೪೩]

ಜಾತಿ-ಧರ್ಮಗಳ ವಿಷಬೀಜ ಬಿತ್ತಿ ಸಮಾಜದಲ್ಲಿ ಸೌಹಾರ್ದವನ್ನು ಕದಡುವ ಬಗೆಯನ್ನು ಈ ಕವಿತೆ ಬಿಚ್ಚಿಡುತ್ತದೆ. ಇಂಥ ಧರ್ಮಸಹಿಷ್ಣತೆಯನ್ನು ಮತ್ತು 'ಶಿಲುಬೆಗಂಟಿದ ಕ್ರಿಸ್ತನ ಕರುಣೆ'ಯನ್ನು ಮನುಷ್ಯರು ಅರಿಯಬೇಕಾಗಿದೆ ಎಂಬ ಇಂಗಿತ ಈ ಕವಿತೆಯದ್ದು.

ಸಮಾಜದಲ್ಲಿರುವ ಪ್ರೀತಿ, ನೆಮ್ಮದಿ ಧರ್ಮಗಳ ನಿಜವಾದ ಸಾರ, ಕರುಣೆ! ಬಡವರ ಸುಖವನ್ನು ಯಾರು ಹಾಳುಮಾಡುತ್ತಿದ್ದಾರೆ, ಮೂಲಭೂತವಾದಿಗಳ ಚಿಂತನೆಗಳು ಸಮಾಜವನ್ನು ಹೇಗೆ ಹಾಳುಮಾಡುತ್ತಿವೆ, ಅಂಥ ಚಿಂತನೆಗಳ ಮೂಲಕ ಜನರ ಮನಸ್ಸನ್ನು ಮೂಲಭೂತವಾದಿತನಕ್ಕೆ ಹೇಗೆ ಸಿಲುಕಿಸಿಕೊಂಡಿವೆ ಎಂಬುದನ್ನು ಕವಿ ವಿಷಾದದಿಂದ ಹೇಳಿದ್ದಾರೆ.

ಜನರ ಮನಸ್ಸಿನಲ್ಲಿ ಇಂತಹ ವಿಷ ಬೀಜವನ್ನು ಬಿತ್ತುವ ಕೆಲಸ ಮಾಡುವ ಮೂಲಭೂತವಾದಿ ಚಿಂತನೆಗಳ ವಿರುದ್ಧ ಪ್ರತಿಭಟನೆ ಮಾಡಿ ಜಾಗೃತಿ ಮೂಡಿಸುವ ಕೆಲಸ ಮಾಡಬೇಕು ಎಂಬ ಆಶಯ ವ್ಯಕ್ತಪಡಿಸುತ್ತಾರೆ.

"ದಿನದಿಂದ ದಿನಕ್ಕೊಂದು ಥರಾ ದೆಹಲಿಯ ಗಾಳಿ
ಎಲ್ಲಿಂದಲೋ ಬಂದು ಎಲ್ಲಿಗೋ ಬೀಸುವುದು
ದಾರಿ ತಪ್ಪಿದ ಹಾಗೆ ನಿಂತಲ್ಲೆ ಸುತ್ತುವುದು
ರಾಮಲೀಲಾ ಮೈದಾನದೊಳಗೆಬ್ಬಿಸುತ ಧೂಳಿ!

ದೂರದೂರಕೆ ಹರಿವ ರಾಜಧಾನಿಯ ಗಾಳಿ
ಇಳಿಯಲೊಲ್ಲದ್ದೇಕೊ ಒಳಗಿನವರಾಳಕ್ಕೆ!"[೪೪]

ಪ್ರಭುತ್ವ ಕೇಂದ್ರಿತ ಯಜಮಾನಿಕೆಯ ವಿರುದ್ಧ ಈ ಕವಿತೆ ದನಿ ಎತ್ತುತ್ತಿದೆ. ಅಷ್ಟೆ ಅಲ್ಲ, ಶಕ್ತಿಕಾರಣದ ಕ್ರೌರ್ಯವನ್ನು ಬಿಚ್ಚಿಡುತ್ತಿದೆ. ಈ ಹಿಂಸೆ, ನೋವು, ಅವಮಾನಗಳಾಚೆ 'ಕೇಳಬಹುದೇ ಕೊನೆಗೆ ಸಾಮಗಾನದ ಮುರಲಿ? ಎಂಬ ನಿರೀಕ್ಷಣೆ ನಮ್ಮನ್ನು ಕರೆದೊಯ್ಯುತ್ತದೆ.

ಪ್ರಭುತ್ವ ರಾಜಕಾರಣದ ಜಗಳದಲ್ಲಿ ಸಾಮಾನ್ಯ ಜನರು, ಅಂದರೆ ಪ್ರಜಾಪ್ರಭುತ್ವದ ಪ್ರಜೆಗಳು ಹೇಗೆ ಬಲಿಯಾಗುತ್ತಿದ್ದಾರೆ. ಅಧಿಕಾರದ ಆಸೆಯಿಂದಾಗಿ ಶಕ್ತಿ ರಾಜಕಾರಣದ ಕೆಲವು ಗಲಭೆಯನ್ನು ಸೃಷ್ಟಿಸುತ್ತಿರುತ್ತಾರೆ ಇಬ್ಬರ ಜಗಳದಲ್ಲಿ ಅಮಾಯಕರು ಬಲಿಯಾಗುತ್ತಿರುತ್ತಾರೆ. ಶಕ್ತಿರಾಜಕಾರಣ ಜನರ ಹಿತಾಸಕ್ತಿಗಾಗಿ ಬಳಕೆಯಾಗಬೇಕು ಹಿಂಸಾಚಾರಕ್ಕಾಗಿ ಬಳಕೆಯಾಗಬಾರದು ಎಂಬ ಆಶಯವನ್ನು ಕವಿತೆ ಹೊಂದಿದೆ.

ಹಿಂದೂ ಮತ್ತು ಮುಸ್ಲಿಂ ಧರ್ಮದ ಹುಡುಗ–ಹುಡುಗಿ ಪ್ರೀತಿಸಿ ಮದುವೆಯಾಗಿ ತಲೆತಪ್ಪಿಸಿಕೊಂಡು ದೂರದೂರಿನಲ್ಲಿ ಬದುಕುತ್ತಿದ್ದರೂ ಬಿಡದ ಮನೆಯವರು ಅವರಿಬ್ಬರನ್ನು ಹುಡುಕಿ ಅವರ ಮಗುವಿನ ಎದುರೇ ಕೊಂದರು. ಇಂಥ ಮತೀಯ ಸಂಘರ್ಷದ ಹಲವು ಮುಖಗಳನ್ನು ಈ 'ರಕ್ತಪಾತದ ಕವನಗಳು' ನಮಗೆ ಕಾಣಿಸುತ್ತವೆ.

"ಅವರು ಅರ್ಧ ದೂರ ಮಾತ್ರ ಸವೆಸಿದ್ದರು
ಅವರಗಿಂತ ಬಹಳ ಎತ್ತರ
ಗುಡ್ಡದ ತುದಿಯ ಮಸೀದಿ
ಕಡಲ ಬದಿ ಚರ್ಚು
ಹತ್ತಗೊಡಲಿಲ್ಲ ಮೇಲೆ
ಕತೆ ಮುಗಿದುಹೊಯಿತು.

ಬದುಕುಳಿದ ಸಣ್ಣ ಜೀವಕ್ಕೆ
ನಾವು ಕತೆ ಹೇಳುತ್ತೇವೆ
ಒಂದೂರಿನಲ್ಲಿ ಒಬ್ಬ ಮೂರ್ಖ
ಒಬ್ಬಳು ಅತ್ತರು ರಾಣಿಯನ್ನು ಪ್ರೀತಿಸಿದ
ಅದಕ್ಕಾಗಿ ಇತರರು ಅತ್ತರು
ನಂತರ ಕೊಂದರು
ಆ ರಕ್ತದೋಕುಳಿಯಲ್ಲಿ ನೀನು ಹುಟ್ಟಿದೆ

ಆಮೇಲೆ, ಅವಳ ಕಣ್ಣುಗಳ ಹಸಿರು ಬೆಳಕಿನ ಬಗ್ಗೆ
ನ್ಯಾಷನಲ್ ಜಿಯಾಗ್ರಫಿಕ್ ಲೇಖನ ಬರೆಯುತ್ತದೆ.
ಸುಲ್ತಾನ್ ಪಾಳ್ಯದಲ್ಲಿ ನಡದು ಬರುತ್ತಿದ್ದಾಗ
ಅಮೇಧ್ಯ ತುಳಿದ ಶಾಸ್ತ್ರಿಗಳು ಎದೆಯೊಡೆದು ಸತ್ತರು
ಅವರ ಸಂಸ್ಕಾರದ ದಿನ ಕಣಿದವು ಚಾಕು ಚೂರಿ

ಸಗಣಿಯ ಉಂಡೆ ಉರುಳಿಸುತ್ತಿದ್ದ ಹುಳದ
ಕ್ಷಮೆ ಬೇಡಿದೆ ಸಾರಿ, ನಾವು ಮನುಷ್ಯರು
ಅದು ತನ್ನ ಪಾಡಿಗೆ ಹಾದುಹೋಯಿತು"[೪೫]

ಅಮೇಧ್ಯ ತುಳಿದ ಕಾರಣಕ್ಕಾಗಿ ಎದೆಯೊಡೆದು ಸತ್ತ 'ಶಾಸ್ತ್ರಿ' ಮತ್ತು ಸಗಣಿಯ ಉಂಡೆ ಉರುಳಿಸುತ್ತ ತನ್ನ ಸಾಲಿಗೆ ತಾನು ಹಾದುಹೋದ 'ಹುಳ' ಇಲ್ಲಿ ವೈರುಧ್ಯಗಳಾಗಿ ಕಾಣಿಸುತ್ತಾರೆ. ಸಣ್ಣ ಸಗಣಿಯ ಹುಳಕ್ಕಿರುವ 'ವಿವೇಕ', 'ಮಾನವೀಯತೆ' ಮನುಷ್ಯರಿಗಿಲ್ಲದಿರುವುದು ಮಹಾದುರಂತ. ಸಹಬಾಳ್ವೆಯಿಂದ ಸಕಲ ಜೀವರಾಶಿಗಳೊಂದಿಗೆ ಜೀವಿಸದೇ 'ಅನ್ಯರಿಗೆ ಅಸಹ್ಯ ಪಡುವ' ಮಾನವರನ್ನು ಕವಿ ವ್ಯಂಗ್ಯ ಮಾಡುತ್ತಿದ್ದಾರೆ.

‘ಧರ್ಮಕ್ಕೆ ಕೊಲ್ಲುವುದೇ ಗೌರವವೆಂದರೆ, ನಮ್ಮದು ಎಂತಹ ಧಾರ್ಮಿಕ ದೇಶ!’ ಎಂದು ಮಾರ್ಮಿಕವಾಗಿ ನುಡಿಯುತ್ತಾರೆ. ಧರ್ಮದ ಕೇಡು ಮನುಷ್ಯ ಮನುಷ್ಯರಲ್ಲಿ ದ್ವೇಷದ ಭಾವನೆ ಮಾಡಿಸುತ್ತದೆ. ನಿರ್ಭಯವಾಗಿ ದಾರಿಯಲ್ಲಿ ನಡೆಯಲಾಗದ ಆತಂಕದ ಸ್ಥಿತಿಯನ್ನು ಉಂಟು ಮಾಡುತ್ತದೆ.

“ಫ್ರಾಕೆತ್ತಿಕೊಂಡು ನಿರ್ಭಯವಾಗಿ ಓಡಾಡಿದ ಗಲ್ಲಿಗಳಲ್ಲಿ
ಈಗ ಕಾಲಿಡಲೂ ಆತಂಕ ನಡುಕ ಗಾಬರಿ
ಮೆಹಂದಿಯ ರಂಗಿಗಿಂತ ಘೋರ ಚೆಲ್ಲಿದ ರಕ್ತ

ಸತ್ತವರು ಮಾತ್ರ ಇಲ್ಲ ಬದುಕುತ್ತಾರೆ
ಆತ್ಮಸಾಕ್ಷಿಯ ಹಾಗೇ ತೊಳೆದುಹೋಗುತ್ತವೆ
ಎಲ್ಲ ರಕ್ತದೋಕುಳಿಯ ಕುರುಹು.
ಮಿನಾರಿನ ಕೆಳಗೆ ಕಾಗೆ ಎಂಜಲಿನ ಕುರುಹು
ಬೆಳದಿಂಗಳು ಅವಳಿಗೆ ಪ್ರಿಯವೆಂದ
ನಡುರಾತ್ರಿ ಹಣ್ಣು ಮಾರಿದ ನೆನಪು
ನಾರುವ ಹೆಣಗಳ ನಾತಕ್ಕೆ ಗಿಡುಗಗಳಿಗೂ ಹೇಸಿಗೆ

ಮೈಕುಗಳಲ್ಲಿ ಭಯಂಕರ ಭಾಷಣಗಳು
ಪ್ರೀತಿಗೆ ಸಾಬರವನೇ ಆಗಬೇಕೇನೆ
ಎಂದು ತಿವಿದು ಕೇಳುತ್ತಾರೆ.”[೪೬]

ಎಂಬ ಧೋರಣೆಗಳಲ್ಲಿ ಮತೀಯ ದ್ವೇಷದ ಕರಾಳ ಚಿತ್ರಣ ನಿಚ್ಚಳವಾಗಿ ಕಾಣಿಸುತ್ತದೆ, ಇನ್ನೂ ಮುಂದುವರಿದು ‘ಮರ್ಯಾದೆ ಹತ್ಯೆ’ಯನ್ನು ನೆನಪಿಸುತ್ತದೆ. ಇಂಥ ಹತ್ಯೆಗಳಿಗೆ ಕಠೋರ ಸಾವುಗಳಿಂದ ಕೊಡುವ ಸಮರ್ಥನೆ ಮತ್ತಷ್ಟು ಗಾಬರಿ ಹುಟ್ಟಿಸುತ್ತದೆ. ‘ಧರ್ಮಕ್ಕಾಗಿ ಕೊಲ್ಲುವುದೂ ಗೌರವವೆಂದರೆ’ ಎಂಬ ಆಶ್ಚರ್ಯಚಕಿತನಾದ ಪ್ರಶ್ನೆ ಮತ್ತೆ ಮತ್ತೆ ನಮ್ಮನ್ನು ಈ ಘೋರ ಸಾವು–ನೋವುಗಳ ಬಗ್ಗೆ ಕಾಡುವಂತೆ ಮಾಡುತ್ತದೆ. ಎಷ್ಟೇ ಆಗಲಿ ‘ನಮ್ಮದು ಮಹಾ ಧಾರ್ಮಿಕ ದೇಶ’ವಲ್ಲವೇ? ಎಂಬ ಕಟುವಾದ ವ್ಯಂಗ್ಯ ಹಲವು ಅರ್ಥಗಳನ್ನು ಸ್ಮರಿಸುತ್ತದೆ. ಹೀಗೆ ‘ಯಾರೋ ಹಚ್ಚಿದ ಬೆಂಕಿಗೆ ಯಾರೋ ಸಾಯುವ’ ಸ್ಥಿತಿಯನ್ನು ಮತೀಯ ಸಂಘರ್ಷಗಳು ಉಂಟುಮಾಡುತ್ತವೆ. ಆದರೂ ಮತ್ತೆ ಮತ್ತೆ ನಿರಂತರ ಇಂಥ ಹಲವು ಕೃತ್ಯಗಳು ನಡೆಯುತ್ತಲೇ ಇರುತ್ತವೆ. ‘ನಾರುವ ಹೆಣಗಳ ನಾತಕ್ಕೆ ಗಿಡುಗಗಳಿಗೂ ಹೇಸಿಗೆ’ಯಾದರೂ ಮನುಷ್ಯನಿಗೆ ಬುದ್ಧಬಂದನೆಲ್ಲ! ‘ಧರ್ಮಕ್ಕಾಗಿ ಜೀವಕೊಡು’ವವರೇ ಹೆಚ್ಚು.

“ಕಾಲಿನ ಕೆಳಗೆ ನಾನಿದುವರೆಗೆ ನಿಂತ
ಹಚ್ಚನೆ ಹಸಿರು ಯಾವತ್ತೋ ಮರು
ಭೂಮಿಯಾಗಿ ಹೋಗಿದೆ ಅಗ್ನಿಪರ್ವ”[೪೭]

"ಕಳೆದ ಒಂದೂವರೆ ದಶಕದ ಕಾಲಮಾನದಲ್ಲಿ ಈ ದೇಶದಲ್ಲಿ ಹಾಗೂ ಇದನ್ನೊಳಗೊಂಡ ಈ ಜಗತ್ತಿನಲ್ಲಿ ಸಂಭವಿಸಿದ ವಿವಿಧ ವಿದ್ಯಮಾನಗಳು ಸೂಕ್ಷ್ಮ ಸಂವೇದನಾಶೀಲವಾದ ಮನಸ್ಸುಗಳನ್ನು ದಿಗ್‌ಭ್ರಮೆಗೊಳಿಸಿವೆ ಮತ್ತು ತಲ್ಲಣಗೊಳಿಸಿವೆ."[೪೮]

"ಇರುವೆ ಬಾಯೊಳಗಿನ
ತುತ್ತು ಕಸಿದ ಮಹಾಪಾಪಿ ಯಾರು?
ಕೂದಲು ಸೀಳುವ ನಾಗರಿಕತೆಗೇನು ಗೊತ್ತು
ಇರುವೆ ಹೃದಯಕ್ಕಾದ ಗಾಯಕ್ಕಾದ ಗಾಯವದು!

ಊರಿಂದೂರಿಗೆ ಇಲ್ಲಿ
ದೇಶಭಕ್ತಿ ಅಥವಾ ದೇಶದ್ರೋಹದ
ಹಸಿಗಾಯವನ್ನು ಹೊತ್ತು ತಿರುಗುವುದು ತಪ್ಪಲಿಲ್ಲ"[೪೯]

ದೇಶಭಕ್ತಿ ಮತ್ತು ದೇಶಪ್ರೇಮದ ಹೆಸರಿನಲ್ಲಿ ಮತೀಯವಾದಿ ಮನಸ್ಸುಗಳು ಕೋಮುವಾದವನ್ನು ಅತಿಯಾಗಿ ಬೆಳೆಸುತ್ತಿವೆ. ಹಾಗೂ ದೇಶದ ಬಗೆಗಿನ ಇರುವ ಅಂಧಾಭಿಮಾನವೇ ಕೋಮುವಾದಕ್ಕೆ ಪ್ರಮುಖ ಕಾರಣವಾಗುತ್ತಿದೆ. ಇಂಥ ಅಂಧಾಭಿಮಾನದಿಂದ ಅಮಾಯಕರು ಬಲಿಯಾಗುತ್ತಿರುವುದೂ ಜೊತೆಗೆ ಅಂಧಾಭಿಮಾನಿಗಳೂ ಬಲಿಯಾಗುವಂತೆ ವ್ಯವಸ್ಥೆ ಅಭಿಮಾನದ ಬಲೆಯನ್ನು ರೂಪಿಸಿರುತ್ತದೆ. ಜನರಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ಈ ಕವಿತೆಯನ್ನು ರಚಿಸಿದಂತಿದೆ.

ಕೋಮುಗಲಭೆಯಿಂದ ಯಾರಿಗೆ ಲಾಭವಾಗುತ್ತದೆ ಎಂಬ ಮೂಲಭೂತ ಪ್ರಶ್ನೆಗೆ ಈ ಕವಿತೆ ಪ್ರತಿಕ್ರಿಯಿಸುವುದು ಹೀಗೆ:

"ಇಲ್ಲಿರುವ ನಾನು
ಒಂದು ಬೆಂಕಿ ಪೆಟ್ಟಿಗೆ
ಒಂದು ಲೀಟರ್ ಸೀಮೆಎಣ್ಣೆ
ಮತ್ತೊಂದು ಲೀಟರ್ ಪೆಟ್ರೋಲ್
ಬಗ್ಗೆ ಚಿಂತಿಸುತ್ತಾ
ಎಲ್ಲಿಗೆ ಹೋಗುತ್ತೇನೆಂದರೆ
ಅಯೋಧ್ಯೆಯ ಇಟ್ಟಿಗೆ ಮಾತಿಗೆ
ಕಲ್ಯಾಣದಲ್ಲಿ ಕೊಲೆ ಬಿದ್ದ ಸಂಗತಿಗೆ
ದಿಲ್ಲಿಯಲ್ಲಿ ಉರುಳಿದ ಜೀವಂತ ತಲೆಗೆ....."[೫೦]

ಮೂಲಭೂತ ಅವಶ್ಯಕತೆಗಳನ್ನೇ ಬದಿಗೊತ್ತಿ 'ಅನಂತ ಭಾಷಣ ಬಿಗಿಯುತ್ತಾ' ಜಾತಿಮತಗಳ ಬಲೆಯಲ್ಲಿ ಸಿಲಕಿ ಸೌಹಾರ್ದತೆಗೆ ಭಂಗ ಉಂಟುಮಾಡುವುದು ನಾಗರಿಕತೆಯೇ ಎಂದು ಪ್ರಶ್ನಿಸುತ್ತಾನೆ.

"ಇಷ್ಟಾದರೂ
ಇಲ್ಲಿರುವ ನಾನು
ಇಂಥಾ ದುಬಾರಿ ಕಾಲದಲ್ಲೂ
ಬೆಂಕಿಪೆಟ್ಟಿಗೆ ಸೀಮೆಎಣ್ಣೆ ಹಿಡಿದು
ಹುಡುಕುತ್ತಿದ್ದೇನೆ
ಇಂಡಿಯಾದ ತುಂಬಾ ಇರುವ
ಆತ್ಮಗಳನ್ನೂ
ಅವುಗಳ ಪಂಚೇಂದ್ರಿಯಗಳನ್ನೂ
ರಂಗೂ ರಂಗಿನ ಕನಸುಗಳನ್ನೂ
ಹಗಲಿನ ಆ ಬೆಳಕನ್ನೂ"[೫೧]

ಹೀಗೆ ನಿರಂತರ ಹುಡುಕುತ್ತಿರುವ ಕವಿ, 'ಕಲ್ಯಾಣದಲ್ಲಿ ಕೊಲೆಬಿದ್ದ ಸಂಗತಿಗೆ' 'ಅಯೋಧ್ಯೆಯ ಇಟ್ಟಿಗೆ ಮಾತಿಗೆ' ಮತ್ತು ಸದಾ ಉರುಳುವ ಜೀವಂತ ತಲೆಗಳಿಗೆ ಬೇಸತ್ತಿದ್ದಾನೆ.

ಭಾರತ ಕಲೆ, ಸಂಸ್ಕೃತಿಗೆ, ಆಧ್ಯಾತ್ಮಿಕತೆಗೆ, ತತ್ವಜ್ಞಾನಕ್ಕೆ ಪ್ರಾಚೀನ ಕಾಲದಿಂದಲೂ ಹೆಸರು ಪಡೆದಿದೆ.. ಸಾಧುಸಂತರನ್ನು ಒಳಗೊಂಡಂತೆ ಸೌಹಾರ್ದತೆ ಮತ್ತು ಮಾನವೀಯ ಮೌಲ್ಯಗಳು ನೆಲೆಸುವಲ್ಲಿ ಮುಖ್ಯವಾದ ಪಾತ್ರವನ್ನ ವಹಿಸಿದ್ದಾರೆ. ದ್ವೇಷಬಿಟ್ಟು ದೇಶ ಕಟ್ಟಬೇಕು ಎನ್ನುವ ಆಶಯನ್ನಿಟ್ಟುಕೊಂಡು ಕೀರ್ತನಕಾರರು, ತತ್ವಪದಕಾರರು, ಸಾಧು-ಸಂತರು ಪ್ರವಚನ ಮಾಡುತ್ತಾ ಹಾಡುಗಳ ಮೂಲಕ ಜಾಗೃತಿಯನ್ನು ಮೂಡಿಸಿದ್ದಾರೆ.

ಬ್ರಿಟಿಷರು ಆಡಳಿತದ ರಾಜಕಾರಣಕ್ಕಾಗಿ ದೇಶದಲ್ಲಿ ಹಿಂದೂ-ಮುಸ್ಲಿಂ ಎನ್ನುವ ಧರ್ಮದ ವಿಷಬೀಜಗಳನ್ನು ಬಿತ್ತಿ ಭಾವೈಕ್ಯತೆಯನ್ನು ಕದಡುವಂದತಹ ಕೆಲಸ ಮಾಡಿದರು ಹಿಂದೂ-ಮುಸ್ಲಿಂ ಭಾವೈಕ್ಯತೆ ಸಾರವನ್ನು ಫಕೀರಸಿದ್ದರಾಮರು ಶರೀಫರು, ಸಿದ್ದಾರೂಢರು ಸಮಾಜದಲ್ಲಿ ದ್ವೇಷವನ್ನು ದೂರಮಾಡಿ ಪ್ರೀತಿಯನ್ನು ಹಂಚುವ ಪ್ರಯತ್ನ ಮಾಡಿದರು.

ಸಮಾಜದಲ್ಲಿನ ಕೊಳಕನ್ನು ಸ್ವಚ್ಛಮಾಡಿ ಮನಸ್ಸಿನಲ್ಲಿ ಪ್ರೀತಿಯನ್ನು ಭಿತ್ತಿ ಜೀವನದಲ್ಲಿ ಹೊಸಬೆಳಕು ಮಾಡಿಸಿ ಜನರ ಮುಖದಲ್ಲಿ ನಗು ಮಾಡಿರಲಿ ಎಂಬ ಆಶಯವನ್ನು ಹೊಂದಿದ ಸಾಧುಸಂತರನ್ನು ಕುರಿತು ಈ ಕವಿತೆ ರಚನೆ ಮಾಡಿದ್ದಾರೆ.

ವಿವಿಧತೆಯಲ್ಲಿ ಏಕತೆಯನ್ನು ಹುಡುಕುವ ಸಂದರ್ಭ ಸೃಷ್ಟಿಯಾಗಿದೆ. ಏಕತೆ ಎನ್ನುವ ಪರಿಕಲ್ಪನೆ ಕೆಲವು ಸಂದರ್ಭದಲ್ಲಿ ಗೊಂದಲವನ್ನು ಸೃಷ್ಟಿಮಾಡುತ್ತದೆ. ಏಕತೆಯೆಂದರೆ ಯಾವ ರೀತಿ ಏಕತೆ ಬೇಕಾಗಿದೆ ಎಂದು ಸ್ಪಷ್ಟಪಡಿಸಿಕೊಳ್ಳಬೇಕು. ಸಂಸ್ಕೃತಿಯಲ್ಲಿ ಏಕತೆ, ಭಾಷೆಯಲ್ಲಿ ಏಕತೆ, ಧರ್ಮದಲ್ಲಿ ಏಕತೆಯೋ, ಎಂಬುದು ಗೊಂದಲಕ್ಕೆ ನೂಕುತ್ತದೆ. ಈಗಾಗಲೇ ಏಕತೆ ಪರಿಕಲ್ಪನೆ ಬಗ್ಗೆ ಚರ್ಚೆಗಳು ನಡೆಯುತ್ತಿವೆ ಏಕತೆ ಸಂಸ್ಕೃತಿ, ಭಾಷೆ, ಧರ್ಮದಲ್ಲಿ ಬೇಕಾಗಿಲ್ಲ.

ವಿವಿಧತೆಯಿಂದ ಕೂಡಿರುವ ದೇಶದಲ್ಲಿ ಬೇಕಾಗಿರುವ ವೈಚಾರಿಕ, ಮಾನವೀಯ ಸೌಹಾರ್ದ ಪ್ರೀತಿಯಿಂದ ಏಕತೆ ಬೇಕಾಗಿದೆ ಎಲ್ಲರೂ ಒಂದೆ ಎನ್ನುವ ಮನೋಭಾವ ಮೂಡಬೇಕಿದೆ.

ಕೋಮುವಾದ ಮತ್ತು ಮೂಲಭೂತವಾದಗಳನ್ನು ತೀಕ್ಷ್ಣವಾಗಿ ಖಂಡಿಸುವ ಈ ಕವಿತೆ ಕೋಮು ಸೌಹಾರ್ದದ ಹಲವು ಬಗೆಗಳನ್ನು ಹುಡುಕಾಟ ಮಾಡುತ್ತದೆ. ಅಷ್ಟೇ ಅಲ್ಲ, ಕೋಮುವಾದ ಬಿತ್ತುತ್ತಿರುವ ಪರಕೀಯ ಭಾವಕ್ಕೆ ದಿಟ್ಟ ಉತ್ತರವನ್ನು ಈ ಕವಿತೆ ನೀಡುತ್ತಿದೆ.

"ನಾನು ಹಜ್ ಯಾತೆ ಕೈಗೊಂಡರೂ
ಮದೀನಾದ ನೆಲದಲ್ಲಿ ಪ್ರಾರ್ಥಿಸಿದರೂ
ಭಾರತದ ಏಳ್ಗೆಗಾಗಿಯೇ ಪ್ರಾರ್ಥಿಸುತ್ತೇನೆ
ನನ್ನ ದೇಶದ ಸುಖ ಸಮೃದ್ಧಿ ಬಯಸುತ್ತೇನೆ
ನನಗೆ ಆಡಲು ಮಡಿಲು
ನೀರು, ಆಹಾರ, ಗಾಳಿ ನೀಡಿದ
ಮಾತೃಭೂಮಿಯ ಶ್ರೇಯಸ್ಸು ಬಯಸುವೆ
ನನ್ನ ದೇಹದ ಹನಿ ಹನಿ ರಕ್ತದಲ್ಲೂ
ಭಾರತದ ಹೆಸರೇ ಪ್ರತಿಧ್ವನಿಸುತ್ತದೆ
ಆದರೂ ಅವರೇಕೆ ಹೇಳುತ್ತಿದ್ದಾರೆ
ನೀನು ಗಡಿಯಾಚೆಯವಳೆಂದು?"[೫೨]

ಭಾರತದಂತಹ ಬಹು ಸಂಸ್ಕೃತಿಯ ದೇಶದಲ್ಲಿ ಇತರರ ದೃಷ್ಟಿಗಳಲ್ಲಿ ಗುರುತಿಸಲ್ಪಡುವ 'ಪ್ರತ್ಯೇಕತಾವಾದಿ' ಧೋರಣೆಯನ್ನು ಕವಯಿತ್ರಿ ಪ್ರಶ್ನಿಸುತ್ತಿದ್ದಾರೆ. ಆದರೆ ಈ ಕವಿತೆ ಹೇಳಿಕೆಯ ರೂಪದಲ್ಲಿ ರಚನೆಯಾಗಿರುವುದರಿಂದ ತೆಳುವಾದ ನೇಯ್ಗೆಯಾಗಿ ಕಾಣಿಸುತ್ತದೆ.

ಕೋಮುಗಲಭೆಯ ಆತಂಕದ ಸ್ಥಿತಿಯನ್ನು ಈ ಕವಿತೆ ಅಭಿವ್ಯಕ್ತಿಪಡಿಸುವ ಬಗೆ ಅನನ್ಯವಾಗಿದೆ.

"ಎಲ್ಲಿಂದಲೋ ಯಾವುದೋ ಶವದ ವಾಸನೆ, ಅಕೋ,
ಯಾವ ಕೋಮಿಗೆ ಸೇರಿರಬಹುದು ಅದು?
ಎಲ್ಲ ಒಯ್ಯುವ ಗಾಳಿ ಯಾವ ಕೋಮಿನದೋ!"[೫೩]

ಇಲ್ಲಿನ ಪ್ರತಿಯೊಂದು ಸಂಗತಿ, ವಿದ್ಯಮಾನಗಳಿಗೂ ಕೋಮುದ್ವೇಷದ ಬಣ್ಣ ತುಂಬಿರುವಾಗ ಜನರಿಗೆ ವಾಸ್ತವದ ಅರಿವು ಹೊಳೆಯುತ್ತಿಲ್ಲ; ಅಥವಾ ಇಡೀ ವ್ಯವಸ್ಥೆಯೇ ಕೋಮುಜ್ವಾಲೆಯಲ್ಲಿ ಹೊತ್ತಿ ಉರಿಯುತ್ತಿದೆ. ಕೊನೆಗೆ ಈ ಕೋಮುದ್ವೇಷದ ಆತ್ಯಂತಿಕತೆ ಮನುಷನನ್ನು ಎಲ್ಲಿಗೆ ಕೊಂಡೊಯ್ಯುತ್ತದೆ ಎಂಬ ಪ್ರಶ್ನೆಯನ್ನು ಪ್ರತಿಯೊಬ್ಬ ಮನುಷ್ಯನೂ ಕೇಳಿಕೊಳ್ಳಬೇಕಾಗಿದೆ. ಇಲ್ಲವಾದರೆ ಒಂದು ಕೋಮಿನವರು ಮತ್ತೊಂದು ಕೋಮಿನ ವಿರುದ್ಧ ಯುದ್ಧ ಸಾರುತ್ತಲೇ ಹೋದರೆ ಕೊನೆಗೆ ಇಡೀ ಜಗತ್ತು ಸರ್ವನಾಶವಾಗದಿರದು ಎಂಬ ಆತಂಕ, ಎಚ್ಚರಿಕೆ ಎರಡೂ ಇಲ್ಲಿದೆ.

"ಕಟ್ಟಬೇಕೆಂದಿದ್ದೇನೆ
ಗುಡಿ–ಗೋಪುರ ಮಂದಿರ ಮಸೀದಿ
ಚರ್ಚುಗಳನ್ನೆಲ್ಲ ಒಡೆದು
ಕಡೆದ ಪ್ರೀತಿಯನ್ನೆಷ್ಟೋ ತೆಗೆದು
ನೂರಾರು ಮಹಲು

ಯಾರೂ ತರಬೇಡಿ
ಮಚ್ಚು ಕೊಡಲಿಗಳ
ನೆತ್ತರಿನ ನೆರಳುಗಳ
ಬಿತ್ತ ಬನ್ನಿ ಸೌಹಾರ್ದದ ಬೀಜಗಳ"೫೪

ದೇವರು–ಧರ್ಮದ ಹೆಸರಿನಲ್ಲಿ ತುಂಬಾ ಹಣವನ್ನು ವಿಯೋಗ ಮಾಡುತ್ತಿದ್ದಾರೆ ಜನರ ಸುಲಿಗೆ ಮಾಡುತ್ತಿದ್ದಾರೆ. ಧರ್ಮ ಎಂಬ ಭಕ್ತಿಯ ಲೋಕವನ್ನು ಸೃಷ್ಟಿಮಾಡಿ ಭಕ್ತರಲ್ಲಿ ಭಕ್ತರು ಜೊತೆಗೆ ಭಯವನ್ನು ಮಾಡಿಸಿ ಮನಸ್ಸನ್ನು ಅದಕ್ಕೆ ಕವಿಗಳ ಹೇಳುತ್ತಿದ್ದಾರೆ. ಗುಡಿಗೋಪುರ ಮಂದಿರ ಮಸೀದಿ ಚರ್ಚುಗಳನ್ನು ಕಟ್ಟಿದ್ದಾರೆ. ಇಲ್ಲಿ ಭಕ್ತಿಗಿಂತ ಭಯದ ವಾತವರಣ ಸೃಷ್ಟಿಯಾಗಿದೆ. ಇವುಗಳ ಮೇಲಿನ ಅತಿಯಾದ ಪ್ರೀತಿಯಿಂದ ಮನಸ್ಸಿನಲ್ಲಿ ನೆಮ್ಮದಿಯನ್ನು ಕದಡುವ ನೆಲೆಯನ್ನು ಮಾಡುತ್ತಿವೆ. ಪ್ರೀತಿ, ನೆಮ್ಮದಿಯನ್ನು ಬಿತ್ತುತ್ತಿಲ್ಲ, ಇವುಗಳಿಂದ ಕೋಮುಗಲಭೆಗಳು ಹೆಚ್ಚಾಗಿವೆ. ಅದಕ್ಕಾಗಿ ಗುಡಿಗೋಪುರ ಮಸೀದಿ ಚರ್ಚುಗಳನೆಲ್ಲ ಒಡೆದು ಪ್ರೀತಿಯ ಕಟ್ಟಡ ಕಟ್ಟಿ ಎಂಬ ಪ್ರತಿಕ್ರಿಯಾತ್ಮಕ ಸಾಲುಗಳು ಮಾನವೀಯ ಪ್ರೀತಿಯನ್ನು ಬಿತ್ತಿ, ಸಮಸಮಾಜದ ಕಡೆಗೆ ಕರೆಕೊಡುತ್ತವೆ. ದ್ವೇಷಕ್ಕೆ ದ್ವೇಷವೇ ಉತ್ತರವಲ್ಲ ಎಂಬ ಜೀವಪರ ಸಂದೇಶವನ್ನು ಈ ಕವಿತೆ ಉದ್ದೇಶಿಸುತ್ತದೆ.

**೪.೨.೨. ಸೌಹಾರ್ದತೆಯ ನೆಲೆ**

ಮೂಲಭೂತವಾದಿ ಚಿಂತನೆಗಳು, ಧಾರ್ಮಿಕ ಕೇಂದ್ರಗಳು, ಜನರ ಮನಸ್ಸಿನಲ್ಲಿ ನೆಮ್ಮದಿಯನ್ನು ಕದಡುವಂತಹ ಕೆಲಸಗಳನ್ನು ವ್ಯವಸ್ಥಿತವಾಗಿ ಮತ್ತು ನಿರಂತರವಾಗಿ ಮಾಡುತ್ತಿರುತ್ತವೆ. ಸೌಹಾರ್ದತೆಯಿಂದ ಬಾಳು ಎಂಬ ಆಶಯಗಳುಳ್ಳ ಅನೇಕ ಕವಿತೆಗಳನ್ನು ಹಲವರು ರಚಿಸಿದ್ದಾರೆ. ಸೌಹಾರ್ದತೆಯ ವಿನ್ಯಾಸಗಳನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಸಮಕಾಲೀನ ಕಾವ್ಯಗಳ ಮೂಲಕ ರಂಜಾನ್‌ದರ್ಗಾ, ಎಂ.ಡಿ. ಒಕ್ಕುಂದ, ವಿನಯಾ, ಕೆ.ಶರೀಫಾ, ನಾಗರಾಜ ಹಂಡೇದ, ಪೀರ್‌ಭಾಷಾ ಮುಂತಾದ ಕವಿಗಳು ದೇಶದಲ್ಲಿ ಸೌಹಾರ್ದತೆ ನೆಲೆಸುವ ಪ್ರಯತ್ನವನ್ನು ತಮ್ಮ ಕವಿತೆಗಳ ಮೂಲಕ ಮಾಡುತ್ತಿದ್ದಾರೆ.

ಪ್ರಸ್ತುತ ಸಂದರ್ಭದಲ್ಲಿ ಕೋಮುವಾದದ ಸುಳಿವುಗಳು ಎಲ್ಲೆಂದರಲ್ಲಿ ಕಾಣುತ್ತಿವೆ. ಹೃದಯ ಮತ್ತು ನಮ್ಮ ಮನಸ್ಸುಗಳನ್ನು ಎಲ್ಲೆಡೆಯೂ ಕಲಕುವ, ಛಿದ್ರಗೊಳಿಸುವ ಮತ್ತು ವಿರೂಪಗೊಳಿಸುವ

ಕಾರ್ಯಗಳು ಒಂದರ ಮೇಲೊಂದರಂತೆ ಹೆಚ್ಚುತ್ತಾ ಸಾಗಿವೆ. ಪ್ರತಿನಿತ್ಯ ಹಿಂಸೆ ಮತ್ತು ಕ್ರೌರ್ಯಗಳನ್ನು ಸುದ್ದಿವಾಹಿನಿಗಳಲ್ಲಿ ನೋಡುತ್ತಿದ್ದೇವೆ.

ಇಂತಹ ಕ್ರೌರ್ಯಗಳ ವಿರುದ್ಧ ಪ್ರತಿಭಟನೆ ಮಾಡುವ ಮನಸ್ಸುಗಳು ಇಲ್ಲ. ಯಾವುದೇ ಅನ್ಯಾಯದ ವಿರುದ್ಧ ದನಿಯೆತ್ತಲು ಬಹುತೇಕರು ಮುಂದೆ ಬರುವುದಿಲ್ಲ. ಮತೀಯ ಸಂಘರ್ಷ ಇಂತಹ ಸಂದರ್ಭ ಮತ್ತು ಬಿಕ್ಕಟ್ಟುಗಳನ್ನು ಸೃಷ್ಟಿ ಮಾಡುತ್ತದೆ. ಕೋಮುವಾದ ಭಯೋತ್ಪಾದನೆ ಮುಂತಾದ ಘಟನೆಗಳಿಗೆ ಬಲಿಯಾಗುವವರು ಅಮಾಯಕರು, ಅಸಹಾಯಕರು. ಅದರಲ್ಲೂ ಮುಖ್ಯವಾಗಿ ದಲಿತರು ಮತ್ತು ಶೂದ್ರರೇ ಆಗಿದ್ದಾರೆ. ಎಷ್ಟೋ ಜನ ಅಮಯಾಕರು ತಾವು ಮಾಡದ ಅಪರಾಧಕ್ಕೆ ಜೈಲುಗಳಲಿ ಶಿಕ್ಷೆ ಅನುಭವಿಸುತ್ತಿದ್ದಾರೆ. ಕಾವ್ಯ ಸಾಮಾನ್ಯವಾಗಿ ಒಳಜಗತ್ತಿನ ಅಭಿವ್ಯಕ್ತಿ. ಕಾವ್ಯ, ಹಾಡುಗಳ ಮೂಲಕ ಜನರಲ್ಲಿ ಜಾಗೃತಿ ಮತ್ತು ವೈಚಾರಿಕ ಪ್ರಜ್ಞೆಯನ್ನು ಮೂಡಿಸಬಹುದು. ಪ್ರಸ್ತುತ ಸಂದರ್ಭದ ತಲ್ಲಣಗಳನ್ನು ಜನರಿಗೆ ಅರ್ಥಮಾಡಿಸುವಂತ, ಮಾನವೀಯ ನೆಲೆಗಳನ್ನು ತಿಳಿಸುವಂತ ಹಾಗೂ ಸಮಾಜದಲ್ಲಿ ಸೌಹಾರ್ದತೆ ನೆಲೆಸುವಂತೆ ಮಾಡುವ ಚಿತ್ರಣಗಳು ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿವೆ.

"ಅವರು ಬೆಂಕಿ ಹಚ್ಚುತ್ತಿದ್ದಾರೆ!
ಬನ್ನಿ ನಾವು ದೀಪ ಹಚ್ಚೋಣ
ಎಲ್ಲ ಮಹಾತ್ಮರು
ಹಚ್ಚಿಟ್ಟ ಹಣತೆಗಳು
ಸಾಲಾಗಿ ಡಬ್ಬು ಬಿದ್ದಿವೆ.

ಮಂದಿರ ಮಸೀದಿ ಚರ್ಚುಗಳ ಆವರಣದಲ್ಲಿ
ಪ್ರೀತಿಯ ಬೀಜ ಬಿತ್ತಬಹುದಾದರೆ
ಧರ್ಮದ ವೇದಿಕೆಯಿಂದ
ಮನುಷ್ಯತ್ವದ ಹಾಡು ಹಾಡಬಹುದಾದರೆ
ದೇವರುಗಳಿಗೆ ಕರುಣೆ ಪ್ರೇಮದ ಪಾಠ

ಹೇಳಿಕೊಡಬಹುದಾದರೆ
ಅಲ್ಲಿಯೇ ಇರಿ
ಇಲ್ಲವಾದರೆ
ಮನಸ್ಸಿನ ತುಂಬ ಹೂವುಗಳ ಬದಲು
ಬಂದೂಕು ಅರಳುತ್ತದೆ
ಕನಸ್ಸಿನ ತುಂಬ ಪ್ರೇಮದ ಬದಲು
ಮದ್ದುಗುಂಡು ಕುಣಿಯುತ್ತವೆ

ಬೆರಳ ಕುಡಿ ದೀಪಗಳು
ಬೆಂಕಿ ಹಚ್ಚ ತೊಡಗುತ್ತವೆ

ಬಂದು ಬಿಡಿ
ಜಗದ ದೀಪ ಡಬ್ಬು ಬೀಳುವ ಮೊದಲೆ
ನಾವು ದಈಪ ಹಚ್ಚೋಣ
ಅವರು ಬೆಂಕಿ ಹಚ್ಚುತ್ತಿದ್ದಾರೆ."[೫೫]

ಬೆಂಕಿ ಮೂಲದಲ್ಲಿ ಒಂದೆ ಆಗಿರುವಂತದ್ದು; ಅದನ್ನು ಯಾವ ಸ್ವರೂಪದಲ್ಲಿ ಬಳಸಿಕೊಳ್ಳುತ್ತೇವೆ ಎಂಬುದು ಬಹಳ ಮುಖ್ಯ. ಬೆಂಕಿಯಿಂದ ಜಗತ್ತನ್ನು ಧಗಧಗಿಸುವಂತೆ ಸುಟ್ಟು ಭಸ್ಮವಾಗಿಸಬಹುದು. ಅಂಧಕಾರದಿಂದ ತುಂಬಿದ ಜಗತ್ತಿಗೆ ಅದೇ ಬೆಂಕಿಯಿಂದ ಬೆಳಕು ನೀಡಬಹುದು. ಯಾವುದೇ ಚಿಂತನೆಗಳನ್ನಾಗಲಿ, ಧರ್ಮವನ್ನಾಗಲಿ, ಜನರನ್ನಾಗಲಿ ನಾವು ಬಳಸಿಕೊಳ್ಳುವ ಸ್ವರೂಪದಲ್ಲಿ ನಿಂತಿರುತ್ತದೆ. ಎಲ್ಲ ಧರ್ಮವು ಸಾರುವ ಸಾರ ಒಂದೇ. ಯಾವ ಧರ್ಮದ ಮೂಲಕ ವಾಗಿಯಾದರೂ ನಾವು ಮುಕ್ತಿಯನ್ನು ಪಡೆಯಬಹುದು ಎಂದು ರಾಮಕೃಷ್ಣ ಪರಮಹಂಸರು ಹೇಳಿದ್ದಾರೆ. ಯಾವುದಾದರೂ ಒಂದು ಸ್ಥಳಕ್ಕೆ ತಲುಪಬೇಕಾದರೆ ನಾನಾರೀತಿಯ ದಾರಿಗಳಿರುತ್ತವೆ. ಬೇರೆ ಬೇರೆ ದಿಕ್ಕುಗಳಿಂದ ಬಂದರು ಕೊನೆಗೊಳ್ಳುವುದು ಒಂದೆ ಸ್ಥಳಕ್ಕೆ ಎಂದು ರಾಮಕೃಷ್ಣ ಪರಮಹಂಸರು ಹೇಳಿದ್ದಾರೆ.

ಯಾವುದು ಮೇಲಲ್ಲ, ಯಾವುದೂ ಕೀಳಲ್ಲ, ಯಾರೂ ಮೇಲಲ್ಲ ಯಾರೂ ಕೀಳಲ್ಲ. ಎಲ್ಲವೂ, ಎಲ್ಲರೂ ಒಂದೆ. ನಾವು ಸಂಕೇತಗಳ ಮೂಲಕ ಜನರನ್ನು ಧರ್ಮವನ್ನು ಗುರುತಿಸುತ್ತಿದ್ದೇವೆ. ಹಸಿರು, ಕೇಸರಿ, ಬಿಳಿ ಈ ಬಣ್ಣಗಳ ಮೂಲಕ ಧರ್ಮಗಳನ್ನು ಗುರುತಿಸುತ್ತಿದ್ದೇವೆ. ಹಸಿರು–ಮುಸ್ಲಿಂ, ಕೇಸರಿ–ಹಿಂದೂ, ಬಿಳಿ–ಕ್ರಿಶ್ಚಿಯನ್ ಈ ಸಂಕೇತಗಳ ಮೂಲಕ ಧರ್ಮವನ್ನು ಗುರುತಿಸುತ್ತಿದ್ದೇವೆ. ತಲೆಗೆ ಟೋಪಿ ಹಾಕಿದರೆ ಒಂದು ಧರ್ಮ, ರುಮಾಲು ಸುತ್ತಿದರೆ ಒಂದು ಧರ್ಮ, ನಿಲುವಂಗಿ ಧರಿಸಿದರೆ ಮತ್ತೊಂದು ಧರ್ಮವೆಂದು ಸಂಕೇತಗಳನ್ನು ಧರ್ಮಕ್ಕೆ ಕಟ್ಟಿಹಾಕುತ್ತಿದ್ದೇವೆ.

ಆಯಾ ಧರ್ಮದವರು ಈ ಸಂಕೇತಗಳನ್ನು ಮೀರುವಂತಿಲ್ಲ. ಧರ್ಮದ ಆಶಯಗಳು ಇವತ್ತು ಮುಖ್ಯವಾಗುತ್ತಿಲ್ಲ. ಧರ್ಮದ ಸಂಕೇತಗಳು ಮುಖ್ಯವಾಗುತ್ತಿವೆ. ದೇಹದ ಮೇಲೆ ಆ ಸಂಕೇತಗಳು ಕಾಣಿಸದೆ ಇದ್ದರೆ ಆ ಧರ್ಮದ ಮೂಲಭೂತವಾದಿಗಳು ದಂಡ ವಿಧಿಸುವ ಮತ್ತು ದಂಡಿಸುವಂತಹ ಘಟನೆಗಳು ನಮ್ಮ ಮುಂದೆ ನಡೆಯುತ್ತಿವೆ.

ದೇಹದ ಮೇಲಿರುವ ಸಂಕೇತಗಳನ್ನು ನೋಡಿ ಇವರು ಇದೇ ಧರ್ಮದವರೆಂದು ಗುರುತಿಸುತ್ತಿದ್ದೇವೆ. ಆದರೆ ದೇಹದ ಒಳಗಿನ ರಕ್ತ, ಮೂಳೆ ನೋಡಿ ಗುರುತಿಸಬಹುದೆ?

ಸಮಾಜದಲ್ಲಿ ಕ್ರೌರ್ಯವನ್ನು ಬಿತ್ತಿ ಪೋಷಿಸುವ ಮೂಲಭೂತವಾದಿಗಳು ಪ್ರಸ್ತುತ ದಿನಮಾನಗಳಲ್ಲಿ ಹೆಚ್ಚುತ್ತಿದ್ದಾರೆ. ಚಿಂತನೆಗಳು ಜಗತ್ತನ್ನು ಆಳುತ್ತಿವೆ. ಸಮಾಜದಲ್ಲಿ ಸೌಹಾರ್ದತೆಯನ್ನು ಕಾಪಾಡಲು ಅನೇಕ ಮಹಾತ್ಮರು ಶ್ರಮಿಸಿದ್ದಾರೆ. ಅವರ ಚಿಂತನೆ ಆಲೋಚನೆಗಳು ಇಂದು ಪ್ರಸ್ತುತವಾಗಿವೆ. ಮಂದಿರ, ಮಸೀದಿ, ಚರ್ಚುಗಳ ಆವರಣದಲ್ಲಿ ಪ್ರೀತಿಯ ಬೀಜವನ್ನು ಬಿತ್ತಬೇಕಾಗಿದೆ. ಮಾನವೀಯತೆಯ ಮೌಲ್ಯಗಳನ್ನು ಜನರಲ್ಲಿ ಮೂಡಿಸಿ ಸೌಹಾರ್ದತೆಯನ್ನು ಕಾಪಾಡಬೇಕು. ಜನರ ಮನಸ್ಸನ್ನು ಕದಡುವ ಸಮಾಜದಲ್ಲಿ ಕ್ರೌರ್ಯವನ್ನು ಸೃಷ್ಟಿಸುವಂತ ಮನಸ್ಸುಗಳನ್ನು ಬದಲಿಸಬೇಕು. ಮನುಷ್ಯತ್ವ, ಮಾನವೀಯತೆ, ಕರುಣೆ, ಪ್ರೇಮದ ಪಾಠವನ್ನು ಜಗತ್ತಿಗೆ ಸಾರೋಣ. ಇಲ್ಲದಿದ್ದರೆ ಮನಸ್ಸಿನ ತುಂಬಾ ಹೂಗಳ ಬದಲು ಬಂದೂಕು, ಮದ್ದುಗುಂಡುಗಳು ಸಿಡಿಯುತ್ತವೆ. ಅದಕ್ಕೂ ಮೊದಲೆ ಪ್ರೇಮ, ಪ್ರೀತಿ, ಮಾನವೀಯತೆಯ ಮೌಲ್ಯಗಳನ್ನು ಬಿತ್ತಿ ದೀಪವನ್ನು ಹಚ್ಚೋಣ ಎಂದು ಕವಿ ಕರೆನೀಡುತ್ತಿದ್ದಾರೆ.

ಎಲ್ಲ ದ್ವೇಷದ ಭಾವನೆಗಳನ್ನು ಬೆಂಕಿಯಿಂದ ಸುಟ್ಟುಹಾಕಿ ಅದೇ ಬೆಂಕಿಯಿಂದ ಲಕ್ಷಾಂತರ ದೀಪಗಳನ್ನು ಹಚ್ಚುವ ಅವಶ್ಯಕತೆ ಇದೆ. ಯಾವ ಜಾತಿಯಾಗಲಿ, ಯಾವ ಧರ್ಮವಾಗಲಿ, ಯಾವ ದೇಹದ ಸಂಕೇತಗಳನ್ನಾದರೂ ಬಳಸಲಿ ಎಲ್ಲರೂ ಸೌಹಾರ್ದತೆಯಿಂದ ಬದುಕುವ ಪಾಠ ಕಲಿಯಬೇಕಾಗಿದೆ. ಪ್ರೀತಿಯಿಂದ ಜಗತ್ತನ್ನು ಗೆಲ್ಲಬಹುದು. ದ್ವೇಷ ಅಳಿಸಿ ಪ್ರೀತಿ ಹಂಚಿ ಎನ್ನುವ ಘೋಷಣೆಯನ್ನು ಕೂಗಬೇಕು ಎನ್ನುವ ಆಶಯವನ್ನು ಕವಿ ಹೊಂದಿದ್ದಾರೆ.

ಭಾಷೆ, ಧರ್ಮ, ಗಡಿ, ಸಂಸ್ಕೃತಿ ಬೇರೆ ಬೇರೆ ಇರಬಹುದು. ಗಾಳಿ, ನೀರು, ಬೆಳಕು, ಬೆಂಕಿ ನಾವು ಜೀವಿಸುತ್ತಿರುವ ನೆಲ ಎಲ್ಲರಿಗೂ ಒಂದೇ ಎಂದು ಕವಿ ಯಾಕೆ ಹೇಳಿದ್ದಾರೆ ಅಂದರೆ, ಸಮಾಜದಲ್ಲಿ ವಿಷವರ್ತುಲ ಸೃಷ್ಟಿಯಾಗಿದೆ. ಕೋಮುಸಂಘರ್ಷಗಳು ಹೆಚ್ಚಾಗಿವೆ. ತರತಮದ ಭಾವನೆಗಳು ಜನರಲ್ಲಿ ಮೂಡುತ್ತಿವೆ. ಅಸಮಾನತೆ, ದ್ವೇಷ, ಸಂಘರ್ಷಗಳು ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಕವಿ ಸಮಕಾಲೀನ ಬಿಕ್ಕಟ್ಟುಗಳನ್ನು ಕಾವ್ಯಗಳ ಮೂಲಕ ಪ್ರತಿಕ್ರಿಯಿಸುತ್ತಿರುತ್ತಾನೆ.

"ಒಂದೇ ಒಂದೇ ಒಂದೇ
ಭಾರತಿಯರಲ್ಲದೆ
ಒಂದೇ ತೋಟದಿ ಅರಳಿನಿಂತ
ಹೂಗಳ ಕಂಪೊಂದೇ
ಗಾಳಿ ನೀರು ಬೆಳಕು ಬೆಂಕಿ
ನಿಂತ ನೆಲವೊಂದೇ

ಭಾಷೆ ಬಣ್ಣ ನೂರಾದರೇನು
ಮಾನವ ಕುಲವೊಂದೇ

ಹಿಂದು ಮುಸ್ಲಿಂ ಕ್ರೈಸ್ತ ಸಿಖ್
ಬದ್ಧ ಜೈನರೊಂದೇ
ಈಶ್ವರ ಅಲ್ಲಾ ಏಸು ನಾನಕ್
ಮಹಾವೀರ ಬೌದ್ಧರೊಂದೇ
ಮಸೀದಿ ಮಂದಿರ ಗುಡಿಚರ್ಚು
ಸ್ತೂಪವೊಂದೇ"[೫೬]

ಭಾಷೆ, ರಾಜ್ಯ, ಬಣ್ಣಧರ್ಮ, ದೇಶಗಳು, ದೇವರುಗಳು ಬೇರೆ ಬೇರೆಯಾಗಿದ್ದಾವೆ. ಆದರೆ ಭಾಷೆಯ ಅರ್ಥ ಒಂದೇ. ಧರ್ಮದ ಆಶಯ ಒಂದೇ. ಎಲ್ಲರ ಮನಸ್ಸುಗಳು ಒಂದೇ ಎಂದು ಕವಿ ಹೇಳುತ್ತಿದ್ದಾರೆ. ವಿವಿಧತೆಯಲ್ಲಿ ಏಕತೆಯಿದೆ. ಬಹುಸಂಸ್ಕೃತಿ ನಾಡಾಗಿದ್ದರೂ ಎಲ್ಲರಿಗೂ ನ್ಯಾಯ, ನೀತಿ, ಜೀವನ ಒಂದೇ ಆಗಿದೆ. ಯಾಕೆ ಕವಿ ಪದೇ ಪದೇ ಒಂದೇ ಒಂದೇ ಎಂದು ಒತ್ತಿ ಹೇಳುತ್ತಿದ್ದಾರೆ. ಸಮಾಜದ ಪಿಡುಗುಗಳಿಂದ ಮೂಲಭೂತವಾದಿತನ, ಧರ್ಮಗಳ ಬಿಕ್ಕಟ್ಟು, ದೇವರು, ಧರ್ಮ ಎಂದು ಕೋಮುಸಂಘರ್ಷಗಳು ನಡೆಯುತ್ತಿವೆ. ಸಮಾಜದಲ್ಲಿ ಶಾಂತಿಯನ್ನು ಕಾಪಾಡಲು, ಪ್ರೀತಿಯನ್ನು ನೆಲೆಸಲು, ಪ್ರೇಮದ ಹೂವುಗಳನ್ನು ಅರಳಿಸಲು ಕವಿ ನಾವೆಲ್ಲರೂ ಒಂದೇ ಎಂದು ಒತ್ತಿ ಹೇಳುತ್ತಿದ್ದಾರೆ.

ಹೂಗಳು ಬೀರುವ ವಾಸನೆ, ಪ್ರಕೃತಿಯಲ್ಲಿರುವ ಪಂಚಭೂತಗಳು ಎಲ್ಲಾ ಪ್ರಾಣಿ ಪಕ್ಷಿಗಳಿಗೆ, ಮನುಷ್ಯರಿಗೆ ತಮ್ಮನ್ನು ಸಮನಾಗಿ ನೀಡುತ್ತವೆ. ಬೇಧಭಾವ ತೋರದೆ ಪ್ರಕೃತಿ ಒಂದೇ ಎಂದು ಹೇಳುತ್ತಿದೆ. ಒಬ್ಬರಿಗೆ ಒಂದೊಂದು ದೇವರು, ಧರ್ಮ, ಭಾಷೆ, ಊರುಗಳಿರಬಹುದು ಎಲ್ಲರೂ ನಿಂತಿರುವುದು ಒಂದೇ ನೆಲದ ಮೇಲೆ. ಸಾಧು, ಸಂತರು, ಶರಣರು ದಾಸರು ಜಗತ್ತಿಗೆ ಸಾರಿದತತ್ವ, ಆಶಯಗಳು ಒಂದೇ. ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಎಂಬ ಆಶಯದಿಂದ ಜಗತ್ತಿನಲ್ಲಿ ಶಾಂತಿ ನೆಲೆಸಬೇಕಿದೆ ಎಂದು ಕವಿ ಈ ಕವಿತೆಯ ಮೂಲಕ ಆಶಯವನ್ನು ವ್ಯಕ್ತಪಡಿಸುತ್ತಿದ್ದಾನೆ.

ಸಮಾಜದಲ್ಲಿ ಅಸಮಾನತೆ, ತರತಮದ ಭಾವನೆಗಳು, ಜಾತಿ, ಮತ, ಪಂಥಗಳಿಂದ ನಡೆಯುವ ಘಟನೆಗಳು ಜನರ ಮೇಲೆ, ಮಕ್ಕಳ ಮೇಲೆ ಹಾಗೂ ಮುಗ್ಧ ಮನಸ್ಸುಗಳ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರುತ್ತವೆಯೋ ಎಂಬ ಆತಂಕ ಕವಿಯದು. ಆದ್ದರಿಂದ ಸೌಹಾರ್ದತೆಯ ಸಮಾಜವನ್ನು ಕಾಣುವ ಹಂಬಲದಿಂದ ಈ ಕವಿತೆಯಲ್ಲಿದೆ ರಚಿಸಿದ್ದಾನೆ.

"ತಾಯಿಗರ್ಭದಿ ಜೀವ ತಳೆವಾಗ
ಎನಗೆ ಗೊತ್ತಿರಲಿಲ್ಲ ಹೊರಗೆ
ಎಷ್ಟೆಲ್ಲ ಜಾತಿ ಮತ ಪಂಥಗಳಿವೆಯೆಂದು
ಅವುಗಳ ಹೆಸರಲಿ ಏನೆಲ್ಲಾ ಆಗಬಹುದೆಂದು
ತ್ರಿಶೂಲಗಳು ಖಡ್ಗಮೃಗಗಳು ಶಿಲುಬೆಗಳು

ಅಸಂಖ್ಯೆ ಸಂಖ್ಯೆಯಲಿ ರಾಜ್ಯವಾಳುತ್ತಿವೆಯೆಂದು
ತಾಯಿ ಹಾಲುಣಿಸುವಾಗ

ನನಗೆ ತಿಳಿದಿರಲಿಲ್ಲ ಅವಳ್ಯಾವ ಕುಲದವಳೆಂದು
ಲಾಲಿ ಹಾಡಿದವಳ ಧ್ವನಿಗೆ ಯಾವ ಧರ್ಮದ ಸ್ವರವು?
ಬಾಯಿ ಬರುವಾಗೆ ನನಗೆ ಭಾಷೆಯ ಮೂಲ ತಿಳಿದಿರಲಿಲ್ಲ
ಬಟ್ಟೆತೊಡುವಾಗ ಅವುಗಳ ಬಣ್ಣ ಸೊಬಗಲ್ಲದೆ
ಇನ್ಯಾವ ಸವಿಯು ಸವಿದಿರಲಿಲ್ಲ"[೫೭]

ಮಗು ಹುಟ್ಟಿದಾಗ ವಿಶ್ವಮಾನವ, ಬೆಳೆಯುತ್ತ ಅಲ್ಪಮಾನವನಾಗುತ್ತಾನೆ. ಮಗುವಿಗೆ ಹೆಸರಿಟ್ಟು ನಂತರಜಾತಿ, ಧರ್ಮ ಎಂಬ ಕಟ್ಟುಪಾಡುಗಳನ್ನು ಹೇರುತ್ತೇವೆ. ಕುಲ, ಗೋತ್ರ, ಜಾತಿ ಎಂದು ನೂರೆಂಟು ಕಟ್ಟುಪಾಡುಗಳನ್ನು ಹಾಕಿ ಮಗುವನ್ನು ಅಲ್ಪಮಾನವನನ್ನಾಗಿ ಮಾಡುತ್ತೇವೆ. ಹುಟ್ಟಿದಾಗ ಯಾವಜಾತಿ, ಧರ್ಮ ಇರುವುದಿಲ್ಲ ಸತ್ತಾಗ ಸಹ ಯಾವ ಯಾವುದೇ ಜಾತಿ, ಧರ್ಮ ನಮ್ಮ ಹಿಂದೆ ಬರುವುದಿಲ್ಲ. ಬದುಕಿದ್ದಾಗ ಮಾತ್ರ ಇವೆಲ್ಲ ಏಕೆ ಎಂಬ ಪ್ರಶ್ನೆಯನ್ನು ಕವಿ ಎತ್ತುತ್ತಾರೆ.

ಮಗು ಕಣ್ಣು ಬಿಡುವ ಮೊದಲು ಅದಕ್ಕೆ ಯಾವ ಜಾತಿ, ಧರ್ಮ, ಬಟ್ಟೆ, ಭಾಷೆ, ಊರು, ದೇವರು ಯಾವುದು ಕೂಡ ವಿಶೇಷವಾಗಿ ಕಾಣುವುದಿಲ್ಲ. ಎಲ್ಲವೂ ಒಂದೇ ಆಗಿರುತ್ತದೆ. ತಾಯಿಯಂತೆ ಸಮಾನತೆಯಿಂದ, ಕುತೂಹಲದಿಂದ ವೀಕ್ಷಿಸುತ್ತಿರುತ್ತದೆ. ತಿಳಿವಳಿಕೆ ಬರುವಹಂತದಲ್ಲಿ ಇದು ನಮ್ಮಜಾತಿ, ನಮ್ಮ ಧರ್ಮ ಎಂದು ಹೇಳಿಕೊಡುತ್ತೇವೆ. ಧಾರ್ಮಿಕ ಆಚರಣೆಗಳು ಮಕ್ಕಳ ಮೇಲೆ ಗಾಢವಾದ ಪರಿಣಾಮ ಬೀರುತ್ತವೆ.

ಕವಿ ಇಲ್ಲಿ ಹಿಂದೂ, ಮುಸ್ಲಿಂ ಕ್ರಿಶ್ಚಿಯನ್ ಧರ್ಮಗಳ ಸಂಕೇತಗಳನ್ನು ದೇವರುಗಳು, ಧಾರ್ಮಿಕ ಆಚರಣೆಗಳು, ಮಸೀದಿ, ಮಂದಿರ, ಚರ್ಚುಗಳು, ಭಾಷೆಗಳನ್ನು ಉದಾಹರಣೆಕೊಡುತ್ತಾ ರೂಪಕಗಳ ಮೂಲಕ ಸೌಹಾರ್ದತೆಯನ್ನು ವಿಶ್ವಮಾನವ ಕಲ್ಪನೆಯನ್ನು ತುಂಬಾ ಚೆನ್ನಾಗಿ ಕಟ್ಟಿಕೊಟ್ಟಿದ್ದಾರೆ.

ಜಾತಿ, ಧರ್ಮಗಳೆ ಇವತ್ತಿನ ಸಂದರ್ಭದಲ್ಲಿ ಜನರನ್ನು ಆಳುತ್ತವೆ. ಈ ಜಾತಿ, ಧರ್ಮಗಳ ಮೂಲ ಎಲ್ಲಿದೆ? ಇದರ ಜನನ ಎಲ್ಲಿ? ಎಂಬುದನ್ನು ತೋರಿಸಿ ಎಂದು ವಿಜ್ಞಾನಕ್ಕೆ ಸವಾಲು ಎಸಗುವ ರೀತಿಯಲ್ಲಿದೆ ಈ ಕವಿತೆ. ಜಾತಿ ಎನ್ನುವುದು ದೇಹದಲ್ಲಿದೆಯೋ, ಅಥವಾ ಮೂಲಭೂತವಾದಿಗಳ ಮನಸ್ಸಿನಲ್ಲಿದೆಯೋ ಎಂಬ ಪ್ರಶ್ನೆ ಕವಿಗಳಿಗೆ ಕಾಡುತ್ತಿದೆ. ಕವಿತೆಗಳಲ್ಲಿ ಅದು ಈ ರೀತಿ ಮೂಡಿಬಂದಿದೆ.

"ವಿಜ್ಞಾನ ಪ್ರಯೋಗ ಶಾಲೆಯಲಿ
ಗಾಜಿನ ಕಪಾಟಿನಲಿ
ಮೊಳೆಗೆ ನೇತಾಡುತಿಹ

ಈ ಮಾದರಿಯ ಮಾನವ
ಇವನಾವ ಜಾತಿ?

ಗೋರಿಯೋ ಶಿಲುಬೆಯೋ
ಸ್ಮಶಾನವೋ, ಗುಡಿಕಟ್ಟೆಯೋ
ಎಲ್ಲಿದ್ದನೀತ?

ಇವನ ಹಣೆ ಮೈಯ್ಯಲ್ಲಿ
ಜಾತಿಯ ಕುರುಹಿಲ್ಲ
ಇವನಾವ ಜಾತಿ

ನಿಮ್ಮ ಪ್ರಯೋಗಾಲಯದಲಿ
ಕಂಡು ಹಿಡಿಯಬಲ್ಲಿರಾ
ಇವನಾವ ಜಾತಿ?

ಎಲುಬು ತೊಗಲು ಕೀಲುಗಳು
ಎಲ್ಲವೂ ಎಲ್ಲರಂತಿಹವು
ಕಂಡೀತೆ ನಿಮಗೆ
ಇವನಾವ ಜಾತಿ"[೫೮]

ಮನುಷ್ಯನ ದೇಹದಲ್ಲಿರುವ ರಕ್ತ, ಮೂಳೆ, ಚರ್ಮಗಳಲ್ಲಿ ಜಾತಿ, ಧರ್ಮದ ಕುರುಹುಗಳೇನಾದರೂ ಕಾಣುತ್ತವೆಯೋ? ಎಂಬ ಪ್ರಶ್ನೆಗಳ ಮೂಲಕವೇ ಉತ್ತರಗಳನ್ನು ಕಂಡುಕೊಳ್ಳಲು ಕವಿ ಬಯಸುತ್ತಿದ್ದಾರೆ. ವಿಜ್ಞಾನದ ಪ್ರಯೋಗಾಲಯದಲ್ಲಿಯಾವುದಾದರೊಂದು ಮನುಷ್ಯನ ಅಸ್ಥಿಪಂಜರವನ್ನು ತೆಗೆದುಕೊಂಡು ಪ್ರಯೋಗಾಲಯದಲ್ಲಿ ಪರೀಕ್ಷೆಗೆ ಒಳಪಡಿಸಿದರೆ ತಿಳಿಯುತ್ತದೆಯೇ ಅವನ ಜಾತಿ, ಧರ್ಮ, ಕುಲ? ಈ ಅಸ್ಥಿಪಂಜರ ಗೋರಿಯದೋ, ಶಿಲುಬೆಯದೋ, ಸ್ಮಶಾನದ್ದೋ ಎಲ್ಲಿಂದ ತಂದಿರುವುದೆಂದು ತಿಳಿಯಲು ಸಾದ್ಯವೆ ಹೇಳಿ. ಈ ಮೂಳೆ ಯಾವ ಧರ್ಮ ಎಂದು ಮೂಲಭೂತವಾದ ಪ್ರಶ್ನೆಯನ್ನು ಕವಿ ಕೇಳುತ್ತಿದ್ದಾರೆ. ಮೂಳೆ, ರಕ್ತಮಾಂಸಗಳಲ್ಲಿ ಜಾತಿ, ಧರ್ಮಗಳ ಕುರುಹುಗಳನ್ನು ಹುಡುಕಲು ಸಾಧ್ಯವೆ? ಜೀವಮಂಡಲದಲ್ಲಿ ಮನುಷ್ಯರೆಲ್ಲರೂ ಸಮಾನರೆ ನಾವೇ ಸೃಷ್ಟಿ ಮಾಡಿದ ಜಾತಿ, ಧರ್ಮಗಳನ್ನು ನಾವೇ ನಾಶಪಡಿಸುವ ಅನಿವಾರ್ಯವಿದೆ ಈ ಸಮಕಾಲೀನ ಸಂದರ್ಭದಲ್ಲಿ ಎಂದು ಕವಿ ತಮ್ಮ ಅಸಹಾಯಕತೆಯನ್ನು ಈ ಕವಿತೆಯ ಮೂಲಕ ವ್ಯಕ್ತಪಡಿಸುತ್ತಿದ್ದಾರೆ.

**೪.೨.೩. ಮಾನವೀಯ ನೆಲೆ**

ಸಮಕಾಲೀನ ಕನ್ನಡ ಕಾವ್ಯ ಕೋಮುಸಂಘರ್ಷಕ್ಕೆ ಕಟುವಾಗಿ ಪ್ರತಿರೋಧ ವ್ಯಕ್ತಪಡಿಸಿದಂತೆಯೇ ಸೌಹಾರ್ದತೆ ಮತ್ತು ಮಾನವೀಯತೆಗೆ ಮಿಡಿದಿದೆ. ಕನ್ನಡ ಸಾಹಿತ್ಯ ಆರಂಭದಿಂದಲೂ

ಮಾನವಪ್ರೀತಿಯನ್ನು ಹುಡುಕಾಟ ಮಾಡಿದೆ. ತನ್ನ ಸುತ್ತಲ ಬದುಕನ್ನು ಆರೋಗ್ಯಕರವಾಗಿಸುವ ಹೊಣೆಗಾರಿಕೆ ಕವಿಗಳ ಮೇಲಿದೆ. ಸಮಕಾಲೀನ ಕನ್ನಡ ಕಾವ್ಯ ಇಂಥ ಹೊಣೆಯನ್ನು ಸಮರ್ಥವಾಗಿ ನಿರ್ವಹಿಸಿದೆ. ಸಾಮಾಜಿಕ ವಿಕೃತಿಗಳಿಗೆ ಮುಲಾಮು ಹಚ್ಚುವ ಕೆಲಸಕ್ಕೆ ಹಲವರು ಕೈಜೋಡಿಸಿದ್ದಾರೆ. ಸಂವೇದನಾಶೀಲ ಕವಿಗೆ ಇದು ಎಲ್ಲಾ ಕಾಲದ ಸವಾಲೂ ಸಹ ಆಗಿರುತ್ತದೆ. ಅಂದರೆ ಸಮಕಾಲೀನ ಕನ್ನಡ ಕವಿಗಳು ಈ ವ್ಯವಸ್ಥೆಯ ಬಿಕ್ಕಟ್ಟುಗಳಿಗೆ ಪ್ರತಿಕ್ರಿಯಿಸಿದ್ದಾರೆ. ಹಾಗೆ ಪ್ರತಿಕ್ರಿಯಿಸುತ್ತಲೇ ಮಾನವೀಯ ಪ್ರೀತಿಯನ್ನು ಮೆರೆದಿದ್ದಾರೆ.

"ತೈಲ ತೀರಿದೆ ಬತ್ತಿ ಮುರುಡಿದೆ?
ದೀಪವಾರಿದೆ ಕತ್ತಲು
ಕಣ್ಣು ತೆರೆದಿದೆ ಕರವು ಸವರಿದೆ
ನಿಶೆಯು ಹಾಸಿದೆ ಸುತ್ತಲು

ಬಾಂಬು ಸುರಿದಿವೆ ಮಚ್ಚು ಎರಗಿವೆ
ಲಾಠಿ ಬಾಂಬು ಬಂದಿವೆ
ಮಸೀದಿ ಮಂದಿರ ಚರ್ಚು ಬಸದಿ
ಬೆಂಕಿಯಲ್ಲಿ ಬೆಂದಿವೆ

ಕರುಳ ಕುಡಿಗಳು ತರಳೆ ಮುಡಿಗಳು
ಕರಕಲಾಗಿವೆ ಎರಿ ಹೊತ್ತಲು
ಮಾನವೀಯತೆ ಮಾಯವಾಗಿದೆ
ಭಯವರು ತುಂಬಲು ಎತ್ತಲು"[೫೯]

ಕೋಮುದ್ವೇಷದ ವಿನಾಶದಿಂದ ಕತ್ತಲು ಕವಿದಿರುವ ಉದ್ವಿಘ್ನ ಸ್ಥಿತಿಯನ್ನು ಈ ಕವಿತೆ ಧ್ವನಿಸುತ್ತಿದೆ. ಲಯ ಮತ್ತು ಗೇಯತೆ ಈ ಕವಿತೆಯ ಧ್ವನಿಶಕ್ತಿಯನ್ನು ಹೆಚ್ಚಿಸಿದೆ. ಜೊತೆಗೆ ತುಂಬ ಸರಳ ಮತ್ತು ಅರ್ಥಪೂರ್ಣ ಸಂವಾದದ ಗುಣದಿಂದ ಓದುಗರ ಗಮನ ಸೆಳೆಯುತ್ತದೆ. ಅನಾಥಮೌನ ಈ ಕವಿತೆಯ ಪ್ರಧಾನ ಸ್ಥಾಯಿ; ಈ ಮೌನವೇ ಅನೇಕ ಅರ್ಥಗಳನ್ನು ನಿಗೂಢಗಳನ್ನು ಬಿಚ್ಚಿಡುತ್ತದೆ.

ಮತ-ಮೌಢ್ಯಗಳಿಂದ ವಿಶ್ವದಲ್ಲಿ ಸಾಮರಸ್ಯದ ಲಯ ತಪ್ಪಿದೆ. ಕವಿತೆ ಇಲ್ಲಿ ಸೌಹಾರ್ದತೆಯ ಕೊಂಡಿಯಾಗಿ ಮಾನವೀಯ ಪ್ರೀತಿಯನ್ನು ಬೆಸೆಯಲು ಉದ್ದೀಪಿಸುತ್ತಿದೆ. ಆತಂಕ, ಭಯ, ಹಿಂಸೆಯನ್ನು ಲೆಕ್ಕಿಸಿದೆ ಕೊನೆಗೆ ಒಡೆದ ಮನಸ್ಸುಗಳನ್ನು ಒಂದು ಮಾಡುವ, ಸಾಮರಸ್ಯದ ಸಂದೇಶವನ್ನು ಸಾರುವ ಆತ್ಯಂತಿಕ ಸ್ಥಿತಿಗೆ ಓದುಗರನ್ನು ಕೊಂಡೊಯ್ಯುತ್ತಿದೆ.

ಧರ್ಮದ ಕೇಡನ್ನು ಅನೇಕ ಕವಿಗಳು ಅನುಸಂಧಾನ ಮಾಡಿದ್ದಾರೆ. ಧರ್ಮದ ಹೆಸರಿನಲ್ಲಿ ಮುಲ್ಲಾ ಮೌಲ್ವಿಗಳು ಮಾಡುವ ದರ್ಬಾರನ್ನು ಈ ಕವಿತೆ ತೀಕ್ಷ್ಣವಾಗಿ ವಿಡಂಬನೆ ಮಾಡಿದೆ.

ಆ ಪದ್ಯ ಹೀಗಿದೆ:

"ನಿಮಗೆ ಗೊತ್ತಿಲ್ಲ, ಆ ನಮ್ಮ
ಪ್ರಜಾಪ್ರಭುತ್ವದ ಕಥನ?
ಅದಕ್ಕೆ ಹಿಡಿದಿದೆ ಈಗ ಗ್ರಹಣ!
ಅಲ್ಲಿ ಮುಲ್ಲಾ-ಮೌಲ್ವಿಗಳದ್ದೇ ದರ್ಬಾರ!
ಪಾಪದ ಪ್ರಜೆಗಳ ಪಾಲಿಗೋ
ಗಿಡುಗಗಳ ಕಣ್ಣಿಗೆ ಬಿದ್ದ ಮರಿ ಪಾರಿವಾಳದ
ಜೀವನ್ಮೃತದ ಅವಸ್ಥಾಂತರ!"[೬೦]

ಇದು ಬರಿ ಭಾರತದ ಸಮಸ್ಯೆಯಷ್ಟೇ ಅಲ್ಲ ಎಂಬುದು ಈ ಕವಿತೆಯಿಂದ ವಿಧಿತವಾಗುತ್ತದೆ. ಜೊತೆಗೆ ಜಗತ್ತಿನ ತುಂಬ ಹಬ್ಬಿರುವ ಇಂಥ ಸಾಮಾಜಿಕ ಪಿಡುಗನ್ನು ಹೋಗಲಾಡಿಸಲು 'ಮಾನವೀಯ ಪ್ರೀತಿ'ಯೊಂದೇ ಇರುವ ಏಕೈಕ ಅಸ್ತ್ರ ಎಂಬ ವಿವೇಕವೂ ಈ ಕವಿತೆಗಳಲ್ಲಿದೆ. ಆದರೆ 'ಧರ್ಮಾಂಧರು' ಮತ್ತು 'ನಮ್ಮ ಬಡೇ ಸಾಬರು', 'ಉಗ್ರವಾದ' ಮುಂತಾದ ಕವಿತೆಗಳು ಧಾರ್ಮಿಕ ಮೂಲಭೂತವಾದದ ಕರಾಳ ಮುಖಗಳನ್ನು ಕಾಣಿಸುತ್ತವೆ.

ಭಾರತದಂತಹ ಬಹುಸಂಸ್ಕೃತಿಯ ರಾಷ್ಟ್ರದಲ್ಲಿ ಧಾರ್ಮಿಕ ಅಲ್ಪಸಂಖ್ಯಾತರು ಪರಕೀಯರಂತೆ ಬದುಕುವ ಸ್ಥಿತಿ ಇದೆ. ದೇಶಭಕ್ತಿ, ದೇಶಪ್ರೇಮದ ಹೆಸರಿನಲ್ಲಿ ನಿತ್ಯ ಹಲವು ಸಂಘರ್ಷಗಳು ಸಂಭವಿಸುತ್ತಿವೆ. ಅದರಲ್ಲೂ ಮುಸ್ಲಿಮರು ಶಂಕಿತ ಮನೋಭಾವದಲ್ಲಿಯೇ ಬದುಕುತ್ತಿದ್ದಾರೆ.

"ರಾಮರಾಜ್ಯದಲ್ಲಿ ಶಂಕಿತರು
ಹೌದು ಅಕ್ಕ ಸೀತಾ
ಈ(ಹ)ರಾಮ ರಾಜ್ಯದಲ್ಲಿ
ನಿನ್ನಂತೆಯೇ ನಾನೂ ಶಂಕಿತ
ನಿನ್ನ ಪಾತಿವ್ರತ್ಯದಂತೆಯೇ ನನ್ನ ದೇಶಭಕ್ತಿ
ಸಾಬೀತು ಪಡಿಸುವದಾದರೂ ಹೇಗೆ
ಹೇಳು, ಶೀಲ!
ಅಕ್ಕ ಸೀತಾ
ನಾವು ಈ ನೆಲದ ಮಕ್ಕಳು
ಪರೀಕ್ಷೆಯೆಂಬ ಪಿತೂರಿಯ"[೬೧]

ರಾಮಾಯಣದಲ್ಲಿ ಸೀತೆಯ ಶೀಲ ರಾಮನ ಶಂಕೆಗೆ ಕಾರಣವಾದರೆ, ಆಧುನಿಕ ಸಂದರ್ಭದಲ್ಲಿ ಮುಸ್ಲಿಂರು ಬಹುಸಂಖ್ಯಾತರಾದ ಹಿಂದೂಗಳ ಶಂಕೆಗೆ ಒಳಗಾಗುತ್ತಿದ್ದಾರೆ. ಈ ಶಂಕೆಯ ಆತ್ಯಂತಿಕತೆ ಮನುಷ್ಯ ಮನುಷ್ಯರನ್ನೆ ಗುಮಾನಿಸುವ ಸ್ವರೂಪದ್ದು.

"ರಾಮ! ನೀನು ಮರವಾಗು!
ರಾಮ
ನೀನೊಂದು ಮರವಾಗಿ
ನಾಲ್ವರಿಗೆ ನೆರಳು ನೀಡಿದ್ದರೆ ಸಾಕಿತ್ತು
ಈ ರೀತಾಂಬರಿ, ಪೀತಾಂಬರಗಳ
ನಡುವೆ ನರಳುವುದಾದರೂ ತಪ್ಪುತ್ತಿತ್ತು.

ರಾಮ
ನೀನೊಂದು ಮರವಾಗಿ
ಸಾವಿರ ಬೀಜಗಳ ಬಿಟ್ಟು
ಹಸಿರು ಅರಳಿಸಿದ್ದರೆ ಸಾಕಿತ್ತು
ಅಧ್ವಾನ ರಾಜಕಾರಣದ ನಿರಂತರ
ಭಜನೆಯಲ್ಲಿ ಬಳಲುವುದಾದರೂ ತಪ್ಪುತ್ತಿತ್ತು."[೬೨]

'ರಾಮ' ಎಂಬ ಪೌರಾಣಿಕ ಪಾತ್ರವನ್ನು ನಮ್ಮ ಪ್ರಭುತ್ವಗಳು ಬಳಸಿಕೊಳ್ಳುವ ಬಗೆಯನ್ನು ಈ ಕವಿತೆಯಲ್ಲಿ ಕಾಣಬಹುದು. ಈ ಶಕ್ತಿರಾಜಕಾರಣಗಳು ಒಂದೇ ಪಾತ್ರ ಹಾಗೂ ಚಿತ್ರವನ್ನು ತಮಗೆ ಬೇಕಾದ ರೂಪದಲ್ಲಿ ಬಳಸಿಕೊಳ್ಳುವ ಮೂಲಕ ತಾವು ಅಧಿಕಾರದ ಅನುಭವವನ್ನು ಪಡೆಯುತ್ತಿವೆ. ಆದರೆ ಇದರಿಂದ ಆಗುವ ಸಾವು ನೋವುಗಳನ್ನು ಅವಗಣನೆಗೆ ತೆಗೆದುಕೊಳ್ಳುವುದಿಲ್ಲ. ಇಂಥ ವಿಷಬೀಜಗಳನ್ನು ಬಿತ್ತುವ ಮೂಲಕ ಸಮಾಜದ ಶಾಂತಿ ಮತ್ತು ಸೌಹಾರ್ದತೆಗೆ ಧಕ್ಕೆ ತರುತ್ತಿದ್ದಾರೆ.

"ನಮಗೆ ಮನೆ ಕೊಡುವುದಿಲ್ಲವಂತೆ
ನಗರದಲ್ಲಿ ನಮಗೆ ಬಾಡಿಗೆ ಮನೆ ಸಿಗುವುದಿಲ್ಲವಂತೆ
ಏಕೆಂದರೆ ನಾವು
ಗಡ್ಡಬಿಟ್ಟಿರುತ್ತೇವೆ, ದನದ ಮಾಂಸ ತಿನ್ನುತ್ತೇವೆ
ಕರ್ಪ್ಯೂ ಹೇರಿದಂತಿರುವ ತುರ್ತು ಪರಿಸ್ಥಿತಿಯ ನಡಾವಳಿಗಳು
ನಮ್ಮನ್ನು ಅನುಮಾನದಿಂದ ಕಾಣುತ್ತವೆ."[೬೩]

ಅನ್ಯರ ಮನಸ್ಸುಗಳಲ್ಲಿ ಭಯದ ವಾತಾವರಣವನ್ನು ಭಯೋತ್ಪಾದಕರು ಹಾಗೂ ಮೂಲಭೂತವಾದಿಗಳು ಮೂಡಿಸಿದ್ದಾರೆ. ಬಾಂಬು, ಬಂಧೂಕುಗಳ ಮೂಲಕ ಭಯೋತ್ಪಾದಕರು ಜನರನ್ನು ಭಯಭೀತರನ್ನಾಗಿ ಮಾಡುತ್ತಿದ್ದಾರೆ. ಮೂಲಭೂತವಾದಿಗಳು ಅವರ ಚಿಂತನೆಗಳಿಂದ ದೇವರು, ಧರ್ಮ, ಜಾತಿ, ಆಚರಣೆ ಮತ್ತು ಮೂಢನಂಬಿಕೆಗಳನ್ನು ಜನರ ಮನಸ್ಸಿನಲ್ಲಿ ಹಾಕಿ, ಬಲವಂತವಾಗಿ ಹೇರಿ ಯಾವಾಗಲು ಜನರು ಭಯದ ವಾತಾವರಣದಲ್ಲೇ ಜೀವಿಸುವಂತೆ ಮಾಡುತ್ತಿದ್ದಾರೆ.

ಮೂಲಭೂತವಾದಿ ಚಿಂತನೆಗಳು ಜನರ ಬದುಕಿನ ಮೇಲೆ ಗಾಢವಾದ ಪರಿಣಾಮವನ್ನು ಬೀರಿವೆ. ಮಾಂಸಾಹಾರಿಗಳಿಗೆ ನಗರಗಳಲ್ಲಿ ಬಾಡಿಗೆ ಮನೆ ಸಿಗುವುದು ತುಂಬಾ ಕಷ್ಟ. ಯಾವ ಜಾತಿ, ಯಾವ ಧರ್ಮ, ನೀನು ಮಾಂಸಾಹಾರಿಯೇ-ಸಸ್ಯಾಹಾರಿಯೇ ಎಂದು ಪ್ರಶ್ನೆಮಾಡಿ ಖಚಿತಪಡಿಸಿಕೊಂಡು ಆನಂತರ ಬಾಡಿಗೆಗೆ ಮನೆ ಕೊಡುತ್ತಾರೆ. ನಗರದ ಜನರಲ್ಲಿ ಮಾನವೀಯತೆಯ ಗುಣಗಳು ಕಣ್ಮರೆಯಾಗುತ್ತಿವೆ ಎಂಬುದನ್ನು ಕವಿ ಹೇಳುತ್ತಿದ್ದಾರೆ.

**೪.೩. ಚರಿತ್ರೆ ಮತ್ತು ಪುರಾಣ: ಅನುಸಂಧಾನ**

ಪುರಾಣ ಮತ್ತು ಚರಿತ್ರೆಗಳ ನಡುವಿನ ಅಂತರ್‌ಸಂಬಂಧ ತುಂಬಾ ಸಂಕೀರ್ಣವಾದುದು. ಪುರಾಣ ಮತ್ತು ಚರಿತ್ರೆಯ ಪಾತ್ರಗಳು ಸಾಹಿತ್ಯದಲ್ಲಿ ಅದರಲ್ಲೂ ಕಾವ್ಯದಲ್ಲಿ ಮತ್ತೆ ಮತ್ತೆ ಸೃಜಿಸಲ್ಪಡುತ್ತಿವೆ. ಮಹಿಳಾ ಪಾತ್ರಗಳು ಬೇರೆ ಬೇರೆ ನೆಲೆಯಲ್ಲಿ ಆಧುನಿಕ ಕನ್ನಡ ಕಾವ್ಯದಲ್ಲಿ ಪುನರ್‌ಸೃಷ್ಟಿಗೊಂಡಿವೆ. ಹಾಗೆ ನೋಡಿದರೆ ಕನ್ನಡ ಸಾಹಿತ್ಯವನ್ನು ಒಳಗೊಂಡಂತೆ ಜಗತ್ತಿನ ಎಲ್ಲಾ ಸಾಹಿತ್ಯವು ಕಾಲಕಾಲಕ್ಕೆ ಪುನರ್‌ಸೃಷ್ಟಿಗೊಳ್ಳುತ್ತ ಹೊಸ ಹೊಸ ರೂಪ ಪಡೆದುಕೊಳ್ಳುತ್ತಿದೆ. ಚರಿತ್ರೆ ಮತ್ತು ಪುರಾಣದ ಪಾತ್ರ ಹಾಗೂ ಪ್ರಸಂಗಗಳು ಆಯಾಕಾಲದ ಸಮಕಾಲೀನ ಸಾಂಸ್ಕೃತಿಕ ಸಂದರ್ಭಕ್ಕೆ ತಕ್ಕಂತೆ ಹಳೆಯ ಪೊರೆಯನ್ನು ಕಳಚಿ ಹೊಸ ಹೊಸ ಪದರುಗಳಾಗಿ ಸಂರಚನೆಗೊಳ್ಳುತ್ತಿದೆ. ಈ ಪ್ರಕ್ರಿಯೆ ಒಂದು ರೀತಿಯ ಭೂತ-ವರ್ತಮಾನಗಳ ಮುಖಾಮುಖಿ ಯಾಗುವ ಬಗೆ.

ಚರಿತ್ರೆ ಮುಗಿದುಹೋದ ಗತದ ಘಟನೆಗಳ ಸರಮಾಲೆಯಷ್ಟೇ. ಅದು ವರ್ತಮಾನದ ಕ್ಷಣಗಳೊಂದಿಗೆ ನಡೆಸುವ ಕನವರಿಕೆಯೂ ಹೌದು. ಆ ಕಾರಣದಿಂದಲೇ ಈ ಚರಿತ್ರೆ ಮತ್ತು ಪುರಾಣಗಳು ಒಂದೊಂದು ಕಾಲದಲ್ಲಿ ಸಂಭವಿಸಿ, ಸ್ಥಿರಗೊಂಡವುಗಳಲ್ಲ; ನಿರಂತರ ನಮ್ಮ ಬದುಕಿನ ಜೊತೆ ಬೆಸೆದುಕೊಂಡಿರುವಂತಹವು. ಸೀತೆ, ದ್ರೌಪದಿ, ಸಾವಿತ್ರಿ, ಅಹಲ್ಯೆ, ರಾಮ, ಕೃಷ್ಣ, ಶಿವ, ಕರ್ಣ, ರಾವಣ, ಹರಿಶ್ಚಂದ್ರ, ದುರ್ಯೋಧನ, ಚರಿತ್ರೆಯ ಪಾತ್ರಗಳಾದ ಅಕ್ಕಮಹಾದೇವಿ, ಬಸವಣ್ಣ, ಬುದ್ಧ, ಗಾಂಧಿ, ಮೀರಾಬಾಯಿ, ಸಾವಿತ್ರಿಬಾಯಿ ಇನ್ನು ಮುಂತಾದವರು ನಿತ್ಯ ಜನರ ಬದುಕಿನಲ್ಲಿ ಮತ್ತೆಮತ್ತೆ ಅನುಸಂಧಾನಗೊಳ್ಳುತ್ತಿರುತ್ತಾರೆ. ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಯಲ್ಲಿಯೂ ಈ ಪಾತ್ರಗಳು ಮತ್ತೆಮತ್ತೆ ಚರ್ಚೆಗೆ ಒಳಪಡುತ್ತಿರುತ್ತವೆ.

"...ಕವಿಗೆ ಚರಿತ್ರೆ ಬರೀ ಜಡವಾದ ಇತಿಹಾಸವಾಗಿರುವುದಿಲ್ಲ. ನಿನ್ನೆಯ ಚರಿತ್ರೆ ಇಂದಿನ ಬದುಕಿನ ಜತೆಗೆ ಸಾತತ್ಯತೆಯ ಕೊಂಡಿಗಳನ್ನು ಇಟ್ಟುಕೊಂಡಿರುತ್ತದೆ. ಆ ಸಾತತ್ಯತೆಯನ್ನು ಸಾಕ್ಷಾತ್ಕಾರ ಮಾಡಿಸುವ ಮೂಲಕ ಕವಿ ತನ್ನ ಅನುಭವಗಳಿಗೆ ಬೆಲೆಕಟ್ಟುವ ಒಂದು ತಾತ್ವಿಕ ದೃಷ್ಟಿಕೇಂದ್ರವನ್ನು ಶೋಧಿಸುತ್ತಾನೆ. ಆದರೆ ಈ ಸಾತತ್ಯತೆಯನ್ನು ಹುಡುಕುವ ಕೆಲಸ ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿ ತುಂಬಾ ಜಟಿಲವಾದದ್ದು."[೪] ಇಂಥ ಸವಾಲಿನ ನಡುವೆಯೂ ಚರಿತ್ರೆಯ ಜೊತೆಗೆ ಅನುಸಂಧಾನ ಮಾಡುವುದನ್ನು ಪಂಪನ ಕಾಲದಿಂದಲೂ ನೋಡಬಹುದು.

ಸಮಕಾಲೀನ ಸಂದರ್ಭದಲ್ಲಿ ಕವಿಗಳು ಪುರಾಣ ಮತ್ತು ಚರಿತ್ರೆಯ ಸ್ಥಾಪಿತ ಮೌಲ್ಯಗಳನ್ನು ಮುರಿದು ಕಟ್ಟುವ ಪ್ರಯತ್ನ ಮಾಡುತ್ತಿದ್ದಾರೆ. ಅನೇಕ ಪಾತ್ರಗಳನ್ನು ಮತ್ತು ಪ್ರಸಂಗಗಳನ್ನು ಪುನರ್‌ರಚಿಸಿ, ಮರುಪರಿಶೀಲನೆ ಮಾಡಿ, ಹೊಸ ಆಯಾಮವನ್ನು ಕೊಟ್ಟು ವರ್ತಮಾನಕ್ಕೆ ಮುಖಾಮುಖಿ ಮಾಡುತ್ತಿರುತ್ತಾರೆ. ಈ ಪ್ರಕ್ರಿಯೆ ಪಂಪನಿಂದಲೂ ನಡೆಯುತ್ತಲೇ ಬಂದಿದೆ.

ಚರಿತ್ರೆ ಮತ್ತು ಪುರಾಣದ ಅನುಸಂಧಾನವನ್ನು ಸಮಕಾಲೀನ ಕವಿಗಳು ಎರಡು ನೆಲೆಗಳ ಮೂಲಕ ವರ್ತಮಾನಕ್ಕೆ ಮುಖಾಮುಖಿ ಮಾಡಿದ್ದಾರೆ. ಒಂದು ಚರಿತ್ರೆ ಮತ್ತು ಪುರಾಣದ ಅನುಕರಣೆಯ ನೆಲೆ, ಇನ್ನೊಂದು ಚರಿತ್ರೆ ಮತ್ತು ಪುರಾಣಕ್ಕೆ ಪ್ರತಿರೋಧ ಒಡ್ಡುವುದು. ಈ ಎರಡೂ ನೆಲೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಚರಿತ್ರೆ ಮತ್ತು ಪುರಾಣವನ್ನು ವರ್ತಮಾನಕ್ಕೆ ಅನುಸಂಧಾನ ಮಾಡಿರುವ ಬಗೆಗಳನ್ನು ಸಮಕಾಲೀನ ಕನ್ನಡ ಕಾವ್ಯದಲ್ಲಿ ನೋಡಬಹುದು.

"ಈಚಿನ ಚರಿತ್ರೇಲಿ ತನ್ನ ದೇಶದ ನತದೃಷ್ಟ ಜನರ ಪಾಡಿನ ಬಗ್ಗೆ
ಕಳಕಳಿಯಿಂದ, ಏಕಾಗ್ರತೆಯಿಂದ, ನಸುನಗುತ್ತಲೇ
ದಲೈಲಾಮ ವಿವರಿಸುತ್ತಿದ್ದಾಗ ಒಂದು ದಿನ, ದೆಹಲಿಯಲ್ಲಿ
ತಾನು ಹೊದ್ದ ಕಾವಿ ಬಟ್ಟೆಯ ಮೇಲೊಂದು ಕಪ್ಪು ಇರುವೆ ಅವನಿಗೆ ಕಾಣಿಸಿತು

ಮೃದು ಮಾತಿನ ಸನ್ಯಾಸಿ ಮಾತು ನಿಲ್ಲಿಸಿ
ಬಹು ಹುಷಾರಾಗಿ ಇರುವೆಯನ್ನು ಬೆರಳ ತುದಿಯಲ್ಲಿ ಹಿಡಿದೆತ್ತಿ
ಮೇಜಿನ ಮೇಲೆ ಹರಿಯಲು ಬಿಟ್ಟು
ಮಾತು ಮುಂದುವರೆಸಿದ, ನಗುನಗುತ್ತಲೇ"[೬೫]

ಇಲ್ಲಿ 'ನತದೃಷ್ಟ ಜನರ ಪಾಡಿನ ಬಗ್ಗೆ ಕಳಕಳಿಯನ್ನು ವ್ಯಕ್ತಪಡಿಸುತ್ತಿದ್ದ ದಲೈಲಾಮನ ನಿಷ್ಠೆಯನ್ನು ವ್ಯಂಗ್ಯ ಮಾಡುತ್ತಿದ್ದಾನೆ ಕವಿ. ಅದಕ್ಕೆ ಕಾಲದ ಅಪಾರ ಕ್ಷಣಿಕತೆಯಲ್ಲಿ, ಅನಂತತೆಯಲ್ಲಿ 'ಸತ್ಯ' ಗೆಲ್ಲುವುದೋ ಇಲ್ಲವೋ ಎಂಬ ಬಗ್ಗೆ ಸ್ವತಃ ದಲೈಲಾಮನಿಗೇ ಖಾತ್ರಿಯಿಲ್ಲ. ಇದು ಚರಿತ್ರೆಯ ಮತ್ತೊಂದು ವ್ಯಂಗ್ಯವಲ್ಲದ ಮತ್ತೇನು? ಚರಿತ್ರೆಯಲ್ಲಿ ಗೆಲುವು ಸತ್ಯವಾಗುತ್ತದೆ ಎಂಬ ಮಾತಿಗೆ ಕಾಲ ಉತ್ತರಕೊಡುವ ಬಗೆ ಮತ್ತೊಂದು ಬಗೆಯ ಕುತೂಹಲಕ್ಕೆ ಕೊಂಡೊಯ್ಯುತ್ತದೆ.

"ನಿಮ್ಮ ಕೋಟಿನ ಗುಂಡಿಯಲ್ಲಿನ್ನು
ಗುಲಾಬಿಯಾಗಲು ಇಷ್ಟವಿಲ್ಲ ನಮಗೆ

ಶತಮಾನದಿಂದ ಪಿತರ
ಪತಿ ಸುತರ
ಪಹರೆ ಪಂಜರದಿ ಬಂದಿಯಾಗಿದ್ದ
ಹತಭಾಗಿನಿಯರು ನಾವು

ಗತ ಇತಿಹಾಸದ ಪುಟ ಪುಟಗಳಲ್ಲಿ
ಅತಿಶೋಷಿತರು ಘೋಷಾವೃತರು
ಮತಿಹೀನ ಕಟ್ಟಳೆಗಳ ಕೋಟೆಕೊತ್ತಲಲಿ
ಕೊಳೆಯುತ್ತಿರುವವರು"[೬೬]

ಈಗಾಗಲೇ ಚರಿತ್ರೆಯಲ್ಲಿ ದಾಖಲಾಗಿರುವ ಮಹಿಳೆಯರಂತೆ ನಾವು ಬದುಕುವುದಿಲ್ಲ. ಶತಶತಮಾನಗಳಿಂದ ಪಿತೃಪ್ರಧಾನ ಸಮಾಜದಲ್ಲಿ ಸಿಲುಕಿ ಶೋಷಣೆ ಅನುಭವಿಸಿ ಬಂಧನಕ್ಕೆ ಒಳಗಾಗಿದ್ದ ಮಹಿಳೆಯರು ಬಿಡುಗಡೆಯನ್ನು ಪಡೆಯುಲು ಯತ್ನಿಸುತ್ತಿದ್ದಾರೆ. ಚರಿತ್ರೆಯ ಮಹಿಳೆಯರನ್ನು ನೆನೆಯುತ್ತಾ ತನ್ನ ಮುಂದಿನ ಸವಾಲುಗಳ ಬಗ್ಗೆ ಚಿಂತಿಸುತ್ತಿದ್ದಾರೆ. ಅಕ್ಷರ ಕಲಿತ ಮಹಿಳೆಯರಲ್ಲಿ ಜಾಗೃತಿ ಮೂಡಿದೆ. ಪಾಶ್ಚಾತ್ಯದ ಪ್ರಭಾವ, ಹಲವು ಚಿಂತನೆಗಳ ಪ್ರಭಾವ ಇವರ ಮೇಲೆ ಬೀರಿದೆ. ಮಹಿಳೆಯರು ಒಂದಾಗಿ ತಮ್ಮ ಹಕ್ಕುಗಳಿಗಾಗಿ, ಸ್ವಾತಂತ್ರ್ಯಕ್ಕಾಗಿ ಸಂಘ, ಸಂಘಟನೆಗಳನ್ನು ಕಟ್ಟಿಕೊಂಡು ಸ್ವಾಭಿಮಾನದಿಂದ ಬದುಕುತ್ತಿದ್ದಾರೆ. ಮನು ಹೇಳಿದಂತೆ ಬಾಲ್ಯದಲ್ಲಿ ತಂದೆ, ಯೌವ್ವನದಲ್ಲಿ ಗಂಡ, ವೃದ್ಧಾಪ್ಯದಲ್ಲಿ ಮಗನ ಆಶ್ರಯದಲ್ಲಿ ಬದುಕುತ್ತಾಳೆ ಎನ್ನುವ ಮಾತಿಗೆ ವಿರುದ್ಧವಾಗಿ ಜೀವನ ನಡೆಸುತ್ತಿದ್ದಾರೆ. ಎಷ್ಟೋ ಜನರಿಗೆ ಹೆಣ್ಣು ಮಕ್ಕಳೇ ಆಶ್ರಯವನ್ನು ನೀಡಿದ್ದಾರೆ. ಎಲ್ಲಾ ರಂಗಗಳಲ್ಲಿಯೂ ಮಹಿಳೆಯರು ಕೆಲಸ ನಿರ್ವಹಿಸುತ್ತಿದ್ದಾರೆ. ಮಹಿಳೆಯರಲ್ಲಿ ಆತ್ಮವಿಶ್ವಾಸ ಮೂಡಿರುವುದನ್ನು ಇಲ್ಲಿ ಅಭಿವ್ಯಕ್ತಿಸಲಾಗಿದೆ.

ಹೀಗೆ 'ತೊಟ್ಟಿಲ ತೂಗುವ ಕೈಯಿ' ಸಿಡಿದೆದ್ದು 'ಪೆನ್ನು ಮತ್ತು 'ಗನ್ನು'ಗಳನ್ನು ಹಿಡಿದು ಎಂಥ ಪ್ರತಿರೋಧಕ್ಕೂ ನಾವು ಸಿದ್ಧರಿದ್ದೇವೆ ಎಂಬ ದಿಟ್ಟತನದಿಂದ ಪ್ರತಿಭಟನೆಗೆ ಸಿದ್ಧರಾಗಿದ್ದಾರೆ. ದೈಹಿಕವಾಗಿ ಮತ್ತು ಮಾನಸಿಕವಾಗಿ ಸದೃಢರಾಗಿದ್ದಾರೆ. ಎಲ್ಲಾ ಅವಕಾಶಗಳಿಂದ ವಂಚಿತರಾಗಿದ್ದ ಮಹಿಳೆಯರಿಗೆ ಈಗ ಅವಕಾಶದ ಬಾಗಿಲುಗಳು ತೆರೆದಿವೆ. ಆದರೂ ಪುರುಷಪ್ರಧಾನ ಚಿಂತನೆಗಳು ಇವತ್ತಿಗೂ ಆಳುತ್ತಿವೆ. ಬಂಧನ ಸಡಿಲವಾಗಿದ್ದರೂ ಬೇರೆ ಸ್ವರೂಪದ ಬಂಧನಗಳಿಗೆ ಮಹಿಳೆಯರು ಒಳಗಾಗುತ್ತಿದ್ದಾರೆ. ಸಮಕಾಲೀನ ಸಂದರ್ಭದಲ್ಲಿ ವೈಚಾರಿಕವಾಗಿ ಬೆಳೆಯುತ್ತಿರುವ ಮಹಿಳೆಯರು ಹಲವು ವಲಯಗಳಲ್ಲಿ ತಮ್ಮದೇ ಆದ ಛಾಪನ್ನು ಸಮಾಜದಲ್ಲಿ ಮೂಡಿಸುತ್ತಿದ್ದಾರೆ. ನಾಲ್ಕು ಗೋಡೆಗೆ ಸೀಮಿತವಾಗಿದ್ದು, ಕೆಲವರ ಸೇವೆಗೆ ಮಾತ್ರ ಮೀಸಲಾಗಿದ್ದ ಮಹಿಳೆಯರು ತಮ್ಮ ಸ್ವಂತ ಆಲೋಚನೆಗಳಿಂದ, ನಿರ್ಧಾರಗಳನ್ನು ತೆಗೆದುಕೊಂಡು ಸ್ವಾತಂತ್ರ್ಯ ಮತ್ತು ಸ್ವಾಭಿಮಾನದಿಂದ ಬದುಕುತ್ತಿದ್ದಾರೆ. ಕೆಲವರು ಪುರುಷನ ಅಧೀನದಲ್ಲಿ ಬದುಕಲು ಇಚ್ಛೆಯಿಲ್ಲದೆ ಒಂಟಿಯಾಗಿ ಕೂಡ ಬದುಕುತ್ತಿದ್ದಾರೆ. ಇನ್ನು ಕೆಲವು ಮಹಿಳೆಯರು ತಾವೇ ಕೆಲಸ ಮಾಡಿ ಗಂಡನನ್ನು ಸಾಕುತ್ತಿದ್ದಾರೆ. ನಾಲ್ಕು ಗೋಡೆಗಳ ಮಧ್ಯ ಬದುಕುತ್ತಿದ್ದ ಮಹಿಳೆಗೆ ಸ್ವಾತಂತ್ರ್ಯ ದೊರೆತಿದೆ ಎಂದು ಹೇಳಬಹುದು.

"ಅಡುಗೆ ಮನೆಯಿಂದ ಅಂತರಿಕ್ಷಕ್ಕೆ
ಜಿಗಿದದ್ದಾಯಿತು

ನಕಾಶೆ ಹಿಡಿದು ಹಾರಿಸಬಲ್ಲೆವು
ಜೆಟ್ಟು ವಿಮಾನವ ಈಗ

ಸ್ವಾಭಿಮಾನದ ಗರಿಯ ಬಿಚ್ಚಿ
ಸ್ವಾತಂತ್ರ್ಯವ ಹಾಡಿ ಕುಣಿದು
ವೇಗದ ಯುಗವ ಹೊಸ ಶತಮಾನವ
ಸ್ವಾಗತಿಸುವೆವು ನಾವು"[೬೨]

ಎಂದು ಹೊಸ ಶತಮಾನದ ಹೊಸ್ತಿಲಲಿ ಹೊಸಬದುಕನ್ನು ಹುಡುಕಾಟ ಮಾಡಲೆತ್ನಿಸಿದ್ದಾರೆ. ಅದಕ್ಕೆ 'ನಿಮ್ಮ ಕೋಟಿನ ಗುಂಡಿಯಲಿನ್ನು/ಗುಲಾಬಿಯಾಗಲು ಇಷ್ಟವಿಲ್ಲ ನಮಗೆ' ಎಂಬ ದೃಢ ಸಂಕಲ್ಪವನ್ನು ತೊಟ್ಟಿದ್ದಾರೆ. 'ಗತ ಇತಿಹಾಸದ' ಹೊಸ ಪುಟಗಳಲ್ಲಿ 'ಹೊಸ ನಕಾಶೆ'ಯನ್ನು ರೂಪಿಸುವ ಹವಣಿಕೆ ಇಲ್ಲಿನದು. ಚರಿತ್ರೆಯ ಮರುನಿರೂಪಣಾ ಕ್ರಮದ ಅಪೇಕ್ಷೆಯೂ ಇಲ್ಲಿ ವ್ಯಕ್ತಗೊಂಡಿದೆ.

ಶತಶತಮಾನದಿಂದಲೂ ಪುರುಷ ಇಚ್ಛೆಯಂತೆ, ಗುಲಾಮಳಾಗಿ ಬದುಕುತ್ತಿದ್ದ ಮಹಿಳೆಯರು ಇಂದು ಸ್ವತಂತ್ರವಾಗಿ ಸ್ವಾಭಿಮಾನದಿಂದ ಬದುಕುವ ಅವಕಾಶಗಳು ದೊರೆತಿವೆ. ವರ್ತಮಾನದ ಸಂದರ್ಭದಲ್ಲಿ ಹೆಣ್ಣು ಬಲೆಯಿಂದ ದೂರವಾಗಲು ಹಲವಾರು ಅವಕಾಶಗಳು ನಿರ್ಮಾಣವಾಗಿವೆ. ಹೊಸಯುಗ ಆರಂಭವಾಗಿದೆ. ಮಹಿಳೆ ಅಬಲೆಯಲ್ಲ ಸಬಲೆ ಎನ್ನುವ ನಿಲುವನ್ನು ಇಲ್ಲಿ ಕಾಣಬಹುದು.

ಚರಿತ್ರೆಯನ್ನು ನಿರಾಕರಿಸದೆಯೂ ವರ್ತಮಾನದಲ್ಲಿ ತಮ್ಮ 'ಅಸ್ಮಿತೆ'ಯನ್ನು ಕಾಪಿಟ್ಟುಕೊಳ್ಳುವ ಬಗೆ ಇಲ್ಲಿ ವಿಶಿಷ್ಟವಾಗಿದೆ. ಮಹಿಳೆಯರ ಚರಿತ್ರೆ 'ಕರುಣಾಮಯಿ, ಕ್ಷಮಯಾಧರಿತ್ರಿ ಎಲ್ಲವನ್ನು ಸಹಿಸಿಕೊಳ್ಳುವಂತಹವಳು' ಎಂದು ಹೇಳುತ್ತಲೆ ಶೋಷಣೆ ಮಾಡಿದೆ. ವರ್ತಮಾನದಲ್ಲೂ ಮುಂದುವರಿಯುತ್ತಿದೆ. ಚರಿತ್ರೆಯ ಶೋಷಣೆಯ ಆಟಕ್ಕೆ ನಾವು ದಾಳಗಾಳಾಗಿ ಆಡಿಸಿದಂತೆ ಆಡಿದ್ದೇವೆ. ನಮ್ಮ ತಾಯಂದಿರಂತೆ ಚರಿತ್ರೆಯಲ್ಲಿ ದಾಖಲಾಗಲು ಇಷ್ಟಪಡುವುದಿಲ್ಲ. ಸ್ವತಂತ್ರರಾಗಿ ಬದುಕಲು ಬಿಟ್ಟುಬಿಡಿ. ನಾವು ಅವರಂತಲ್ಲ. ನೀವು ಬರೀ ಅಕ್ಷರಗಳಲ್ಲಿ ಕೊಟ್ಟಿರುವ ಗೌರವ ನಮಗೆ ಬೇಕಾಗಿಲ್ಲ ಎಂದು ಕವಯಿತ್ರಿ ಹೇಳುವ ಬಗೆ ಹೀಗಿದೆ:

"ಕ್ಷಮಿಸಿಬಿಡು ಪ್ರಭುವೆ
ನಾವು ಅವರಂತಲ್ಲ
ಅವರಂತಿಲ್ಲದಕ್ಕೆ ಖೇದವೂ ಇಲ್ಲ.

ನಾವು ಚದುರಂಗ ವಾಡುತವುದಿಲ್ಲ
ನಮಗಾಟ ಬರುವುದಿಲ್ಲ
ಕಲಿಯುವುದೂ ಇಲ್ಲ
ಅದು ನಮಗಿಷ್ಟವೂ ಇಲ್ಲ.

ತಂತ್ರಕ್ಕೆ ಪ್ರತಿತಂತ್ರ
ನೂರು ದುರಾಲೋಚನೆಗಳ ಷಡ್ಯಂತ್ರ
ಕುಟಿಲೋಪಾಯಗಳ ಮಂತ್ರ
ಬೇಡವೇ ಬೇಡ ದಮ್ಮಯ್ಯ
ಚದುರಂಗ ನಮಗಿಷ್ಟವಿಲ್ಲ."[೬೮]

ಈ ತಂತ್ರ-ಪ್ರತಿತಂತ್ರಗಳ ಜಂಜಾಟಗಳಲ್ಲಿ ಭಾಗಿಯಾಗಿಲ್ಲ ಎಂದ ಮಾತ್ರಕ್ಕೆ ಚರಿತ್ರೆಯಿಂದ ವಿಮುಖವಾಗುವುದು ಎಂದರ್ಥವಲ್ಲ: ಆಟವಾಡದೆಯೂ ತನ್ನ ತನವನ್ನು ಉಳಿಸಿಕೊಂಡಿರುತ್ತೇವೆ ಎಂದರ್ಥ ಅದಕ್ಕೆ ಕವಯಿತ್ರಿ ಹೇಳುವುದು:

"ನಮಗೆ ನಮ್ಮಷ್ಟಕ್ಕೆ
ನಮ್ಮೆದೆಯ ನೋವು ಹಾಡಲು ಬಿಡು"[೬೯]

ಎಂದು ಇತಿಹಾಸದ ತಕ್ಕಡಿಯ ಸಹವಾಸದಿಂದ ದೂರ ಸರಿಯುತ್ತಾಳೆ. ಇದಕ್ಕೆ ಕವಯಿತ್ರಿ ಕೊಡುವ ಕಾರಣ 'ನಮ್ಮ ಹಾಡಿಗೆ ತಕ್ಕಡಿಯೇ ಇಲ್ಲ.' 'ಆದ್ದರಿಂದ ಅಳತೆಗಳ ಗೊಡವೆ ನಮಗಿಲ್ಲ.' ಇನ್ನೂ ಮುಂದೆ ಹೋಗಿ

"ಕವಯಿತ್ರಿ ಕೊಡುವ ಉತ್ತರ ಹೀಗಿದೆ
ನಾವು ಹೀಗೆಯೇ ನೋವು ಹಾಡುತ್ತೇವೆ
ಆಟವಾಡದೆಯೂ ಜೀವಂತವಿರುತ್ತೇವೆ
ಚರಿತ್ರೆಯಾಗದೆಯೂ ವರ್ತಮಾನದಲ್ಲಿರುತ್ತೇವೆ!"[೭೦]

ಈ ದಿಟ್ಟ ಉತ್ತರವೆ ಚರಿತ್ರೆಯನ್ನು ನಿರಾಕರಿಸದೆಯೂ ವರ್ತಮಾನದಲ್ಲಿ ತನ್ನ ಛಾಪನ್ನು ಉಳಿಸಿಕೊಳ್ಳುವ ಛಲವನ್ನು ಕವಿತೆ ಕಟ್ಟಿಕೊಟ್ಟಿದೆ. ಅಷ್ಟೇ ಅಲ್ಲ ಚರಿತ್ರೆಗೆ ಜೋತುಬೀಳುಚವ ಬಗೆಯನ್ನು ಇಲ್ಲಿ ತೀಕ್ಷ್ಣವಾಗಿ ವ್ಯಂಗ್ಯ ಮಾಡಲಾಗುತ್ತಿದೆ. ಇದು ಈ ಕವಿತೆಯ ಆಶಯ ಮತ್ತು ಶಕ್ತಿ ಎರಡೂ ಆಗಿದೆ. ಎಲ್ಲಕ್ಕಿಂತ ಮುಖ್ಯವಾಗಿ 'ನಾವು ಹೀಗೆಯೇ ನೋವು ಹಾಡುತ್ತೇವೆ, ಆಟವಾಡದೆಯೂ ಜೀವಂತವಿರುತ್ತೇವೆ' ಎಂಬ ಆಶಾದಾಯಕ ನಿಲುವು ಈ ಕವಿತೆಗೆ ಜೀವಚೈತನ್ಯವನ್ನು ನೀಡುತ್ತದೆ.

ಪುರಷರ ಜೂಜಾಟದಲ್ಲಿ ಮಹಿಳೆಯನ್ನು ಚರಿತ್ರೆ ಬಳಸಿಕೊಂಡಿರುವ ಬಗೆಯನ್ನು ಕವಿಯತ್ರೆ ವ್ಯಕ್ತಪಡಿಸುತ್ತಾ ತನ್ನ ನೋವು ಆ ಚರಿತ್ರೆಗೆ ತಳಕು ಹಾಕುವುದು ಬೇಡ. ನಿಮ್ಮ ದಾಳಕ್ಕೆ ನಾನು ಕುಣಿಯಲಾರೆ. ನನ್ನ ನೋವಿನ ಹಾಡನ್ನು ಹಾಡಲು ಬಿಟ್ಟು ಬಿಡಿ ಎಂದು ವಿನಂತಿ ಮಾಡಿಕೊಳ್ಳುವ ನೆಲೆಯಲ್ಲಿ ಅಭಿವ್ಯಕ್ತಿಸುತ್ತಿದ್ದಾಳೆ. ಶೋಷಣೆ ಇವತ್ತಿಗೂ ಮಹಿಳೆಯರ ಮೇಲೆ ನಡೆಯುತ್ತಿರುವುದು ನಿಂತಿಲ್ಲ. ಪುರುಷ ಸಮಾಜದ ದೌರ್ಜನ್ಯಕ್ಕೆ ಶೋಷಣೆಗೆ ಮಹಿಳೆಯರು ಒಳಗಾಗುತ್ತಿದ್ದಾರೆ. ಆದರೆ ದೌರ್ಜನ್ಯ, ಶೋಷಣೆಯ ಸ್ವರೂಪಗಳು ಬೇರೆಯಾಗಿವೆ. ಶೋಷಣೆಯಿಂದ ಬಿಡುಗಡೆಯನ್ನು ಪಡೆಯಲು ಈ ಕವಿತೆ ಮೂಲಕ ಕವಯಿತ್ರಿ ಪ್ರಯತ್ನಿಸುತ್ತಿದ್ದಾರೆ.

ಚರಿತ್ರೆ ಮತ್ತು ಪುರಾಣಗಳ ಪಾತ್ರಗಳಂತಾಗದೆ ಹೊಸ ದಾರಿಯನ್ನು ಹುಡುಕಾಟ ಮಾಡುವ ಕವಯಿತ್ರಿ ಇಲ್ಲಿ ತನ್ನದೇ ಸ್ವತಂತ್ರ ಅನುಭವನ್ನು ಕಂಡುಕೊಳ್ಳುವ ಹವಣಿಕೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಮಹಾಭಾರತದ ಜೂಜಿನಲ್ಲಿ ಪಣಕ್ಕಿಟ್ಟ ದ್ರೌಪದಿಯಂತಾಗದೆ ನನ್ನದೇ ಹೊಸಹೊಂದು ಜಗತ್ತನ್ನು ಸಂರಚಿಸಿಕೊಳ್ಳುತ್ತೇನೆಂಬ ದೃಢನಂಬಿಕೆ, ಆತ್ಮವಿಶ್ವಾಸ ಇಲ್ಲದೆ. ಅದಕ್ಕೆ ಕವಯಿತ್ರಿ ಹೇಳುವುದು ಹೀಗೆ:

"ಜೂಜಿನ ವಸ್ತುವಾಗಿ
ಪಣಕ್ಕಿಟ್ಟ ಪಾಂಚಾಲಿ
ಅಪಮಾನದ ಬೆಂಕಿಯಲಿ
ಬೆಂದು ಹೋಗುವಂತೆ
ದಹಿಸಿ ಹೋಗಲಾರೆ
ಯಾರದೋ ವಸ್ತುವಾಗುವ
ಬದಲು ಲೋಕದಲಿ
ನನ್ನ ಅಸ್ಥಿ ಹುಡುಕುತಲಿರುವೆ."೨೧

ತಾನು ಈ ಪುರುಷಕೇಂದ್ರಿತ ಜಗತ್ತು ನೋಡಿರುವ ಬಗೆಗಿಂತ ಭಿನ್ನವಾದ ಮತ್ತು ಪದ್ಯವಾದ ಅಧ್ಯಯನದ ವಸ್ತುವಾಗುವ ತುಡಿತವೂ ಇಲ್ಲಿದೆ.

ಶತಶತಮಾನಗಳಿಂದ ಗಂಡು ಹೇರಿದ ಮೌಲ್ಯ ಮತ್ತು ಶೋಷಣೆಗಳನ್ನು ಅನುಭವಿಸಿ ಹೆಣ್ಣಿಗೆ ಸಾಕಾಗಿದೆ. ಅವಳಿಗೂ ಅವಳದೇ ಆದ ಅಸ್ಥಿತ್ವವಿದೆ. ಅವಳಿಗೂ ಮನಸ್ಸು; ಜೀವವಿದೆ ಎಂಬ ಕನಿಷ್ಠ ಪ್ರಜ್ಞೆಯೂ ಗಂಡಿಗೆ ಇಲ್ಲವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಹೆಣ್ಣಿನ ತಾಳ್ಮೆಯ ಮೇರೆ ಮೀರಿದೆ. ಅದಕ್ಕೆ ನೊಂದ ಹೆಣ್ಣು ಹೀಗೆ ಹೇಳುತ್ತಾಳೆ.

"ನೋವು ಹಿಂಸೆ ತಾಳಿಕೊಂಡೆವು
ಕುಡಿತ ಹೊಡೆತ ಸಹಿಸಿಕೊಂಡೆವು
ಬೈಗುಳ ಅಪಮಾನದಲಿ ದಹಿಸಿಕೊಂಡೆವು
ಸೀಮೆ ಎಣ್ಣೆ ಸುರಿದು ಬೆಂಕಿಯಿಟ್ಟಾಗ
ತಾಳದೆ ಝಳ ಕೂಗಿಕೊಂಡೆವು
ಆತ್ಮಗಳು ತಿರುಗಿ ನಿಂತು ಕೇಳಿದವು
ತಾಳೋದಂದ್ರೆ ಎಲ್ಲಿತನಕ?"೨೨

ಹೆಣ್ಣು ಪುರುಷನ ಅಧೀನ; ಅವಳು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ. ಹೆಣ್ಣು ಬಾಲದಲ್ಲಿ ತಂದೆಯ ಆಶ್ರಯದಲ್ಲಿ, ಯೌವ್ವನದಲ್ಲಿ ಗಂಡನ ಆಶ್ರಯದಲ್ಲಿ ಮತ್ತು ಮುಪ್ಪಿನಲ್ಲಿ ತನ್ನ ಮಕ್ಕಳ ಆಶ್ರಯದಲ್ಲಿ ಇರಬೇಕೇ ಹೊರತು, ಅವಳು ಎಂದಿಗೂ ಸ್ವತಂತ್ರರಲ್ಲ ನಡುಬೀದಿಯಲಿ ಸೇರಿದ

ಎಂದು ಹೆಣ್ಣನ್ನು ಎರಡನೆಯ ಪ್ರಜೆಯಾಗಿ ನಿರ್ಮಿಸಿದ ಮನುವಿನ ಬಗ್ಗೆ ಇಲ್ಲಿ ಕವಯಿತ್ರಿ ಪ್ರತಿರೋಧ ವ್ಯಕ್ತಪಡಿಸುತ್ತಿದ್ದಾಳೆ.

"ಸೀತೆ, ದ್ರೌಪದಿ, ಗೋಪಿಕೆಯರಾದಿಯಾಗಿ
ದುಷ್ಯಂತನ ಶಾಕುಂತಲೆ
ಹರಶ್ಚಂದ್ರನ ಚಂದ್ರಮತಿ
ಕಲ್ಲಾದ ಅಹಲ್ಯೆಯರು
ಕೈಯಲ್ಲಿ ಕೊಳ್ಳಿ ಹಿಡಿದು
ನಡುಬೀದಿಯ ನೇಣುಗಂಬದಲಿ
ಮನುವಿಗೆ ನಿಲ್ಲಿಸಿ ಕೇಳುತ್ತಿದ್ದಾರೆ
ಹೇಳು ನಿನ್ನ ಅಂತಿಮ ಇಚ್ಛೆ ಏನೆಂದು?"[೨೩]

ಹೆಣ್ಣು ಪಾತಿವ್ರತ್ಯ ಮೌಲ್ಯಕ್ಕೆ ವಿರುದ್ಧವಾಗಿ ನಡೆಯಬಾರದೆಂಬ ವಿಧಿ–ನಿಷೇಧಗಳನ್ನು ಕವಯಿತ್ರಿ ಪ್ರಶ್ನಿಸುತ್ತಿದ್ದಾರೆ. ಸೀತೆ, ದ್ರೌಪದಿ, ಗೋಪಿಕೆ, ಶಕುಂತಲೆ, ಚಂದ್ರಮತಿ, ಅಹಲ್ಯೆ ಇವರೆಲ್ಲರೂ ತಮ್ಮ ಈ ಸ್ಥಿತಿಗೆ ಕಾರಣನಾದ ಮನುವನ್ನು ಕೇಳುತ್ತ, ನಿನ್ನ ಉದ್ದೇಶ ನಮಗೆ ಸ್ಪಷ್ಟವಾಗಲಿ ಎಂದು ದಿಟ್ಟವಾಗಿ ಕೇಳುತ್ತಿದ್ದಾರೆ.

"ಅಂದು ನೀನು ನೀನೆಂಬ ನಾಯಕಸಾನಿ
ಹಸ್ತದ, ಕಮಲದ, ನೇಗಿಲಿನ ಘತಕ್ಕೆ ಒಳಗಾಗಿಯೂ
ಮತ್ತೆ ಮತ್ತೆ ಗದ್ದುಗೆಯ ಪೊರೆಯುತ್ತಾ ಹೋದೆ
ಇಂದು ಅಭಯಗಳಿಲ್ಲದ ನಿರ್ಭಯಗಳೆಂಬ
ಕುಸುಮಗಳು ಪಕಳೆ ಕಳೆದು ಉದುರುತ್ತಿವೆ ಮಣ್ಣ ಮಡಿಲಿಗೆ.

ಇತಿಹಾಸವೆಂದರೆ ಇಷ್ಟೇ
ಮುಖ ಮೈ ಮೊಲೆ ಕೆತ್ತಿಸಿಕೊಂಡ ಭಗ್ನಮೂರ್ತಿಗಳು
ಕೊಳೆತು ನಾರುವ ಕೂಪದೊಳಗಿನ ಹೆಣಗಳು."[೨೪]

ಇತಿಹಾಸದ ವ್ಯಾಖ್ಯಾನವನ್ನೇ ಭಿನ್ನವಾಗಿ ಕಾಣಿಸುವ ಈ ಕವಿತೆ, ಚರಿತ್ರೆಯ ಗಾಯಗಳ ಜೊತೆಗೆ ವರ್ತಮಾನದ ರಾಜಕೀಯವನ್ನೂ ಅನುಸಂಧಾನಗೊಳ್ಳುತ್ತಾರೆ. ಚರಿತ್ರೆಯ ಘಟನೆಗಳು ಇಲ್ಲಿ ಬರೀ ಮುಗಿದು ಹೋದ ಯಾವುದೋ ಕಾಲದ ಗತವಾಗಿಲ್ಲ. ಬದಲಿಗೆ ನಿತ್ಯ ಹೊಸಹುಟ್ಟು ಪಡೆಯುತ್ತ 'ಮುಖ ಮೈ ಮೊಲೆ ಕೆತ್ತಿಸಿಕೊಂಡ ಭಗ್ನ ಮೂರ್ತಿಗಳು.' ಇಂಥ ಚರಿತ್ರೆಯ ಪುಟಗಳ ಮೇಲೆ ಹೆಣ್ಣು 'ಹಣ್ಣಾಗಿ, ರಾಜಕಾರಣದ ವ್ಯಂಜನವಾಗಿ ನಾಲಿಗೆಯ ಮೇಲೂ, ಚರಿತ್ರೆಯ ಪುಟಗಳ ಮೇಲೂ ಹೊರಳುತ್ತಿದ್ದಾಳೆ.'

ಇತಿಹಾಸವೆಂದರೆ ನಿನ್ನ ಪ್ರಣಯ ಲೀಲೆಗಳು ನಿನ್ನ ಕಾಡಿದ, ತುಳಿದ, ಕನ್ನೆತನ ಕಳಕೊಂಡ ಅತ್ಯಾಚಾರದ ಸರಮಾಲೆಗಳು. ಚರಿತೆಯ ಕರಾಳ ಸತ್ಯಗಳನ್ನು ಕವಿತೆಯ ಮೂಲಕ ಬಿಚ್ಚಿಡುತ್ತಿದ್ದಾರೆ.

"ದಿಲ್ಲಿಯೆಂಬ ನಾಯಕಸಾನಿಯ ಕೆಂಪು ಮಣ್ಣಿನಲಿ
ನಿರಂತರ ರಕ್ತಪಾತ, ಗಂಡಮಿಂಡರೆಂಬ ಜಗಭಂಡರ
ಬೇಟೆಯೆಂಬ ಕೊಂದು ತಣಿಯುವ ಆಟ
ಈ ಮಾಟಗಾತಿ ಮುದಿ ನಾಯಕಸಾನಿ ಎದೆ ಮುಚ್ಚಿದ ಕಣ್ಣಲ್ಲೇ
ಅರೆಯುತ್ತಿದ್ದಾಳೆ ಮದ್ದು ಅತ್ಯಾಚಾರವೆಂಬ ಗಂಡಾಟಕ್ಕೆ"[೭೫]

ನಿರಂತರವಾಗಿ ನಡೆಯುತ್ತಿದ್ದ ರಕ್ತಪಾತ, ಅತ್ಯಾಚಾರ, ಕೊಲೆ, ಸುಲಿಗೆಗಳು ಇತಿಹಾಸ ಪುಟಗಳಲ್ಲಿ ನಾಟ್ಯವಾಡುತ್ತಿವೆ. ಅಷ್ಟೇ ಅಲ್ಲದೆ ಅದರ ಆಟವನ್ನು ಇವತ್ತಿಗೂ ಕೂಡ ಮುಂದುವರಿಸುತ್ತಿದೆ.

ಬೇಟೆಯನ್ನು ಕೊಂದು ತಣಿಯುವ ಆಟವನ್ನು ದಿಲ್ಲಿಯ ರಾಜಕಾರಣ ಮಾಡುತ್ತಿದೆ. ಸಾವನ್ನು ವಿಜೃಂಭಿಸುವ ಮೂಲಕ ತನ್ನ ಹಿತಾಸಕ್ತಿಗಳನ್ನು ಈಡೇರಿಸಿಕೊಳ್ಳುತ್ತಿದ್ದಾರೆ.

"ಅಂದು ನೀನು ನೀನೆಂಬ ನಾಯಕಸಾನಿ
ಹಸ್ತದ, ಕಮಲದ, ನೇಗಿಲಿನ ಘಾತಕ್ಕೆ ಒಳಗಾಗಿಯೂ
ಮತ್ತೆ ಮತ್ತೆ ಗದ್ದುಗೆಯ ಪೊರೆಯುತ್ತಾ ಹೋದೆ
ಇಂದು ಅಭಯಗಳಿಲ್ಲದ ನಿರ್ಭಯಗಳೆಂಬ
ಕುಸುಮಗಳು ಪಕಳೆ ಕಳೆದು ಉದುರುತ್ತಿವೆ ಮಣ್ಣ ಮಡಿಲಿಗೆ."[೭೬]

ರಾಜಕಾರಣದ ಇತಿಹಾಸದಲ್ಲಿ ಅಮಾಯಕರು ಮತ್ತು ರೈತರು ಬಲಿಪಶುಗಳಾಗುವ ಪರಿಯನ್ನು ಈ ಕವಿತೆ ವ್ಯಕ್ತಪಡಿಸುತ್ತಿದೆ. ಅಧಿಕಾರದ ಆಸೆಗಾಗಿ ಮತ್ತು ಯಾರೋ ಒಬ್ಬರ ಹಿತಾಸಕ್ತಿಗಳ ಈಡೇರಿಕೆಗಾಗಿ ಕೊಲೆಗಳು, ಅತ್ಯಾಚಾರಗಳು, ಗುಂಪುಘರ್ಷಣೆಗಳು ನಡೆದು ಅಮಾಯಕರು ಬಲಿಯಾಗಿ ಇತಿಹಾಸ ಪುಟಗಳನ್ನು ಸೇರಿದ್ದಾರೆ. ರಾಜಕಾರಣ ಇತಿಹಾಸ ಮತ್ತು ವ್ಯವಸ್ಥೆಯನ್ನು ಕುರಿತು ಹೇಳುತ್ತಿದೆ.

ಚರಿತ್ರೆ ಕಾಯಕ ಜೀವಿಗಳಾದ ಜನ ಸಾಮಾನ್ಯರನ್ನು ಉಪೇಕ್ಷಿಸಲ್ಪಟ್ಟಿರುತ್ತದೆ. ಅಂದರೆ ಅಸಹಾಯಕ, ನಿರ್ಗತಿಕರನ್ನು ಚರಿತ್ರೆ ಒಂದು ರೀತಿಯಲ್ಲಿ ಅವಜ್ಞೆ ಮಾಡಿರುತ್ತದೆ. ಬದಲಾಗಿ ಅಲ್ಲಿ ಪ್ರಭಾವಿಗಳಿಗೆ ಆದ್ಯತೆ ಕೊಟ್ಟಿರುತ್ತದೆ. ಇದು ಚರಿತ್ರೆಯ ಪಕ್ಷಪಾತಿ ಧೋರಣೆಗೆ ಉತ್ತಮ ನಿದರ್ಶನ. ಅಂಥ ಒಂದು ಕವಿತೆ ಹೀಗಿದೆ.

"ಚರಿತ್ರೆಯೆಂದರೆ.......
ನೆತ್ತರ ಕುಡಿದು ಹಸಿಯಾದ ಮಣ್ಣು
ಗರಿಕೆ ಮೊಳೆಯದ್ದಕ್ಕೆ ಕಾರಣ ಹೇಳಲಿಲ್ಲ
ಕುಸಿದ ಸಾವಿರ ಮೆನಗಳ
ಅಂತಃಸಾಕ್ಷಿಯಿಲ್ಲದೆ ಅಲುಗಾಡಿದ ಅರಮನೆಗಳ

ಅಡಿ ಹೂತುಹೋದ ಅವಶೇಷಗಳ
ದಾರುಣ ಕತೆಯನ್ನದು ಬೆಳೆಸಲಿಲ್ಲ
ಸತಿಯೋಗದ ವಿಧವೆಯರ ಅರೆಬೆಂದ ಬಾಳಿಗೆ
ಮಾಸ್ತಿಕಲ್ಲು ನಿಲ್ಲಿಸಿರಲಿಲ್ಲ
ಒಂಟಿಹುಲಿ ಹೊಡೆದವಗಲ್ಲದೆ
ಕೋಟಿ ದನ ಕಾದವಗೆ ಸನ್ಮಾನವಿರಲಿಲ್ಲ
ನಿತ್ಯ ನಿಶ್ಶಸ್ತ್ರ ಹೋರಾಡಿದವರ
ಮಸುಕು ನೆನಪೂ ಆ ಪುಟಗಳಿಗಿಲ್ಲ
ಮಗಳೇ,
ಚರಿತ್ರೆಯೆಂದರೇ ಹೀಗೇ
ಮುಳುಗಿ ಹೋದ ಹಡಗಿನ ತೇಲುವ ಹಲಗೆಗಳ
ಕೂಡಿಸಿ ಊಹಿಸುವ ಕೆಲಸ....."[೭೭]

ಚರಿತ್ರೆ ಯಾರ ಪರವಾಗಿರುತ್ತದೆ ಎನ್ನುವ ಪ್ರಶ್ನೆಗೆ ಈ ಕವಿತೆ ಉತ್ತರಿಸುತ್ತ ಹೋಗುತ್ತದೆ. ಜೊತೆಗೆ ಚರಿತ್ರೆಯ ಹಿಂದಿನ ಸಾಂಸ್ಕೃತಿಕ ರಾಜಕಾರಣವನ್ನು ಇಲ್ಲಿ ಕವಯಿತ್ರಿ ಬಿಚ್ಚಿಡುತ್ತಾರೆ. ಚರಿತ್ರೆಯ ಮುಖ್ಯ ಧ್ಯೇಯ ಮತ್ತು ಉದ್ದೇಶವನ್ನು ಅನುಸಂಧಾನಗೊಳ್ಳುವ ಈ ಕವಿತೆ ಇಲ್ಲಿ ಗೈರು ಹಾಜರಿಯಾದ ಅಸಂಖ್ಯೆ ಜನ ಸಾಮಾನ್ಯರ ಬಗ್ಗೆ ಗಮನ ಸೆಳೆಯುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ 'ಒಂಟಿ ಹುಲಿ ಹೊಡೆದವಗಲ್ಲದೆ, ಕೋಟಿ ದನ ಕಾದವಗೆ ಸನ್ಮಾನವಿರಲಿಲ್ಲ' ಎಂಬ ಚರಿತ್ರೆಯ ಪಕ್ಷಪಾತಿ ಧೋರಣೆಯ ಬಗ್ಗೆ ಇಲ್ಲಿ ಪ್ರತಿರೋಧವಿದೆ.

**೪.೩.೧. ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ**

"ಇಲ್ಲ,
ನಿಮ್ಮ ಚರಿತ್ರೆ ಒಳಗೆ
ನಾವು ಬರುವುದಿಲ್ಲ,
ಕಟ್ಟಿಟ್ಟ ಕೆಡುನುಡಿಗೆ.
ಹಾಯೆಂದು ಮೈಮುರಿದು
ಬೇಕಾದರೆ ಮಲಗಿ ಬಿಡುತ್ತೇವೆ
ಮಡಚಿಟ್ಟುಕೊಳ್ಳುತ್ತೇವೆ ನಮ್ಮ ನಾವೇ
ಬೆಂಕಿಪೊಟ್ಟಣಗಳ ಒಳಗೆ
ಮಸ್ಲೀನ್ ಬಟ್ಟೆಯ ಹಾಗೆ
ದೊಂದಿ ಬೆಳಕಿನ ಸುತ್ತ
ಸೆರೆ ಕುಡಿದು ಹಾಡುತ್ತಾ
ಮುಗಿಸಿದ ರಾತ್ರಿಗಳು
ತೋಳು ತೋಳಿಗೆ ಬೆಸೆದಾಗ,
ಇದೇ ಒಡವೆಯೆಂದು ಉಬ್ಬಿ ಹೋಗುವುದಿಲ್ಲ"[೭೮]

ಈಗಾಗಲೇ ರೂಢಿಗತವಾಗಿರುವ ಸಿದ್ಧಮಾದರಿಯ ಪುರುಷ ನಿರ್ಮಿತ ಚರಿತ್ರೆಗೆ ಸವಾಲು ಹಾಕುವ ಈ ಕವಿತೆ, ತನ್ನದೇ ಪ್ರತ್ಯೇಕ ಅಸ್ಮಿತೆಯನ್ನು ರೂಪಿಸಿಕೊಳ್ಳುವ ಹವಣಿಕೆಯಲ್ಲಿದೆ. ಅದಕ್ಕೆ ಅವಳು ತುಟಿ ಬೆಳಕ ಕಿಡಿಯಲ್ಲಿ ಬೆಂಕಿಹೊತ್ತಿಸಿ ಕಾದು ಕುಳಿತಿದ್ದೇವೆ ಎಂದು ಪುರುಷನ ಅಹಂ ಅನ್ನು ಧಿಕ್ಕರಿಸುತ್ತಿದ್ದಾಳೆ. 'ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ' ಎನ್ನುವ ಮಹಿಳೆ ಮತ್ತೊಂದು ಕಡೆ ನೀವು ನಿರ್ಮಿಸಿರುವ ಚರಿತ್ರೆಯಲ್ಲಿ ದಾಖಲಾಗುವುದು ಬೇಡ ಎಂದು ಇತಿಹಾಸವನ್ನು ವ್ಯಂಗ್ಯಮಾಡುತ್ತಿದ್ದಾಳೆ.

"ಕುಸುಮ ಕೋಮಲೆಯೆಂದು ಕುಂಕುಮ
ಹಚ್ಚಿದವರು ತಾಳಿಕಟ್ಟಲು ಕೂಲಿ
ಕರಿಮಣಿಗಾಗಿ ಕಾಸು ಕೇಳಿ ತಮ್ಮಾಸೆಯ
ಚಳಿಗಾಗಿ ಬೆಂಕಿ ಮಾಡಿ ಇರುವ ಹೆಣ್ಣಿನ
ಮೈ ಮುಂದೆ ಕೈಕಾಸಿಕೊಂಡು ಧೀಮಂತಿಕೆ
ಯಲ್ಲಿ ಇಂದಿನ ಮಂದಿ ನಿರ್ಮಿಸುವ
ನಾಳಿನ ಇತಿಹಾಸದಲ್ಲಿ
ದಯವಿಟ್ಟು ದಾಖಲಾಗುವುದು ಬೇಡ"[೬೯]

ಕನ್ನಡ ಸಾಹಿತ್ಯದಲ್ಲಿ ಪುರಾಣ ಮತ್ತು ಚರಿತ್ರೆಯ ವಸ್ತುವಿಷಯಗಳನ್ನು ಆಧರಿಸಿ ಕಾಲಕಾಲಕ್ಕೆ ಪುನರ್‌ಸೃಷ್ಟಿಗಳಾಗಿ ರಚನೆಗೊಂಡಿರುವುದನ್ನು ಕಾಣಬಹುದು. ಹೀಗೆ ಪುನಾರಚನೆಗೊಳ್ಳುವಾಗ ತನ್ನ ಸಮಕಾಲೀನ ಸಂದರ್ಭಕ್ಕೆ ಅನುಗುಣವಾಗಿ ಹಲವು ಬಗೆಯ ಮಾರ್ಪಾಡುಗಳಿಗೆ ಒಳಗಾಗಿರುತ್ತದೆ. ವಸ್ತು ಹಳೆಯದಾದರೂ ಅದನ್ನು ಹೊಸ ಕಾಲಕ್ಕೆ ತಕ್ಕಂತೆ ಸೃಜಿಸುವ ಕಲೆಗಾರಿಕೆ ಬರಹಗಾರರಿಗೆ ಇರಬೇಕಾಗುತ್ತದೆ. ಅಂದರೆ ಪುರಾಣ ಅಥವಾ ಚರಿತ್ರೆಯ ಯಾವುದೋ ಒಂದು ವಸ್ತುವಿಷಯವನ್ನು ಹೊಸದೆಂಬಂತೆ ರಚನೆಯಾಗಿ ತನ್ನ ಜಾಯಮಾನಕ್ಕೆ ತಕ್ಕಂತೆ ಕಟ್ಟುವ ನೈಪುಣ್ಯತೆ ಸೃಜನಶೀಲ ಸಂವೇದನೆಯೇ ಆಗಿದೆ.

**೪.೩.೨. ಹೆಮ್ಮೆ ಪಡುತ್ತೇನೆ ಹೆಣ್ಣಾಗಿ ಹುಟ್ಟಿದ್ದಕ್ಕೆ**

"ಹೆಣ್ಣಾಗಿ ಹುಟ್ಟಿದ್ದಕ್ಕೆ
ಹೆಮ್ಮೆಪಡು
ಅವರಿವರು ಮೂಗು ಮುರಿದದ್ದನ್ನು
ಹುಬ್ಬು ಏರಿಸಿದ್ದನ್ನು
ಸುಣ್ಣದ ಭಟ್ಟಿಯಲ್ಲಿ
ನಿನ್ನ ಅದ್ದಿ ತೆಗೆದದ್ದನ್ನು
ಮರೆತು ಬಿಡು"[೭೦]

ಎಂದು ಹೆಣ್ಣಿನ ಅಸ್ತಿತ್ವವನ್ನು ನಿರಾಕರಿಸಿರುವ ಪುರುಷಾಧಿಕಾರವನ್ನು ಅಮಾನ್ಯಮಾಡುವ ಬಗೆ ಇಲ್ಲಿ ಗಮನಾರ್ಹವಾದುದು. ಹೆಣ್ಣನ್ನು ಎರಡನೆ ದರ್ಜೆಯ ಪ್ರಜೆಯನ್ನಾಗಿ ರೂಪಿಸಿರುವ

ಗಂಡಿನ ಚರಿತ್ರೆಯನ್ನು ಕವಯಿತ್ರಿ ಗಂಭೀರವಾಗಿ ಪರಿಗಣಿಸುತ್ತಿಲ್ಲ. ಅದನ್ನು ಅವಜ್ಞೆ ಮಾಡುವುದೇ ಸರಳ ಮತ್ತು ಸುಲಭ ಮಾರ್ಗ ಎಂದು ಪ್ರತಿರೋಧ, ಆಕ್ರೋಶವನ್ನು ತಾಳದೆ ಕ್ಷಮಿಸಿಬಿಡುವ ಆಲೋಚನೆ ಮಾಡುತ್ತಿದ್ದಾರೆ. ಅಂದರೆ ಇಲ್ಲಿ ಸಂಘರ್ಷಕ್ಕಿಂತ ಸಹಬಾಳ್ವೆ ಮುಖ್ಯ ಎಂದು ಕರೆಕೊಡುತ್ತಿದ್ದಾರೆ.

೭೦ರ ದಶಕದ ಮಹಿಳಾ ಕಾವ್ಯ ಪುರುಷನೇ ನಮಗೆ ನೇರವಾದ ಶತ್ರು ಎಂದು ಭಾವಿಸಿತ್ತು, ಆದರೆ ಸಮಕಾಲೀನ ಮಹಿಳಾ ಕಾವ್ಯ ಆ ಸೀಮಿತ ಚೌಕಟ್ಟನ್ನು ದಾಟಿ ಹೆಣ್ಣಿನ ಮೇಲಾಗುವ ಶೋಷಣೆಯ ಹಲವು ಮುಖಗಳನ್ನು ಹುಡುಕಾಟ ಮಾಡಲೆತ್ನಿಸಿದೆ. ಈ ಕವಿತೆ ಅದಕ್ಕೆ ಉತ್ತಮ ನಿದರ್ಶನ.

"ಸುಟ್ಟ ಬೂದಿಯಗುಡ್ಡೆಯಿಂದ
ಹುಟ್ಟಿ ಬಾ ಫಿನಿಕ್ಸ್ ಪಕ್ಷಿಯ ಹಾಗೆ
ಕೆರೆದುಕೊಂಡಷ್ಟು ಚಿಗಿಯುವ
ಅಪ್ಪನ ಗಡ್ಡದಂತೆ
ಚಿಗಿಯುತ್ತಲೇ
ಕೆರೆದದ್ದನ್ನು, ಕೆರೆದವರನ್ನು
ಮರೆಯುತ್ತಲೇ
ಹೊಸ ಬದುಕಿನ ಬಾಗಿಲ
ತಟ್ಟುತ್ತಲೇ ಇರು.

ನಿತ್ಯ ನಿರಂತರ ಹುಟ್ಟುವ ಅಗಸರ
ಪಿಸುಮಾತಿಗೆ ಕಿವಿಜೋತು
ಬಿಡುವ ರಾಮರನ್ನು
ನೆರೆಮನೆಯ ಕಿಂಡಿಯಲ್ಲಿ
ಕಣ್ಣಿಟ್ಟು
ಹಲವು ಹತ್ತು ಮುಗ್ಧ
ಜೀವಗಳ ಬಲಿ ಬೇಡುವ
ವಧಾಸ್ಥಾನದಂತೆ ನಾಲಗೆಯ
ಹದ ಮಾಡಿಕೊಂಡು ಕುಳಿತ
ಸ್ವಯಂ ಬ್ರಹ್ಮರನ್ನು
ಕ್ಷಮಿಸುತ್ತಲೇ ಮರೆತುಬಿಡು"[೮೧]

ಚರಿತ್ರೆ ಮತ್ತು ಪುರಾಣಗಳನ್ನು ವ್ಯಂಗ್ಯ ಮಾಡುವ, ವಿಡಂಬಿಸುವ ಬಗೆ ಇಲ್ಲಿ ವಿಶಿಷ್ಟವಾಗಿದೆ. ಅಷ್ಟೇ ಅಲ್ಲ, ಈ ಚರಿತ್ರೆ ಮತ್ತು ಪುರಾಣಗಳು ಸೃಷ್ಟಿ ಮಾಡಿರುವ ಎಲ್ಲಾ ಪಾತ್ರಗಳ ಹಿಂದಿರುವ ಪುರುಷ ರಾಜಕಾರಣವನ್ನು ಇಲ್ಲಿ ಗೇಲಿ ಮಾಡಲಾಗುತ್ತಿದೆ. ಲಿಂಗ ಅಸಮಾನತೆಗಳು

ಸೃಷ್ಟಿ ಮಾಡಿರುವ ಶ್ರೇಣೀಕರಣಗಳ ವಂಚನೆಯನ್ನು, ಅದನ್ನು ಕಾಪಾಡುತ್ತಿರುವ ಪುರುಷ ಕೇಂದ್ರಿತ ವ್ಯವಸ್ಥೆಯನ್ನು ಈ ಕವಿತೆ ನಯವಾಗಿ ಪಕ್ಕಕ್ಕೆ ಸರಿಸುತ್ತಿದೆ.

“ಉದ್ದವಿಲ್ಲದ ಈ ಬಾಳಿನ
ಹಾದಿಯಲ್ಲಿ ಗದ್ದಲು ಮಾಡದೆ
ಹಾಕು ಪ್ರೀತಿ, ಪ್ರೇಮದ
ಗಜ್ಜುಗಾರೆಯ
ಅಲ್ಲಿ ಬರೆದು ಬಿಡು
ಶಾಂತಿ ಸಮತೆಯ ವ್ಯಾಖ್ಯಾನ
ಛಲದಕೈದೀವಿಗೆ ಹಿಡಿದು
ನೆಟ್ಟ ದೃಷ್ಟಿಯ ಕೀಳದೆ
ಗುರಿ ಮುಟ್ಟಲು ಸಹಬಾಳ್ವೆಯ
ಪಥದಲ್ಲಿ ಹೊರಟ ನಮ್ಮಗಳ
ಎದೆಯಲ್ಲಿ ಪ್ರೀತಿ ಒರತೆಯಿರುವಾಗ
ಮರೆತು ಬಿಡು ಹೆಣ್ಣಾಗಿರುವುದು”[೮೨]

ಗಂಡಿನ ಜೊತೆ ಯುದ್ಧ ಸಾರಿ ರಣರಂಗಕ್ಕಿಳಿಯುವುದಕ್ಕಿಂತ ಅವನ ಎದೆಯಲ್ಲಿ ಪ್ರೀತಿಯ ಬೀಜ ಭಿತ್ತಿ ಸಹಬಾಳ್ವೆಯ ಪಥದಲ್ಲಿ ನಡೆ ಎಂಬ ಸಮತೆಯ ಸಂದೇಶವನ್ನು ಕೊಡುತ್ತಿದ್ದಾರೆ. ಇದು ಇಬ್ಬರಿಗೂ ಉಪಾಯವಾದ ಮಾರ್ಗ ಎಂಬುದು ಇಲ್ಲಿನ ನಿಲುವು. ಅದಕ್ಕೆ ಹೆಮ್ಮೆಪಡು ಹೆಣ್ಣಾಗಿ ಹುಟ್ಟಿರುವುದಕ್ಕೆ ಎಂದು ಕವಯಿತ್ರಿ ಸಮಾನತೆಯ ಕನಸಿನ ಬೀಜಗಳನ್ನು ಬಿತ್ತುತ್ತಿದ್ದಾರೆ.

### ೪.೪. ಪ್ರತಿರೋಧದ ಸ್ವರೂಪ

ದಲಿತರು ಎಲ್ಲಾ ವಲಯಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಶೋಷಿಸಲ್ಪಡುತ್ತಿದ್ದಾರೆ. ಅವರು ಎಷ್ಟೇ ಸ್ವಾಭಿಮಾನಿಗಳಾಗಿ ಬದುಕಬಯಸಿದರೂ ಈ ವ್ಯವಸ್ಥೆ ಮಾತ್ರ ಅವರನ್ನು ಗುಲಾಮರಂತೆಯೇ ನಡೆಸಿಕೊಳ್ಳುತ್ತಿದೆ. ಇಂಥ ಶೋಷಣೆಯ ಬಹುಮುಖಿ ಆಯಾಮಗಳನ್ನು ಒಂದು ಕವನ ಹೊರಹಾಕುವುದು ಹೀಗೆ;

“ನನ್ನೂರಿನಲ್ಲಿ
ಮಳೆ ಗಾಳಿ ಬೀಸಿಲಿನೊಳಗೆ ರಸಿಕರೂ ಹಾವು ಚೇಳು ಕಳ್ಳರೂ
ಸಲೀಸಾಗಿ ಒಳನುಗ್ಗುವಂಥ ಮನೆಗಳಿವೆ;
ಊರಾಚೆಯ ಹೊಲಗೇರಿಯ ಬೆಚ್ಚನೆ ಗುಡಿಸಲು ಕೆಡವಿ ಅಲ್ಲೇ
ಅಸ್ಪೃಶ್ಯರ ಸ್ಮಾರಕದಂತೆ
ಪ್ರಭುಗಳು ಕಟ್ಟಿಸಿಕೊಟ್ಟದ್ದು ನಮ್ಮ ಊರೊಳಗಿನ ಕನಸ
ಸುಟ್ಟದ್ದು...

ಗೋಡೆ ತಬ್ಬಿದ ಖಾಲಿ ಮಡಕೆಯ ಒಳಗೆ
ತಿಂಗಳಿಗೊಮ್ಮೆ ಬರುವ ಮುಗ್ಗಲು ಅಕ್ಕಿಯ ಕಾದು
ಮಗುವಿನಂತೆ ಮಲಗಿದ ಪಡಿತರ ಚೀಟಿ ಇದೆ;
ಬಡವರು ಹಸಿಯದಿರಲೆಂದು ಪ್ರಭುಗಳು ಕೊಟ್ಟದ್ದು ನಮ್ಮ
ಅನ್ನದ ಕನಸ ಸುಟ್ಟದ್ದು

ನಿದ್ದೆ ನುಂಗಿದ ಯಜಮಾನರ
ನೆಲಗಳಲ್ಲಿ
ಅವ್ವ ಸೀರೆ ಎತ್ತಿ ದುಡಿಯುತ್ತಿದ್ದಾಳೆ
ಅಪ್ಪ ತಲೆಬಾಗಿ ಕಣ್ಣೀರ ಭಾರ
ಹೊರುತ್ತಿದ್ದಾನೆ
ತಂಗಿ ಒಲೆ ಮುಂದೆ ಮೇಣದಂತೆ
ಕರಗುತ್ತಿದ್ದಾಳೆ.

ಇವರು ಸದಾ
ಕುಡಿಯುತ್ತಿದ್ದಾರೆ; ಸಾರಾಯಿಯನ್ನು
ಸಾವನ್ನು"[೮೩]

ಈ ಕವಿತೆ ಇನ್ನೂ ಮುಂದುವರಿದು ಸರಪಳಿಯ ಹಾಗೆ ತಿರುಗುತ್ತಿರುವ ದಲಿತರ ಬದುಕನ್ನು ಹಾಗೂ ಶೋಷಣೆಗೆ ಕೊನೆ ಇಲ್ಲ ಎಂಬ ಮಾರ್ಮಿಕ ಸತ್ಯವನ್ನು ಅಭಿವ್ಯಕ್ತಿಸುತ್ತಿದೆ.

"ಇವರ ಕನಸಾದ ನಾನು
ನನ್ನ ಶಿರಕ್ಕಂಟಿದ ಪುರಾತನ ಗಡಿಯಾರವನ್ನು
ಕಿತ್ತೆಸೆದು
ಹಟ್ಟಿಯ ತುಂಬ ಸುತ್ತುತ್ತಿದ್ದೇನೆ
ಗಡಿಯಾರವಾಗುತ್ತಿದ್ದೇನೆ"[೮೪]

ಅನ್ಯಾಯದ ವಿರುದ್ಧ ಸಿಡಿದೇಳುವ, ಬಂಡಾಯದ ಗುಣವನ್ನು ಈ ಕೆಳಗಿನ ಕವಿತೆಯಲ್ಲಿ ಕಾಣಬಹುದು.

"ನನ್ನೆದೆಯ ಮೊಲೆಯಿಂದ ಹರಿದು ಬಂದಿಹ ಹಾಲು
ಹಾಲಲ್ಲ ಮಗುವೆ ಅದು ನನ್ನೆದೆಯ ನಂಜು
ಅದನುಂಡು ಬೆಳೆಯಬೇಕೆಂದು ನೀ ನಂಜುಂಡನಾಗಿ
ನನ್ನೆದೆಯ ಬೆಂಕಿಗೆ ತಂಪರೆಯಲು."[೮೫]

ತನಗಾದ ಅನ್ಯಾಯ, ದೌರ್ಜನ್ಯದ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳಲು ಮಗನಿಗೆ ಕರೆಕೊಡುವ ತಹತಹ ಈ ಕವಿತೆಯಲ್ಲಿದೆ. ಅದಕ್ಕೆ ನೀನು ನಂಜುಂಡನಾಗಿ ಬಂದು ನನ್ನೆದೆಯಲ್ಲಿ

ಉರಿಯುತ್ತಿರುವ ಬೆಂಕಿಯನ್ನು ನಂದಿಸು ಎಂಬ ಆಪೇಕ್ಷೆ ತಾಯಿಯದ್ದು. ಇಲ್ಲಿ ಉಲ್ಲೇಖಿಸಿರುವ ಕವಿತೆಯ ಲಯ ಮೌಖಿಕ ಪರಂಪರೆಯಲ್ಲಿ ತುಂಬ ಪ್ರಸಿದ್ಧಿಯಾಗಿರುವ 'ಹಾದಿಲಿ ಹೋಗೊರೆ ಹಾಡೆಂದು ಕೇಳ್ಬೇಡಿ, ಹಾಡಲ್ಲ ನನ್ನ ಎದೆಯುರಿ...' ಎಂಬ ಸಾಲುಗಳನ್ನು ನೆನಪಿಗೆ ತರುತ್ತವೆ. ಅದೇ ದಾಟಿಗೆ ಹತ್ತಿರವಾದ ಲಯಗಾರಿಕೆ ಇಲ್ಲಿದೆ.

ಒಪ್ಪಿತ ಸತ್ಯಗಳನ್ನು ಪ್ರಶ್ನಿಸುವ ಬಗೆ ಈ ಕವಿತೆಯಲ್ಲಿದೆ.

"ಲೋಕ, ಯಾವುದು ಹೌದೆಂದಿದೆ,
ಅದು ಅಲ್ಲವೆನ್ನುವುದು ಕವಿತೆ
ಯಾವುದು ಅಲ್ಲವೆಂದು ಹೇಳಿದೆಯೋ
ಅದನ್ನು ಹೌದೆನ್ನುವುದು ಕವಿತೆ"[೮೬]

ಇದು ಸಿದ್ಧಮಾದರಿಯ ಕಾವ್ಯತತ್ವವನ್ನು ಮುರಿಯುವ ಪ್ರಯತ್ನ ಮಾಡುತ್ತಿದೆ. 'ತೀರದ ಬಯಕೆ', 'ಮುನಿಯದಿರಿ ನಾರಿ', 'ಯಾಕೆ ವಿಚಲಿತರಾಗುತ್ತೀರಿ', 'ಎಷ್ಟೊಂದು ವೇಷ ಎಷ್ಟೊಂದು ಮೋಸ', 'ಹೀಗೆಂದವರು' ಮುಂತಾದ ಕವಿತೆಗಳು ಪುರಾಣ ಮತ್ತು ಚರಿತ್ರೆಗಳಲ್ಲಿ ಈಗಾಗಲೇ ಬಿಂಬಿಸಲ್ಪಟ್ಟಿರುವ ಸಿದ್ಧಮಾದರಿಯ ಚೌಕಟ್ಟನ್ನು ಮರುವಿಮರ್ಶೆಗೆ ಒಳಪಡಿಸುವುದನ್ನು ಕಾಣಬಹುದು.

"ಸೂರ್ಯ ಚಂದ್ರರ ಸಾಕ್ಷಿಗಿಟ್ಟು
ಜಗದ ಜರ ಎದುರಿನಲ್ಲಿ
ಕೈಹಿಡಿದು ಆತ್ಮಸಾಕ್ಷಿಯ ಕೊಂದು
ನಡೆದವನ ಹೆಜ್ಜೆ ಗುರುತಿಲ್ಲ
ಮರಳೆ ನೆಲದ ಮೇಲೆ
ಮಲ್ಲಿಯೊಳಗಿನ ಅಕ್ಕ
ಅಕ್ಕನೊಳಗಿನ ಮಲ್ಲಿಗೆ
ಮಲ್ಲಿಗೆ ಅಕ್ಕನೊಳಗಿನ ನಾವುಗಳು
ಹುಡುಕುತ್ತಿರುವೆವು ಕೈಗೆ ಸಿಗದ ಲೋಕ ನ್ಯಾಯವ"[೮೭]

ಅಕ್ಕನ ವ್ಯಕ್ತಿತ್ವವನ್ನು ಕವಯಿತ್ರಿ ಇಲ್ಲಿ ನಿಕಶಕ್ಕೆ ಒಡ್ಡಿದ್ದಾರೆ. ಭಾವನಾತ್ಮಕ ಜಗತ್ತಿನಾಚೆಗಿರುವ ಹೆಣ್ಣಿನ ನೋವು–ನಲಿವು, ಸುಖ-ದುಃಖಗಳನ್ನು ವಾಸ್ತವದ ನೆಲೆಗೆ ಅಕ್ಕನನ್ನು ಕರೆಯುವ ಬಗೆ ವಿಶಿಷ್ಟವಾದುದು.

ಸಬಿತಾ ಬನ್ನಾಡಿ ಅವರ 'ಹೆಸರಿಲ್ಲದ ಕಾವ್ಯ' ಕವಿತೆ ಹೆಣ್ಣಿನ ಅವ್ಯಕ್ತ ನೋವು, ವೇದನೆ, ಸಂಕಟಗಳನ್ನು ಕಾವ್ಯತತ್ವಕ್ಕೆ ಅನ್ವಯಿಸಿ ಹೇಳುವ ಕ್ರಮ ತುಂಬ ಅಪರೂಪದ್ದು.

"ಮುಖದ ಗೆರೆಗಳೊಂದೂ
ಇಣಿಕಿ ನೋಡದ ಹಾಗೆ

ಕೈ ಚಳಕದ ಮೇಕಪ್ಪಿನಲ್ಲಿ
ನಗುವ ಸ್ಟಿಲ್ ಹೊತ್ತವಳು
ಹೇಳಿದಳು.
ಇಲ್ಲ ಕಣೇ ಬರೆಯುತ್ತಲೇ
ಇದ್ದೇನೆ ಕೊನೆಯಿರದ ಒಂದೇ ಕಾವ್ಯ
ಇಪ್ಪತ್ತು ವರುಷಗಳಿಂದಲೂ
ಅಕ್ಕರದ ತಪ್ಪುಗಳ
ತಿದ್ದುತ್ತಲೇ ಇರುವೆ
ವಟ್ರಸುಳಿ ದೀರ್ಘ ಒತ್ತಿ
ತಿದ್ದಿದಷ್ಟೂ ತಪ್ಪು
ಹೆಚ್ಚುತ್ತಲೇ ಇದೆ
ತಪ್ಪದಂತೆ
ಅಪವಾದದ ಹೊರೆ”೮೮

ಮನುಷ್ಯ ವೈಜ್ಞಾನಿಕ, ವೈಚಾರಿಕವಾಗಿ ಎಷ್ಟೇ ಬುದ್ಧಿವಂತನಾದರೂ ಹೆಣ್ಣನ್ನು ನಡೆಸಿಕೊಳ್ಳುವ ಅವನ ದೃಷ್ಟಿಕೋನ ಬದಲಾಗಿಲ್ಲ ಎಂಬ ಅಳಲು ಇಲ್ಲಿನದು. ಹೀಗೆ ಅಪವಾದಗಳನ್ನು ಹೊರುವುದು ಹೆಣ್ಣಿಗೆ ಹೊಸದಲ್ಲ; ಪುರಾಣ, ಚರಿತ್ರೆಗಳ ಕಾಲದಲ್ಲೂ ಇತ್ತು.

“ನಿಜ ಕಣೆ
ಅವರೆಲ್ಲ ಇಪ್ಪತ್ತು ವರುಷದಿಂದ
ಬರೆದರು ಹಲವು ಕವಿತೆ
ನನ್ನ ಹೆಸರಿಲ್ಲದ ಕಾವ್ಯದ
ತಿರುಗಣಿಯ ಸುಳಿಯಲ್ಲಿ
ಕವಿತೆ ಬದುಕಿದರೂ
ಕವಿ ಬದುಕಲಿಲ್ಲ ಕಣೆ”೮೯

ತನ್ನ ಅಸ್ಮಿತೆಯನ್ನು, ವಿಳಾಸವನ್ನು ಇಲ್ಲವಾಗಿಸಿದ ವ್ಯವಸ್ಥೆ ಅವಳಲ್ಲಿನ ಕವಿಯನ್ನು ಬದುಕಿಸದೇ ಹೋಯಿತು. ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ದಲಿತರ ಮೇಲಾಗುವ ಶೋಷಣೆಗಳಲ್ಲಿ ತುಂಬಾ ಕ್ರೂರ ಮತ್ತು ಅಮಾನುಷವಾದ್ದು ಸಾಮಾಜಿಕ ಮತ್ತು ಲೈಂಗಿಕ ಶೋಷಣೆ. ಅನುಸೂಯ ಕಾಂಬಳೆಯವರ ‘ಗುಡಿಯಲ್ಲಿನ ಕಲ್ಲಿನಲಿ ದೇವರಿಲ್ಲ’ ಎಂಬ ಕವನ ಈ ಎರಡೂ ಮುಖಗಳನ್ನೂ ನಿರೂಪಿಸುತ್ತಿದೆ.

“ಏನು ಗೌಡರೇ!
ಹೇಳಿ ಕಳಿಸಿದಿರಿ!
ನಿಮ್ಮ ಹಣಮಪ್ಪನ ಓಕಳಿಗೆ

ನಮ್ಮ ಮೈನೆರೆದ ಹುಡುಗಿಯರೇ ಬೇಕಂತೆ
ನಿಮ್ಮ ಮಗಳು ಸಾವಿತ್ರಿ ಮೈ ನೆರೆದಿರುವಳಲ್ಲ?
ನಿಮ್ಮ ಸೊಸೆ ಪಾರ್ವತಿ ಮೊನ್ನೆಯೇ ಬಂದಿರುವಳಲ್ಲ
ಕಪ್ಪು ಮೈಯ ನಮಗಿಂತ
ಕೆಂಪು ಮೈಯ ನಿಮ್ಮ ಹೆಣ್ಣುಗಳೇ ಚಂದ!

ಲಂಗದ ಮೇಲೆ ಬಿಡು ಹೊರಗೊಮ್ಮೆ
ಬಿರಿದ ಕಮಲಗಳಿಗೆ
ಸೂರ್ಯ ಚಂದ್ರ ಮುಖದರ್ಶನವಾಗಲಿ
ಕಾಲ ಚಕ್ರ ಉರುಳಿದೆ
ಮೊಲೆ ತೊಡೆಗಳನ್ನು ತೋಯಿಸಿ
ತೋರಿಸಬೇಕಾದ ಯುಗವಲ್ಲ"[೧೦]

ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಬೇರೆ ಬೇರೆ ವಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರ ಮೇಲೆ ಅತ್ಯಾಚಾರ, ಶೋಷಣೆಗಳು ನಡೆಯುತ್ತಿರುತ್ತವೆ. ನಗರಗಳಲ್ಲಿ ಬಂಡವಾಳಶಾಹಿ ಮತ್ತು ಅಧಿಕಾರಿ ವರ್ಗಗಳು ಮಹಿಳೆಯರ ಮೇಲೆ ದೌರ್ಜನ್ಯ ಎಸಗಿದರೆ, ಗ್ರಾಮೀಣ ಪ್ರದೇಶಗಳಲ್ಲಿ ಜಮೀನ್ದಾರಿ ಹಾಗೂ ಮೇಲ್ಜಾತಿ ವರ್ಗಗಳು ದಲಿತ, ಕೂಲಿಕಾರ್ಮಿಕ ಮಹಿಳೆಯರ ಮೇಲೆ ದೌರ್ಜನ್ಯ ಎಸಗುವುದನ್ನು ಕಾಣಬಹುದು. ಕೃಷಿ, ಕೂಲಿಕಾರ್ಮಿಕ ಮಹಿಳೆಯರು, ಕಟ್ಟಡದ ಕೆಲಸಗಾರರು, ಗಾರ್ಮೆಂಟ್ ವಲಯದ ಮಹಿಳೆಯರು ಹೀಗೆ ಬೇರೆ ಬೇರೆ ವಲಯಗಳಲ್ಲಿ ದುಡಿಯುವ ಮಹಿಳೆಯರ ಮೇಲೆ ನಡೆಯುವ ಶೋಷಣೆಗಳು ಊಹೆಗೆ ನಿಲುಕಲಾರದಷ್ಟು ವೇಗದಲ್ಲಿ ಈ ಸಮಾಜದಲ್ಲಿ ಘಟಿಸುತ್ತಲಿವೆ.

ಅನುಸೂಯ ಕಾಂಬಳೆಯವರು ಊಳಿಗಮಾನ್ಯ ವ್ಯವಸ್ಥೆಯ ಕರಾಳವಾದ ಕಾಮುಕ ಮುಖವನ್ನು ಚಿತ್ರಿಸುತ್ತಿದೆ. ಜಮೀನ್ದಾರನಾದ ಹಣಮಂತಗೌಡ ಊರಿನ ದಲಿತ ಮತ್ತು ತಳಸಮುದಾಯದ ಹೆಣ್ಣು ಮಕ್ಕಳನ್ನು ಲೈಂಗಿಕವಾಗಿ ಶೋಷಿಸುವ ಚಿತ್ರಣ ನಾಟಕೀಯವಾಗಿ ಈ ಕವಿತೆಯಲ್ಲಿ ಒಡಮೂಡಿದೆ. ಲೈಂಗಿಕವಾಗಿ ಶೋಷಿಸುವ ಪುರುಷ ವ್ಯವಸ್ಥೆಯ ವಿರುದ್ಧ ಕವಿತೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಿದ್ದರೂ ಪ್ರತಿಕಾರವನ್ನು ತೀರಿಸಿಕೊಳ್ಳುವ ಬಗೆ ಹಾಗೂ ಅದನ್ನು ಕಾವ್ಯವಾಗಿಸುವಲ್ಲಿ ಎಡವಿದೆ. ಇದು ಈ ಕವಿತೆಯ ನ್ಯೂನ್ಯತೆ. ಈ ಕೊರತೆಯನ್ನು ಕವಯಿತ್ರಿ ನೀಗಿಸಿಕೊಂಡಿದ್ದರೆ ಈ ಕವಿತೆಗೆ ಇನ್ನಷ್ಟು ಸೃಜನಶೀಲಶಕ್ತಿ ಲಭ್ಯವಾಗುತ್ತಿತ್ತು.

**ಕೊನೆಟಿಪ್ಪಣಿಗಳು**

೧. ಚಂದ್ರಪೂಜಾರಿ, **ಜಾಗತೀಕರಣ ಸಂದರ್ಭದಲ್ಲಿ ಸಾಮಾಜಿಕ ಚಳುವಳಿಗಳು,** ಕನ್ನಡ ಅಧ್ಯಯನ, ಪುಟ ೩೪.

೨. ಜಿ. ರಾಜಶೇಖರ, **ಜಾಗತೀಕರಣವೆಂಬ ಅಮೇರಿಕಾದ ಯಜಮಾನಿಕೆ,** ಜಾಗತೀಕರಣ ಒಂದು ಸಮಗ್ರ ಮಂಥನ, ಪುಟ ೧೩೦.

೩. ಕವಿತಾ ರೈ, **ಮಹಿಳಾ ಅಧ್ಯಯನ,** ಪುಟ ೯೨.

೪. ರಾಜೇಂದ್ರ ಚೆನ್ನಿ, **ಅಸಮಗ್ರ,** ಪುಟ ೨೦೪.

೫. ಅದೇ, ಪುಟ ೨೦೬.

೬. ಅದೇ, ಪುಟ ೨೦೯.

೭. ಅದೇ, ಪುಟ ೨೧೪.

೮. ಆನಂದ್ ತೇಲ್ತುಂಬ್ಡೆ, **ಜಾಗತೀಕರಣ ಮತ್ತು ದಲಿತರು,** ಪುಟ ೨೪.

೯. ಅದೇ, ಪುಟ ೨೭

೧೦. ರಾಜೇಂದ್ರ ಚೆನ್ನಿ, **ನಡುಹಗಲಿನಲ್ಲಿ ಕಂದೀಲುಗಳು,** ಪುಟ ೧೪೨.

೧೧. ನೋಮ್ ಚಾಮ್‌ಸ್ಕಿ, **ಮನುಕುಲದ ಮಾತುಗಾರ,** ಪುಟ ೨೬೬.

೧೨. ಯು.ಆರ್. ಅನಂತಮೂರ್ತಿ, **ಇಲ್ಲಿಯವರೆಗಿನ ಕವಿತೆಗಳು,** ಪುಟ ೧೬೩.

೧೩. ಅದೇ.

೧೪. ಎಚ್. ಎಸ್. ಶಿವಪ್ರಕಾಶ್, **ಕವಿತೆ: ಇಂದಿನ ತನಕ,** ಪುಟ ೪೨೮.

೧೫. ಮೂಡ್ನಾಕೂಡು ಚಿನ್ನಸ್ವಾಮಿ, **ನಾನೊಂದು ಮರವಾಗಿದ್ದರೆ,** ಪುಟ ೨೦.

೧೬. ರಾಮಲಿಂಗಪ್ಪ ಟಿ ಬೇಗೂರು, **ಕವಿತೆ: ೨೦೦೮,** ಪುಟ ೩೨.

೧೭. **ಸಾಪ್ತಾಹಿಕ ಪುರವಣಿ,** ೨೪ ಜುಲೈ ೨೦೧೧.

೧೮. ಆರ್. ಮಾನಸಯ್ಯ, **ರಕ್ತದ ರಂಗೋಲಿ,** ಪುಟ ೨.

೧೯. ಅದೇ, ಪುಟ ೧.

೨೦. ಅದೇ.

೨೧. ಮಲ್ಲಿಕಾರ್ಜುನ ಗೌಡ ತೂಲಹಳ್ಳಿ, **ಶರೀಫನ ಬೊಗಸೆ,** ಪುಟ ೩.

೨೨. ಎಚ್. ಎಸ್. ಶಿವಪ್ರಕಾಶ್, **ಮಬ್ಬಿನ ಹಾಗೆ ಕಣಿವೆಯಾಸಿ,** ಪುಟ ೧೭.

೨೩. ಅದೇ, ಪುಟ ೧೭, ೧೮.

೨೪. ಅದೇ.

೨೫. ಎಮ್.ಎಸ್. ಸಚ್ಚಿದಾನಂದಮೂರ್ತಿ, **ಮಬ್ಬಿನ ಹಾಗೆ ಕಣಿವೆಯಾಸಿ,** ಮುನ್ನುಡಿ, ಪುಟ ೬.

೨೬. ಎನ್.ಕೆ. ಹನುಮಂತಯ್ಯ, **ಚಿತ್ರದ ಬೆನ್ನು,** ಪುಟ ೩.

೨೭. ಅದೇ, ಪುಟ ೪.

೨೮. ಎಚ್.ಡಿ. ಉಮಾಶಂಕರ, **ದಲಿತ ಕಾವ್ಯ: ಕಾವ್ಯ ಮತ್ತು ಸಮಾಜ,** ಪುಟ ೧೩೨.

೨೯. ಎನ್. ಕೆ. ಹನುಮಂತಯ್ಯ, **ಚಿತ್ರದ ಬೆನ್ನು,** ಪುಟ ೩, ೪.

೩೦. ನಟರಾಜ್ ಹುಳಿಯಾರ್, **ಚಿತ್ರದ ಬೆನ್ನು,** ಮುನ್ನುಡಿ, ಪುಟ Xii.

೩೧. ಎಚ್. ಲಕ್ಷ್ಮೀನಾರಾಯಣ ಸ್ವಾಮಿ, **ಗೆಳತಿ ಮತ್ತೊಮ್ಮೆ ಯೋಚಿಸು,** ಪುಟ ೧೮.

೩೨. ಅದೇ.

೩೩. ಅದೇ, ಪುಟ ೩೧.

೩೪. ಅದೇ.

೩೫. ಜಿ.ಪಿ. ಬಸವರಾಜು, **ಭೂಮಿಗಂಧ,** ಪುಟ ೬೯.

೩೬. ಅದೇ.

೩೭. ಅದೇ.

೩೮. ಎನ್.ಕೆ. ಹನುಮಂತಯ್ಯ, **ಹೊಸತಲೆಮಾರಿನ ತಲ್ಲಣ,** ಪುಟ ೬.

೩೯. ಮ.ನ. ಜವರಯ್ಯ, **ಕವಿತೆ: ೨೦೦೮,** ಪುಟ ೧೧೮.

೪೦. ಅಕಬರ ಅಲಿ, **ಅಕಬರ ಅಲಿ ಸಮಗ್ರ ಕಾವ್ಯ,** ಪುಟ ೩೬೯.

೪೧. ಅದೇ, ಪುಟ ೩೭೧.

೪೨. ಮಾಧವ ಕುಲಕರ್ಣಿ, **ಅಕಬರ ಅಲಿ ಸಮಗ್ರ ಕಾವ್ಯ,** ಮುನ್ನುಡಿ.

೪೩. ವಿಕ್ರಮ ವಿಸಾಜಿ, **ಪರಿಮಳದ ಸುಗ್ಗಿ,** ಪುಟ ೧೪೯.

೪೪. ಬಿ.ಎ. ಸನದಿ, **ಪರಿಮಳದ ಸುಗ್ಗಿ,** ಪುಟ ೬೭.

೪೫. ಪ್ರತಿಭಾ ನಂದಕುಮಾರ್, **ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು,** ಪುಟ ೯೮.

೪೬. ಅದೇ, ೧೦೦, ೧೦೧.

೪೭. ಜಿ.ಎಸ್. ಶಿವರುದ್ರಪ್ಪ, **ಅಗ್ನಿಪರ್ವ,** ಪುಟ ೨೦.

೪೮. ಅದೇ, ಪುಟ ೧.

೪೯. ಆರಿಫ್ ರಾಜಾ, **ಕವಿತೆ: ೨೦೧೧,** ಪುಟ ೬.

೫೦. ಚಂದ್ರಶೇಖರ ತಾಳ್ಯ, **ಎಲ್ಲಿ ನವಿಲು ಹೇಳಿರೇ,** ಪುಟ ೫೬.

೫೧. ಅದೇ, ಪುಟ ೫೭.

೫೨. ಕೆ. ಷರೀಫಾ, **ಕವಿತೆ: ೨೦೦೮,** ಪುಟ ೧೫.

೫೩. ವೈದೇಹಿ, **ಹೂವ ಕಟ್ಟುವ ಕಾಯಕ,** ಪುಟ ೩೩.

೫೪. ರವಿಕುಮಾರ್ ಅಜ್ಜೀಪುರ, **ಪರಿಮಳದ ಸುಗ್ಗಿ,** ಪುಟ ೯.

೫೫. ಎಂ.ಡಿ. ಒಕ್ಕುಂದ, **ಬೆಳಕಿನ ಹಾಡು,** ಪುಟ ೧೫.

೫೬. ಅರ್ಜುನ ಗೋಳಸಂಗಿ, **ಬೆಳಕಿನ ಹಾಡು,** ಪುಟ ೧೫.

೫೭. ಹಜರೇಸಾಬ ಬಿ. ನದಾಫ, **ಬೆಳಕಿನ ಹಾಡು,** ಪುಟ ೧೯.

೫೮. ಚಿದಂಬರ ಪಿ. ನಿಂಬರಗಿ, ಅದೇ ಪುಟ ೨೧.

೫೯. ಎಮ್.ಡಿ. ಗೋಗೇರಿ, **ಬೆಳಕಿನ ಹಾಡು,** ಪುಟ ೨೫.

೬೦. ಅಕಬರ ಅಲಿ, **ಅಕಬರ ಅಲಿ ಸಮಗ್ರ ಕಾವ್ಯ,** ಪುಟ ೩೭೩.

೬೧. ಬಿ. ಪೀರ್‌ಭಾಷ, **ಅಕ್ಕ ಸೀತಾ ನಿನ್ನಂತೆ ನಾನು ಶಂಕಿತ,** ಪುಟ ೧೧.

೬೨. ಬಿ. ಪೀರ್‌ಭಾಷ, **ಪರಿಮಳದ ಸುಗ್ಗಿ,** ಪುಟ ೨೯.

೬೩. ಆರಿಫ್ ರಾಜಾ, **ಬೆಂಕಿಗೆ ತೊಡಿಸಿದ ಬಟ್ಟೆ,** ಪುಟ ೩೪.

೬೪. ರಾಜೇಂದ್ರ ಚೆನ್ನಿ, **ನಡುಹಗಲಿನಲ್ಲಿ ಕಂದೀಲುಗಳು,** ಪುಟ ४೯.

೬೫. ಯು.ಆರ್. ಅನಂತಮೂರ್ತಿ, **ಇಲ್ಲಿಯವರೆಗಿನ ಕವಿತೆಗಳು,** ಪುಟ ೧೩೧.

೬೬. ಮೂಡ್ನಾಕೂಡು ಚಿನ್ನಸ್ವಾಮಿ, **ನಾನೊಂದು ಮರವಾಗಿದ್ದರೆ,** ಪುಟ ೫೨.

೬೭. ಅದೇ.

೬೮. ರೂಪ ಹಾಸನ, **ಕಡಲಿಗೆಷ್ಟೊಂದು ಬಾಗಿಲು,** ಪುಟ ೫೫.

೬೯. ಅದೇ.

೭೦. ಅದೇ.

೭೧. ಕೆ. ಷರೀಫಾ, **ಪಾಂಚಾಲಿ,** ಪುಟ ೧೦.

೭೨. ಅದೇ, ಪುಟ ೨೧.

೭೩. ಅದೇ.

೭೪. ಎಚ್.ಎಲ್. ಪುಷ್ಪ, **ದಿಲ್ಲಿಯೆಂಬ ನಾಯಕಸಾನಿಗೆ, ಸಾಪ್ತಾಹಿಕ ಪುರವಣಿ,** ೧೨ ಮೇ ೨೦೧೩.

೭೫. ಅದೇ.

೭೬. ಅದೇ.

೭೭. ಎಚ್.ಎಸ್. ಅನುಪಮ, **ಸಹಗಮನ,** ಪುಟ ೨೪, ೨೫.

೭೮. ಪಿ. ಚಂದ್ರಿಕಾ, **ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ, ಸುವರ್ಣ ಕಾವ್ಯ,** ಪುಟ ೫೧೬.

೭೯. ಎಮ್.ಎಸ್. ವೇದಾ, ಹೊಸ ಶತಮಾನದ ಕಾವ್ಯ, ಪುಟ ೨೭೮.

೮೦. ಮಲ್ಲಿಕಾ ಘಂಟಿ, **ಹೊಸ ಶತಮಾನದ ಕಾವ್ಯ,** ಪುಟ ೨೩೫.

೮೧. ಅದೇ.

೮೨. ಅದೇ.

೮೩. ಎನ್.ಕೆ. ಹನುಮಂತಯ್ಯ, **ಚಿತ್ರದ ಬೆನ್ನು**, ಪುಟ ೩೬

೮೪. ಅದೇ.

೮೫. ಮಲ್ಲಿಕಾ ಘಂಟಿ, **ರೊಟ್ಟಿ ಮತ್ತು ಹುಡುಗಿ**, ಪುಟ ೨೮

೮೬. ಅದೇ, ಪುಟ ೫೫

೮೭. ಮಲ್ಲಿಕಾ ಘಂಟಿ, **ಬೆಲ್ಲದಚ್ಚು ಮತ್ತು ಇರುವೆ ದಂಡು**, ಪುಟ ೪೮

೮೮. ಸಬಿತಾ ಬನ್ನಾಡಿ, **ಹೆಸರಿಲ್ಲದ ಕಾವ್ಯ, ಸುವರ್ಣ ಕಾವ್ಯ**, ಪುಟ ೯೯

೮೯. ಅದೇ.

೯೦. ಅನುಸೂಯ ಕಾಂಬಳೆ, **ಮುಳ್ಳುಕಂಟಿಯ ನಡುವೆ**, ಪುಟ ೨೫



ಅಧ್ಯಾಯ : ಐದು

# ಸಮಕಾಲೀನ ಕನ್ನಡ ಕಾವ್ಯ: ಬಹುತ್ವದ ಮಾದರಿಗಳು

೫.೧. ಆಧುನಿಕ ವಚನಗಳು

೫.೨. ಗಜಲ್‌ಗಳು

೫.೩. ಹೋರಾಟದ ಹಾಡುಗಳು

೫.೩.೧. ಹೋರಾಟದ ಹಾಡುಗಳು:
ಕಾವ್ಯ ಮತ್ತು ಮೀಮಾಂಸೆಯ ಚರ್ಚೆ

ಅಧ್ಯಾಯ : ಐದು

# ಸಮಕಾಲೀನ ಕನ್ನಡ ಕಾವ್ಯ: ಬಹುತ್ವದ ಮಾದರಿಗಳು

ಸಮಕಾಲೀನ ಒತ್ತಡದ ಬದುಕಿನಲ್ಲಿ ಓದುಗರ ಅವಶ್ಯಕತೆ ಮತ್ತು ಅನುಕೂಲಕ್ಕೆ ತಕ್ಕಂತೆ ಸಾಹಿತ್ಯದ ರಚನಾವಿನ್ಯಾಸಗಳು ಕೂಡ ಬದಲಾಗುತ್ತಿವೆ. ತಂತ್ರಜ್ಞಾನ ಮತ್ತು ಸಾಮಾಜಿಕ ಮಾಧ್ಯಮಗಳ ಪ್ರಭಾವವು ಇತ್ತೀಚಿನ ಸಾಹಿತ್ಯದ ಮೇಲೆ ದಟ್ಟವಾಗಿ ಪರಿಣಾಮ ಬೀರುತ್ತಿದೆ.

ಇದಕ್ಕೆ ತಕ್ಕಂತೆ ಸಂವಹನ ಮಾಧ್ಯಮಗಳು ಸಹ ಬರಹಗಾರರಿಗೆ ಅಘೋಷಿತ ನಿರ್ಬಂಧಗಳನ್ನು ಏರಿವೆ ಅನಿಸುತ್ತದೆ. ಸಾಹಿತ್ಯ ಪತ್ರಿಕೆ ಹಾಗೂ ಸಾಮಾಜಿಕ ಜಾಲತಾಣಗಳಲ್ಲಿ ಬರೆಯುವ ಬರಹಗಾರರು ಪುಟಗಳ ಮಿತಿಯಲ್ಲಿ ಬರೆಯಬೇಕಾದ ಕೆಲವೇ ಒತ್ತಡದಲ್ಲಿ ಸಿಲುಕಿದ್ದಾರೆ. ಬರಹಗಾರರ ಇಂಥ ಬೌದ್ಧಿಕ ಸಂಕಟಗಳು ಇತ್ತೀಚಿನ ಸಾಹಿತ್ಯರಚನೆ, ವಿನ್ಯಾಸ ಹಾಗೂ ಆಶಯಗಳ ಬದಲಾವಣೆಗೆ ಎಡೆ ಮಾಡಿಕೊಟ್ಟಿವೆ.

ಈ ಹಿನ್ನೆಲೆಯಲ್ಲಿ ಕವಿಗಳು ಓದುಗರ ಅನುಕೂಲಕ್ಕೋಸ್ಕರ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಮಹಾಕಾವ್ಯ ಮತ್ತು ಬೃಹತ್ ಕಾದಂಬರಿಗಳನ್ನು ಬರೆಯುತ್ತಿದ್ದ ಕಾಲಕ್ಕೂ ಹಾಯ್ಕುಗಳು, ಹನಿಗವಿತೆಗಳು, ಚುಟುಕುಗಳು, ಗಜಲ್, ದ್ವಿಪದಿ, ಚೌಪದಿಗಳನ್ನು ರಚಿಸುತ್ತಿರುವ ಪ್ರಸ್ತುತ ಸಂದರ್ಭದ ರಚನಾವಿನ್ಯಾಸಗಳ ನಡುವೆ ವ್ಯತ್ಯಾಸಗಳಾಗಿವೆ. ಅಂದರೆ ಕಾಲದ ಒತ್ತಡಗಳ ನಡುವಿನ ಸಂದರ್ಭದಲ್ಲಿ ಆಗಿರುವ ಪಲ್ಲಟಗಳನ್ನು ರಚನಾವಿನ್ಯಾಸಗಳ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಅವಲೋಕಿಸಿದರೆ ಮೇಲಿನ ಮಾತುಗಳಿಗೆ ಉತ್ತರ ದೊರೆಯುತ್ತದೆ.

ಈಗ ರಚನೆಯಾಗುತ್ತಿರುವ ಗಜಲ್, ಆಧುನಿಕ ವಚನಗಳು, ದ್ವಿಪದಿ, ಚೌಪದಿ, ಹಾಯ್ಕು, ಚುಟುಕು, ಹನಿಗವಿತೆಗಳು ಹಾಗೂ ಹೋರಾಟದ ಹಾಡುಗಳು ಕಾವ್ಯದ ಇತರ ಪ್ರಕಾರಗಳೆಂದು ಕರೆಯಲಾಗುತ್ತಿದ್ದರೂ ಇವುಗಳ ಬಗ್ಗೆ ಗಂಭೀರವಾಗಿ ಅಧ್ಯಯನಗಳಾಗಿಲ್ಲ. ಇದಕ್ಕೆ ಅವುಗಳ ರಚನಾವಿನ್ಯಾಸಗಳಲ್ಲಿರುವ ಸರಳ ಮತ್ತು ತೆಳುವಾದ ಕಾವ್ಯಾತ್ಮಕ ಅಂಶಗಳು ಕಾರಣವಾಗಿರ ಬಹುದಾದರೂ ಕೆಲವು ಪ್ರಕಾರಗಳಲ್ಲಿ ಕಾವ್ಯದಲ್ಲಿರುವಷ್ಟೇ ಸತ್ವಯುತವಾದ ಲಯ, ಗೇಯತೆ ಹಾಗೂ ಕಾವ್ಯಬಂಧಗಳಿವೆ ಎಂಬ ಮಾತನ್ನು ಅಲ್ಲಗಳೆಯಲಾಗದು.

ದೋ-ಅಬ್ ಪ್ರದೇಶ ಎಂದು ಕರೆಯಲ್ಪಡುವ ಹೈದರಾಬಾದ್ ಪ್ರಾಂತ್ಯದಲ್ಲಿ ಬಂಡಾಯ ಕಾವ್ಯ, ಹೋರಾಟದ ಹಾಡುಗಳು, ಗಜಲ್‌ಗಳು, ದ್ವಪದಿ, ಚೌಪದಿ, ಶಾಯಿರಿ ಇಂಥ 'ಹಾಡುಗಬ್ಬ'ದ ದೇಸಿ ರಚನೆಗಳೇ ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಳ್ಳಲು ಪ್ರಮುಖ ಕಾರಣವನ್ನು ಈ ರೀತಿ ಗುರುತಿಸಬಹುದು.

"ಇಲ್ಲಿ 'ಭಾವಗೀತೆಗಳು ನಿರೀಕ್ಷಿಸಿದಂತೆ ರಚನೆಯಾಗಲಿಲ್ಲ. ಇದಕ್ಕೆ ಬಹುಮುಖ್ಯವಾದ ಕಾರಣ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಬರಗಾಲ, ನೆರೆ, ರೈತರ ಆತ್ಮಹತ್ಯೆ, ಬಿಸಿಲ ಬದುಕು, ಶೋಷಣೆಗಳೇ ಆಗಿವೆ. ಹೀಗಾಗಿ ಭಾವಗೀತೆಗಳ ಬದಲಿಗೆ ಇಲ್ಲಿ ನಿಗಿನಿಗಿ ಕೆಂಡವನ್ನು ಉಡಿಯಲ್ಲಿ ಕಟ್ಟಿಕೊಂಡ 'ಬಂಡಾಯ ಕಾವ್ಯ' ಹೊಮ್ಮಿ ಜೀವಂತ ಹಾಡುಗಳನ್ನು ಹಾಡಿದ್ದು ಈಗ ಇತಿಹಾಸ. 'ಕಥನಕವನ' ಮಾದರಿಯ ಸಾಹಿತ್ಯ ಸೃಷ್ಟಿಯಾಗಿದೆಯೆನಿಸಿದರೂ ಬೆರಳೆಣಿಕೆಯಷ್ಟು ಮಾತ್ರ."[೧]

ಗಜಲ್, ರುಬಾಯಿ, ಹಾಯ್ಕು, ದ್ವಿಪದಿ, ಚೌಪದಿ ಇಂಥ ವಿಶಿಷ್ಟ ಕಾವ್ಯಪ್ರಕಾರಗಳು ಈ ಪ್ರದೇಶದಲ್ಲಿ ಹೆಚ್ಚು ರಚನೆಯಾಗಲು ಕಾರಣ ಹೈದರಾಬಾದ್ ನಿಜಾಮನ ಆಳ್ವಿಕೆ, ಉರ್ದು ಭಾಷೆಯ ಪ್ರಭಾವ, ಸವಾಲ್-ಜವಾಬ್ ಪದಗಳು ಇಂಥ ಸಂವಾದ ರೂಪದ ದೇಸಿ ನುಡಿಗಟ್ಟುಗಳ ತೀವ್ರ ಪ್ರೇರಣೆ ಮತ್ತು ಪ್ರಭಾವಗಳು ಬಹುಮುಖ್ಯವಾದವು ಎನಿಸುತ್ತದೆ.

### ೫.೧. ಆಧುನಿಕ ವಚನಗಳು

'ವಚನ' ೧೨ನೇ ಶತಮಾನದ ಸಾಹಿತ್ಯಪ್ರಕಾರ. ಹಾಡಿದರೆ ಹಾಡಾಗುವ, ಓದಿದರೆ ಗದ್ಯವಾಗುವ ವಚನಗಳು ಗದ್ಯ-ಪದ್ಯ ಮಿಶ್ರಿತವಾದವು. ಇವುಗಳ ಸರಳಬಂಧ, ಲಯಗಾರಿಕೆ ಹಾಗೂ ಕಾವ್ಯಗಂಧಿ ಗುಣಗಳು ಪಾಮರರನ್ನೂ ಆಕರ್ಷಿಸಿದ್ದವು. ದೇವರ ದಾಸಿಮಯ್ಯ, ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಸೂಳೆ ಸಂಕವ್ವೆ ಮುಂತಾದ ಶರಣರು ಹಾಡಿ ಶ್ರೀಮಂತಗೊಳಿಸಿದ ವಚನಗಳು ಇಂದಿಗೂ ಪ್ರಸ್ತುತವಾಗಿರುವುದು ಅವುಗಳಲ್ಲಿ ಹುದುಗಿರುವ ವಿಚಾರ ಹಾಗೂ ಕಾವ್ಯಗುಣಗಳಿಂದ. ಇಂಥ ರಚನೆಗಳು ಆಧುನಿಕ ಸಂದರ್ಭದಲ್ಲಿಯೂ ಸೃಷ್ಟಿಯಾದವು; ಇಂದಿಗೂ ಸೃಷ್ಟಿಯಾಗುತ್ತಿವೆ.

ಸಮಕಾಲೀನ ಸಂದರ್ಭದಲ್ಲಿ ಸಿ.ಪಿ. ಸಿದ್ಧಾಶ್ರಮ, ಎಸ್.ಜಿ. ಸಿದ್ಧರಾಮಯ್ಯ, ಚಂದ್ರಶೇಖರ ಕಂಬಾರ, ಸಿಪಿಕೆ, ಜಯಶ್ರೀ ದಂಡೆ, ಶಂ.ಗು ಬಿರಾದಾರ, ಸರಸ್ವತಿ ಚಿಮ್ಮಲಗಿ, ಅಬ್ದುಲ್ ಬಷೀರ್, ಮಸ್ತಾನ್ ಖುರೇಸಿ, ದೊಡ್ಡರಂಗೇಗೌಡ, ಗುರುಮೂರ್ತಿ ಪೆಂಡಕೂರು, ಹೆಚ್.ವಿ. ವೀರಭದ್ರಯ್ಯ, ನಿಂಗಣ್ಣ ಮುದೇನೂರು, ಚೆನ್ನಣ್ಣ ವಾಲೀಕಾರ, ಶೈಲಜಾ ಉಡಚಣ, ಪ್ರಭು ಖಾನಾಪುರೆ, ವಿಜಯಶ್ರೀ ಸಬರದ, ಹಂಶಕವಿ, ಚೆನ್ನಕ್ಕ ಪಾವಟೆ ಇನ್ನು ಮುಂತಾದವರು ಆಧುನಿಕ ವಚನಗಳನ್ನು ರಚಿಸಿದ ಪ್ರಮುಖ ಕವಿಗಳಾಗಿದ್ದಾರೆ. ಅಲ್ಲದೆ ಯಲ್ಲಪ್ಪ ಕೆ.ಕೆ. ಪುರ, ಬೇಲೂರು ರಘುನಂದನ್, ಮಲ್ಲಿಕ ಮಳವಳ್ಳಿ ಮುಂತಾದ ಇತ್ತೀಚಿನ ಕೆಲವು ಕವಿಗಳು ತಮ್ಮ

ಆಲೋಚನೆಗಳೆಲ್ಲವನ್ನು ವಚನಗಳು, ಮುಕ್ತಕಗಳು, ಚುಟುಕುಗಳು, ಹನಿಗವಿತೆ, ಚೌಪದಿ, ದ್ವಿಪದಿ ಹಾಯ್ಕುಗಳು.. ಹೀಗೆ ಮುಂತಾದ ಪ್ರಕಾರಗಳಲ್ಲಿ ಸ್ವಚ್ಛಂದ ಲಹರಿಯಲ್ಲಿ ಅಭಿವ್ಯಕ್ತಿಸುತ್ತಿದ್ದಾರೆ. ವಚನಗಳೂ ಇಂಥ ತುರ್ತಿನಲ್ಲೇ ರಚನೆಯಾಗಿರುವುದರಿಂದ ಬಹುತೇಕ ರಚನೆಗಳು ವಾಚ್ಯವಾಗಿವೆ.

ಈ ವಚನಗಳನ್ನು ವೈಚಾರಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಸ್ತ್ರೀಪರ ಹಾಗೂ ಆಧ್ಯಾತ್ಮಿಕ ವಚನಗಳೆಂದು ವಿಭಾಗಿಸಬಹುದು.

"ಗುಡಿ ದೇಗುಲಗಳಲ್ಲಿ
ದೇವರು
ಕಾಣಸಿಗಲಿಲ್ಲವಯ್ಯ ನನಗೆ
ಯಾಕೆಂದರೆ ನಾನು ಪಾಪಿ
ಪುಣ್ಯವಂತರು ತೋರಿದರೆ ಶಿರಬಾಗುವೆ
ಮೂರ್ತರೂಪದಲ್ಲಿ ಅವನಿದ್ದಾನೆಂದು ಸಂದೇಹ
ಸೃಷ್ಟಿ ವಿಕಾಸದ ಚೈತನ್ಯ ಸ್ವರೂಪಿ
ಆಗಿರಬಹುದೇ ಆತ
ನಮ್ಮ ಮಾದಾರ ಚನ್ನಯ್ಯರಲ್ಲಿ
ಡೋಹರ ಕಕ್ಕಯ್ಯರಲ್ಲಿ ರೈತ ಕಾರ್ಮಿಕರಲ್ಲಿ
ಆತ ಇರಬಹುದು ಹರಿಗೋಲ ಚಿದಾನಂದ"[೨]

'ಹರಿಗೋಲ ಚಿದಾನಂದ' ಎಂಬ ಅಂಕಿತದಲ್ಲಿ ರಚಿಸಿರುವ ಸಿ. ಪಿ. ಸಿದ್ಧಾಶ್ರಮ ಅವರ ವಚನಗಳು ನಮ್ಮ ಸುತ್ತ ಇರುವ ಸಾಮಾಜಿಕ, ಧಾರ್ಮಿಕ, ರಾಜಕೀಯ ವ್ಯವಸ್ಥೆಯ ಕ್ರೌರ್ಯಗಳನ್ನು ಒರೆಗೆ ಹಚ್ಚುತ್ತವೆ. ಆದರೆ ಇವು ಬಹುತೇಕ ಹೇಳಿಕೆಗಳ ಸ್ವರೂಪದಲ್ಲಿ ವ್ಯಕ್ತವಾಗಿವೆ.

"ಜಾತಿ ಕೆಸರಿಲಿ ಹೂತು ಹೋದವರ ಎತ್ತುವುದೆಂತು!
ಬುದ್ಧ ಬಸವ ಅಂಬೇಡ್ಕರ್
ನಾಚಿ ತಲೆ ಬಾಗಿದರು ಇವರ ಕಂಡು ಊಟ
ತಿಂಡಿ ಅಲೆದಾಟ ಎಲ್ಲಕ್ಕೂ ಜಾತಿಯೇ ಬೇಕು
ಜಾತಿ ಬಿಟ್ಟು ಜಗವಿಲ್ಲವೇ ಅನ್ಯರು ಮನುಜರಲ್ಲವೆ?
ಜಾತ್ಯತೀತ ದೇಶದಲಿ ಜಾತಿಯದೇ ಮೇಲಾಟವಯ್ಯ
ಕಲೆ ಸಾಹಿತ್ಯ ರಾಜಕಾರಣ ಎಲ್ಲೆಲ್ಲೂ ಜಾತಿಭೂತ
ಕೈವಾಡ ಕರಾಳ ನೃತ್ಯವಯ್ಯಾ
ಜಾತಿಬಿಡದವ ಮನುಜನಾಗುವನೇ ಅರಿವು
ಮೈದೋರುವುದು ಜಾತ್ಯತೀತನಲಿ
ಜಾತ್ಯತೀತನೇ ನಿಜ ಮಾನವ ವಿಶ್ವಮಾನವ ಹರಿಗೋಲ ಚಿದಾನಂದ"[೩]

ಜಾತಿವ್ಯವಸ್ಥೆಯನ್ನು ಕುರಿತ ಇಲ್ಲಿನ ವಚನ ಕೆಳಜಾತಿಯವರನ್ನು ಶೋಷಿಸುವ ಪರಿಯನ್ನು ನಿರೂಪಿಸುತ್ತಿದೆ. ಅಮಾನವೀಯವಾದ ಜಾತಿವ್ಯವಸ್ಥೆಯ ಬಗೆಗೆ ಇಲ್ಲಿ ಆಕ್ರೋಶವನ್ನು ಕವಿ ಹೊರಹಾಕುತ್ತಿದ್ದಾರೆ. ಸಮಸಮಾಜದ ಕನಸನ್ನು ಕಾಣುವ ಕವಿ ಇಲ್ಲಿ ಆಯ್ದುಕೊಂಡಿರುವ ವಸ್ತು ಮಹತ್ವದ್ದಾದರೂ ಅದನ್ನು ನಿಭಾಯಿಸುವಲ್ಲಿ ವಿಫಲರಾಗಿದ್ದಾರೆ.

ಜಯಶ್ರೀ ದಂಡೆ ಅವರು ತಾವೇ ಕರೆದುಕೊಂಡಿರುವ ಹಾಗೆ 'ಸ್ವಭಾವದ ವಚನಗಳು' ಎಂಬ ಹೆಸರಿನಲ್ಲಿ ಆಧುನಿಕ ವಚನಗಳನ್ನು ಬರೆದಿದ್ದಾರೆ. ಆದರೆ ಈ ವಚನಗಳು ಕಾವ್ಯಾತ್ಮಕವಾಗಿ ಮೂಡಿಬಂದಿಲ್ಲ ಎಂಬುದು ಇವುಗಳನ್ನು ಓದಿದರೆ ವೇದ್ಯವಾಗುತ್ತದೆ.

"ಇಟ್ಟಡಿಯ ಕಿತ್ತಿ ಮತ್ತೋದಡಿಯನಿಡಲು
ಮುಂದಾದಾಗ ಮರೆಯದೇ ಅತ್ತ ಇತ್ತ
ಸುತ್ತ ಮುತ್ತ ಎತ್ತೆತ್ತಲೂ ನೋಡುವುದ
ಮರೆಯದಿರು ಎಲೆ ಮನುಜಾ!
ಎಲ್ಲಿ ಯಾವ ಜಂತು ಅಡಗಿರುವುದೋ ತಿಳಿಯದು
ಮರೆತು ನೆತ್ತಿಗಣ್ಣಿನಿಂದ ಹೊರಟೆಯಾದರೆ
ಅನಾಹುತ ತಪ್ಪದು, ಈ ಎಚ್ಚರವನ್ನು ಹಿಡಿದು
ಹೀಗಾಗದಿರುವಂತೆ ನಡೆಯಲು ಏಕ ಚಿತ್ತನ
ಕರುಣಿಸಾ ನಿಜಗುರು ಮಹಾಂತಲಿಂಗ

ಜಗದ ಸ್ವಾಸ್ಥ್ಯ ಕದಡಿಹುದೆಂದು
ಕರಗಿ ಕೊರಗಿ ಮರುಗಿ ತಿರುಗದೆ
ಮೊದಲು ನಿನ್ನ ಮನದ ಮನೆಯವರ
ಸ್ವಾಸ್ಥ್ಯದ ಕುರಿತು ಚಿಂತಿಸಿ ವಿಚಾರಿಸಿ
ನಡೆಯುವುದೆ ಧರ್ಮ ಕರುಣಾ
ನಿಜಗುರು ಮಹಾಂತಲಿಂಗ

ಜೀವನದ ನಿಜವಾದ ಅರ್ಥವ
ಜಾಗೃತಾವಸ್ಥೆಯಲ್ಲಿ ಅರಿತುಕೊಳ್ಳದೆ
ಕನಸಿನಲಿ ಕಂಡು ಬಡಬಡಿಸುವ
ಸಂತಸಪಡುವ ಹಲವು ಗತ್ತು
ಹವಣಿಕೆಯ ಜನರ ವರ್ತನೆ ನೋಡಿ ರೋಸಿ ಹೋಗಿದೆ ಜೀವ
ನೋಡಾ ನಿಜಗುರು ಮಹಾಂತಲಿಂಗ"[೪]

ಈ ಮೇಲಿನ ವಚನವು ಅದರ ಧ್ವನಿ, ವಸ್ತು ಮತ್ತು ವಚನದ ವಿನ್ಯಾಸವನ್ನು ಕಟ್ಟಿಕೊಡುವಲ್ಲಿ ತುಂಬ ನೀರಸವಾಗಿದೆ. ಓದುಗನ ಅಂತರಂಗದಲ್ಲಿ ಯಾವ ಭಾವವನ್ನೂ ಉದ್ದೀಪಿಸುವುದಿಲ್ಲ. ಕೇವಲ ಶಬ್ದಗಳ ಜೋಡಣೆಯಾಗಿ ಕಾಣಿಸುತ್ತದೆ.

ನಡೆಯುವಾಗ ಎಚ್ಚರದಿಂದ ನಾವು ನಡೆಯಬೇಕು ಎನ್ನುವುದನ್ನು ಈ ಸಾಲುಗಳು ಹೇಳುತ್ತಿವೆ. ಎಲ್ಲಿ ಯಾವ ವಿಷಜಂತುಗಳು ಅಡಗಿರುತ್ತವೆಯೋ ತಿಳಿಯದು. ಆದ್ದರಿಂದ ನಡೆಯುವಾಗ ಏಕಚಿತ್ತವ ಕರುಣಿಸು ಎಂಬುದು ಇಲ್ಲಿನ ಇಂಗಿತ. ಮನಸ್ಸಿನಲ್ಲಿ ಚಂಚಲತೆ ಇರುವುದರಿಂದ ಅನಾಹುತಗಳು ಸಂಭವಿಸುತ್ತವೆ. ಅದಕ್ಕಾಗಿ ಏಕಾಗ್ರತೆಯನ್ನು ಕರುಣಿಸು ಎಂದು ನಿಜಗುರು ಮಹಾಂತಲಿಂಗನಲ್ಲಿ ಕವಯಿತ್ರಿ ವಿನಂತಿಸಿಕೊಳ್ಳುತ್ತಿದ್ದಾರೆ.

> "ಅಯ್ಯಾ... ಕೇರಿ ಹಸಿದು, ಕೂಗಿದೊಡೆ
> ಊರವರು ನೀವು, ಏನ ನೀಡುವಿರಯ್ಯಾ?'
> 'ಕೆಕ್ಕಲು', ಮುರ್ಕಲು, ಹಳಸಿ, ಅರ್ಬೆಂದ, 'ಜ್ವಾಳ' ರಾಗಿ, ಸಜ್ಜಿ 'ಮಿದ್ದೆ'
> 'ಕಟ್ಟಂಬ್ಲಿ' ಆರ್ಕಾ, ಸಜ್ಜಿ, ಜ್ವಾಳ, ನವ್ನಿಗಂಜಿ
> ಹುಣಿಸೆ ತೊಕ್ಕು, ಕಾರ್ದ ಚಟ್ನಿ, ಜ್ವಾಳ, ರಾಗಿ, ಸಜ್ಜಿ 'ರಟ್ಟಿ'
> ಸತ್ತ ದನ, ಕರುಗಳ ನೀಡಿ, ನಮ್ಮ ಹಸಿವು ಹಿಂಗಿಸುತಿರುವಿರಯ್ಯಾ!"[೫]

ತನ್ನ ಕೇರಿಯ ಜೀವನಾನುಭವಗಳನ್ನು ಲೋಕಾನುಭವಗಳನ್ನಾಗಿಸಿರುವ ಕವಿಯ ಕಲೆಗಾರಿಕೆ ಗಮನಾರ್ಹವಾದುದು. ಸಾಮಾಜಿಕವಾಗಿ ಶೋಷಿತನಾಗಿರುವ ವ್ಯಕ್ತಿ ತನ್ನ ಊರವರನ್ನು ಪ್ರಶ್ನಿಸುವ ಪರಿ ಮಾರ್ಮಿಕವಾಗಿದೆ. ಮೊದಲ ಎರಡು ಸಾಲುಗಳಲ್ಲಿಯೇ ಊರು ಮತ್ತು ಕೇರಿಯ ನಡುವೆ ಅಂತರವಿರುವುದನ್ನು ಸೂಚಿಸುತ್ತಿದೆ. ಅಷ್ಟೇ ಅಲ್ಲ; ವಿವಿಧ ಬಗೆಯ ದವಸ-ಧಾನ್ಯಗಳ ಜೊತೆಗೆ 'ಸತ್ತ ದನ, ಕರುಗಳ ನೀಡಿ, ನಮ್ಮ ಹಸಿವು ಹಿಂಗಿಸುತ್ತಿರುವಿರಯ್ಯಾ!' ಎಂಬ ಸಾಲು ಶ್ರೇಣೀಕರಣ ವ್ಯವಸ್ಥೆ ಸೃಷ್ಟಿಸಿರುವ ವಿವಿಧ ಬಗೆಯ ಶೋಷಣೆಯ ಚಿತ್ರಗಳು ಕಣ್ಮುಂದೆ ಬರುತ್ತವೆ. ಕೊಡುವ-ತೆಗೆದುಕೊಳ್ಳುವ ಕ್ರಿಯೆಯಲ್ಲಿಯೇ ಶೋಷಣಾಪ್ರವೃತ್ತಿ ಎದ್ದು ಕಾಣುತ್ತದೆ.

ಲೈಂಗಿಕ ಶೋಷಣೆಯ ಕರಾಳಮುಖವನ್ನು ಇನ್ನೊಂದು ವಚನ ಮುಖಾಮುಖಿಯಾಗುವುದು ಹೀಗೆ:

> "ಅಯ್ಯಾ... ಕೇರಿಗರಿಗೆ, ಚಳಿಯಾದೊಡೆ
> ಉತ್ತಮರು ನೀವು, ಏನ ಹೊದಿಸುವಿರಯ್ಯಾ?'
> ಬೇವ್ನಿ ಹುಟ್ಗಿ, ಕಾನ್ಗಿ ತಪ್ಪು, ಸಪ್ಪೆ, ನವ್ನಿ, ನೆಲ್ಲುಲ್ಲು
> ಕಾಗದದ 'ಸೀಲ', 'ಕೊಪ್ಪೆ', ಈಚ್ಲು ಚಾಪೆ, 'ಗ್ವಾಣಿ' ತಾಟು
> ನೆರತ, ಹಡದೆ, ರಂಡೆಮುಂಡೆಯರ ಮೈಲಿಗೆ 'ಚೀರೆ' ಕುಬ್ಸಗಳು!
> ಚಿಂದಿ ಕೌದಿ, ಹೆಣದ ಬಟ್ಟೆ, ಕೊಟ್ಟು
> ನಮ್ಮ ಮಾನ-ಪ್ರಾಣ ಎರಡೂ, ಕಾಯುತಿರುವಿರಯ್ಯಾ!"[೬]

ದಮನಿತರ ಮಾನ-ಪ್ರಾಣಗಳೆರಡನ್ನೂ ಕಾಯುತ್ತಿರುವ ಉತ್ತಮರ ನಡೆಯನ್ನು ಈ ವಚನ ಮಾರ್ಮಿಕವಾಗಿ ಪ್ರಶ್ನಿಸುತ್ತಿದೆ. ಜೊತೆಗೆ ಅವರ ಬದುಕನ್ನು ಬೆತ್ತಲೆಗೊಳಿಸಿರುವ ಬಗೆಯನ್ನು

ವಿಡಂಬಿಸುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುವ ಸಾಮಾಜಿಕ ಶೋಷಣೆ ಹಾಗೂ ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯಗಳ ಬಗ್ಗೆ ಮೌನವಾಗಿ ಪ್ರತಿಭಟಿಸುತ್ತಿದೆ.

ವಸ್ತುವೈವಿಧ್ಯದ ದೃಷ್ಟಿಯಿಂದ ಯಲ್ಲಪ್ಪ ಕೆ.ಕೆ. ಪುರ ಅವರ ಎರಡೂ ವಚನಗಳು ಆಕರ್ಷಕವಾಗಿವೆ, ವಿಶಿಷ್ಟವಾಗಿವೆ.

"ಇಂದಿನ ಚುನಾವಣೆ ಎಂದರೆ
ಹಣ ಜಾತಿ ತೋಳ್ಬಲಗಳ ಮೆರೆದಾಟ
ಮೌಲ್ಯಾದರ್ಶಗಳ ಕೊನೆಯಾಟ
ಪ್ರಜಾಪ್ರಭುತ್ವದ ಅಣಕವಾಟ
ಏಳು ಎಚ್ಚರಗೊಳ್ಳು ಪ್ರಜಾ ಮಹಾಪ್ರಭು
ಹಣ ಹೆಂಡದಾಮಿಷವ ದೂರ ಸರಿಸಿ
ಜಾತಿ ಜಾಡ್ಯದಿಂ ಪಾರಾಗಿ
ನಿಜ ಮನುಜಗೆ ಮತ ನೀಡಿ
ಭಾರತವ ರಕ್ಷಿಸು ಹರಿಗೋಲ ಚಿದಾನಂದ"[೬]

ವಚನಸಾಹಿತ್ಯದ ಪ್ರಭಾವಕ್ಕೆ ಒಳಗಾಗಿರುವ ಸಿದ್ಧಾಶ್ರಮ ಅವರು ಸಮಕಾಲೀನ ಸಂದರ್ಭದ ಅನೇಕ ವಿಚಾರಗಳ ಬಗ್ಗೆ ತಮ್ಮ ವಚನಗಳಲ್ಲಿ ವಿಡಂಬನೆ ವ್ಯಕ್ತಪಡಿಸಿದ್ದಾರೆ. 'ಅವರು ಉಂಡೆಸೆದ ಎಂಜಲೆಲೆಯ ಮೇಲೆ/ಎಮ್ಮವರು ಹೊರಳಾಡಿದರೆ ಶುಭವಂತೆ' ಎಂದು ಮಡೆಸ್ನಾನವನ್ನು ಕುರಿತು ಪ್ರತಿರೋಧ ಒಡ್ಡುತ್ತಾರೆ. ವಚನಗಳಿಗೆ ಬೇಕಾದ ಲಯಗಾರಿಕೆ, ಕಾವ್ಯಗುಣ, ಬಿಗಿಬಂಧಗಳು ಈ ಕವಿಗೆ ಅಷ್ಟಾಗಿ ದಕ್ಕಿಲ್ಲ. ಆದ್ದರಿಂದ ಇಲ್ಲಿನ ಬಹುತೇಕ ವಚನಗಳು ವಾಚ್ಯಾರ್ಥದಿಂದ ಕೂಡಿವೆ. ಇವುಗಳನ್ನು ಓದುತ್ತಿದ್ದರೆ ಘೋಷಣೆ, ಹೇಳಿಕೆಗಳಾಗಿ ನಮಗೆ ಕೇಳಿಸುತ್ತವೆ.

ಜನಪದರ ಬದುಕಿನ ಶೋಧ ಹಾಗೂ ನೆಲಮೂಲ ಸಂಸ್ಕೃತಿಯ ಬೇರುಗಳನ್ನು ತಮ್ಮ ಕಾವ್ಯದಲ್ಲಿ ಒಡಮೂಡಿಸಿದ ಎಸ್.ಜಿ. ಸಿದ್ಧರಾಮಯ್ಯ ಅವರು ಕನ್ನಡ ಕಾವ್ಯಪರಂಪರೆಗೆ ದೇಸಿ ನುಡಿಗಟ್ಟುಗಳನ್ನು ತಂದುಕೊಟ್ಟವರು. ಇವರು ಕವಿತೆಗಳ ಜೊತೆಗೆ ವಚನಗಳನ್ನೂ ರಚಿಸಿದ್ದಾರೆ. 'ಅರಿವು ನಾಚಿತ್ತು' ಅವರ ವಚನಗಳ ಸಂಕಲನ. ಇಲ್ಲಿನ ವಚನಗಳನ್ನು 'ಅರಿವು ನಾಚಿದ ಸಂದರ್ಭದ ಪ್ರತಿಕ್ರಿಯಾತ್ಮಕ ಪದರೂಪಿಗಳು' ಎಂದು ಅವರು ಕರೆದುಕೊಂಡಿದ್ದಾರೆ. ನೈತಿಕವಾಗಿ ಭ್ರಷ್ಟಗೊಂಡಿರುವ ರಾಜಕೀಯ ವ್ಯವಸ್ಥೆ ಮತ್ತು ಸಾಂಸ್ಕೃತಿಕ ರಾಜಕಾರಣ ಇವೆರಡರ ವರ್ತನೆಗಳನ್ನು ತಮ್ಮ ವಚನಗಳಲ್ಲಿ ಚಿತ್ರಿಸಿದ್ದಾರೆ. ಇದರಲ್ಲಿ ನೂರೊಂದು ಆಧುನಿಕ ವಚನಗಳಿವೆ. 'ನಾನು ವಚನಗಳನ್ನು ಬರೆಯಬೇಕೆಂದು ಹೊರಟವನಲ್ಲ. ವಚನರಚನೆ ನನ್ನೊಳಗೆ ಆಯಾಚಿತವಾಗಿ ಹೀಗೆ ಸಾಂದರ್ಭಿಕ ಒತ್ತಡದಲ್ಲಿ ಒಡಮೂಡಿದ್ದು ದೇಹದ ಬಾವು, ಜೊತೆಗೆ ಒಳಗಿನ ನೋವು ಹೇಳಿಕೊಳ್ಳಲು ಆರ್ತಭಾವದ ಸ್ವರಜಾಲವಾಗಿ ಹುಟ್ಟಿದ್ದು' ಎಂದು ಪ್ರಸ್ತಾವನೆಯಲ್ಲಿ

ಹೇಳಿಕೊಂಡಿದ್ದಾರೆ. ಅಂದರೆ ಕಾಲುನೋವಿನ ಅನಾರೋಗ್ಯದಿಂದ ಚಿಕಿತ್ಸೆ ಪಡೆಯುವ ಸಲುವಾಗಿ ಆಸ್ಪತ್ರೆ ಸೇರಿದ್ದಾಗ ಇವು ರಚನೆಗೊಂಡವು. ಹೀಗೆ ತಕ್ಷಣದ ಒತ್ತಡದಲ್ಲಿ ತಮ್ಮ ಆಲೋಚನೆಗಳಿಗೆ ಆಧುನಿಕ ವಚನಗಳ ರೂಪ ಕೊಟ್ಟಿದ್ದಾರೆ. ಅವಸರದಲ್ಲಿ ಹುಟ್ಟಿದ್ದರಿಂದಲೋ ಏನೋ ಇಲ್ಲಿನ ಬಹುತೇಕ ವಚನಗಳು ಓದುಗರಲ್ಲಿ ನಿರಾಸೆಯನ್ನು ಮೂಡಿಸುತ್ತವೆ. ಏಕೆಂದರೆ ವಚನಕಾರರಿಗೆ ಇದ್ದ ಸಾಮಾಜಿಕ ಒತ್ತಡ, ಕಾವ್ಯಾತ್ಮಕ ಗುಣ ಇಲ್ಲಿ ಇಲ್ಲದಿರುವುದರಿಂದ.

"ಪ್ರಶಸ್ತಿಗಾಗಿ ಆಯ್ಕೆ ಸೂತ್ರದ ಹಾದಿ
ಹಿಡಿದು ಬರೆಯುವ ಸಾಹಿತಿ
ಸಂದೇಶ ಸೂತ್ರದ ಬರಿ ಮಳೆಗರೆದು
ಚಿತ್ರ ಮಾಡುವ ನಿರ್ದೇಶಕ
ಕಲಾಕ್ಷೇತ್ರದ ದೃಷ್ಟಿಬೊಟ್ಟುಗಳಯ್ಯಾ..."[೮]

ಖಾಸಗಿ ಎನ್ನಬಹುದಾದ ವಿಷಯವನ್ನು ಸಾರ್ವತ್ರಿಕಗೊಳಿಸಲು ಹೊರಟಿರುವ ಕವಿ ಅನಿಸಿಕೆಗಳ ಮಟ್ಟದಲ್ಲೇ ವಿಹರಿಸುತ್ತಾರೆ. ಆದ್ದರಿಂದ ಇವು ಹಾದಿಬೀದಿಯ ಮಾತುಗಳಂತೆ ಕೇಳಿಸುತ್ತವೆ. ಇಲ್ಲಿಯ ವಚನಗಳನ್ನು ಸಿದ್ಧರಾಮಯ್ಯನವರು 'ಆಧುನಿಕ ರಾಜಕೀಯ ವಚನಗಳು' ಎಂದು ಹೇಳಿಕೊಂಡಿದ್ದಾರೆ. ಅಂಥದ್ದೊಂದು ವಚನ ಹೀಗಿದೆ:

"ಒಂದು ಪಕ್ಷದಲ್ಲಿ ಗೆದ್ದು ಬಂದ ಶಾಸಕ
ಮೂರೇ ತಿಂಗಳಿಗೆ ಮತ್ತೊಂದು ಪಕ್ಷದ
ಅಪರೇಷನ್ನಿನಾಮಿಷದಲಿ ಅಮೇಧ್ಯವ ತಿಂದು
ಮರುಚುನಾವಣೆಗೆ ತಾನೇ ಸ್ಪರ್ಧಿಸಿ ನಿಂತರೆ
ಪ್ರಜಾಪ್ರಭುವಿಗೆ ತಾಯಿಗಂಡನಾದರೆ
ಅಂಥ ಖೊಟ್ಟಿ ಮೂಳನ ತಲೆಗೆ
ಪಡಿಹಾರಿ ಉತ್ತಯನ ಎಡದ ಎಕ್ಕಡದಲ್ಲಿ
ಲಟಲಟನೆ ಹೊಡೆಯೆಂದ ನಮ್ಮ ಅಂಬಿಗ ಚೌಡಯ್ಯ ಗುರು
ಅರಿವೇ ಗುರುವೆಂದ ಗುರುಸಿದ್ಧರಾಮ ತಂದೆ"[೯]

ವಚನ ಚಳವಳಿಯ ಪ್ರಭಾವ ಸಿದ್ಧರಾಮಯ್ಯ ಅವರ ಕಾವ್ಯದ ಮೇಲಾಗಿದೆ. ಅಲ್ಲಮನನ್ನು ಆವಾಹಿಸಿಕೊಂಡಂತೆ ಕಾವ್ಯ ಬರೆಯುವ ಇವರು ವಚನಗಳಲ್ಲಿ ಅಂಥ ಓಘವನ್ನು ತರಲಿಕ್ಕೆ ಸಾಧ್ಯವಾಗಿಲ್ಲ. ಅದಕ್ಕೆ ಇವು ಕ್ಲೀಷೆಯಾಗಿವೆ ಎನ್ನಿಸುತ್ತದೆ. ಇಂಥ ರಚನೆಗಳನ್ನು ಹುಲಿಕುಂಟೆ ಮೂರ್ತಿಯವರು ಈ ಕೃತಿಯ ಬೆನ್ನುಡಿಯಲ್ಲಿ ಹೇಳಿರುವ ಹಾಗೆ 'ಹನ್ನೆರಡನೆಯ ಶತಮಾನದ ವಚನಗಳಲ್ಲಿಯೂ ನಾವು ಈ ಮಟ್ಟದ ಓದುವ ಎದೆಯೊಳಗೂ ಹರಿಯಬಹುದಾದ ಹಾಗೂ ಅಲ್ಲಿಯೂ ಬೆಳೆದು ಕ್ರಿಯೆಯನ್ನು ನಿರೀಕ್ಷಿಸುವ ರಚನೆಗಳನ್ನು ಕಾಣಲಾರವೇನೋ' ಎಂದು ವೈಭವೀಕರಿಸಿರುವುದು ಪ್ರಶ್ನಾರ್ಹವಾದುದು. ಅಷ್ಟೇ ಅಲ್ಲ, ಈ ವಚನಗಳನ್ನು ಕುರಿತು ಮುನ್ನುಡಿ

ಬರೆದಿರುವ ಚಂದ್ರಶೇಖರ ಪಾಟೀಲ ಹಾಗೂ ಬೆನ್ನುಡಿಯಲ್ಲಿ ಅಭಿಮಾನದ ರೂಪದ ಮಾತಾಡಿರುವ ಕೆ. ಮರುಳಸಿದ್ಧಪ್ಪನವರಾಗಲಿ ಇವುಗಳ ವಸ್ತುನಿಷ್ಠ ವಿವೇಚನೆಗೆ ಹೋಗುವುದಿಲ್ಲ.

"ಅಧಿಕಾರ ನಡೆಸುತ್ತೇವೆನ್ನುವ ಆಳುವ ಮಂದಿ
ದಿನಾ ಬೆಳಗೆದ್ದು ಗುಡಿಗುಂಡಾರಗಳ ಸುತ್ತ
ಮಾಡಿದ ವಂಚನೆಗೆ ಆಣೆ ಪ್ರಮಾಣಗಳಲ್ಲಿ
ಪ್ರಾಯಶ್ಚಿತ್ತವ ಬೇಡುವರಯ್ಯ
ಮಠ ಪೀಠಗಳಿಗೆ ಕೋಟಿಗಟ್ಟಲೆ ಧನವ ನೀಡುವರಯ್ಯ
ಪಾಪಿಯ ಧನ ಪ್ರಾಯಶ್ಚಿತ್ತವೆಂದರೂ
ಪಾಪಕೂಪಗಳ ಜಾತಿಯ ಹಳವಂಡದಲ್ಲಿ
ಮಠ ಪೀಠಗಳು ಪ್ರಜಾಪ್ರಭುತ್ವವ ನುಂಗುತ್ತಲಿವೆಯಯ್ಯಾ
ಅರಿವೆ ಗುರುವೆಂದ ಗುರುಸಿದ್ಧರಾಮ ತಂದೆ."[೧೦]

ಪ್ರಜೆಗಳಿಂದ ಆಯ್ಕೆಯಾಗಿ ಅಧಿಕಾರ ಸ್ವೀಕರಿಸಿದ ಜನಗಳು ಪ್ರತಿನಿಧಿಗಳು ಪ್ರತಿದಿನ ಜನಪರ ಸಮಸ್ಯೆಗಳಿಗೆ ಕಿವಿಗೊಡದೆ, ಗುಡಿಗುಂಡಾರಗಳಿಗೆ ಹೋಗುತ್ತಾರೆ. ಚುನಾವಣೆಯ ಸಂದರ್ಭದಲ್ಲಿ ಜನರಿಗೆ ಕೊಟ್ಟ ಭರವಸೆಯ ಮಾತುಗಳು ನೆನಪೇ ಇರುವುದಿಲ್ಲ. ಅಭಿವೃದ್ಧಿಯ ವಿಚಾರ ಬಂದಾಗ ರಾಜಕೀಯದಲ್ಲಿ ನೈತಿಕತೆಯ ಪ್ರಶ್ನೆ ಎದುರಾಗುತ್ತದೆ. ತಾವು ಮಾಡಿದ ಮೋಸ, ವಂಚನೆಗಳ ಪಾಪವನ್ನು ತೊಳೆದುಕೊಳ್ಳಲು ರಾಜಕಾರಣಿಗಳು ದೇವಸ್ಥಾನಕ್ಕೆ, ಮಠಗಳಿಗೆ ಅನುದಾನವನ್ನು ಬಿಡುಗಡೆ ಮಾಡಿ ತಮ್ಮ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾರೆ.

ಮಠ ಪೀಠ, ದೇವಸ್ಥಾನಗಳಿಗೆ ಕೋಟಿಗಟ್ಟಲೆ ಹಣ ನೀಡಿದರೆ ತಾವು ಮಾಡಿದ ಪಾಪ ಪ್ರಾಯಶ್ಚಿತ್ತವಾಗುತ್ತದೆ ಎಂದು ನಂಬಿ ಕೋಟಿಗಟ್ಟಲೆ ಹಣ ಸುರಿಯುತ್ತಾರೆ. ಪ್ರಜೆಗಳ ಕಷ್ಟಗಳು, ಸಮಸ್ಯೆಗಳು ಕಣ್ಣಿಗೆ ಕಂಡರೂ ಕಾಣದಂತೆ, ಕೇಳಿದರೂ ಕೇಳದಂತೆ ಬರೀ ಆಶ್ವಾಸನೆಗಳನ್ನು ನೀಡುವುದರಲ್ಲಿಯೇ ತಮ್ಮ ಅಧಿಕಾರದ ಅವಧಿಯನ್ನು ಕಳೆಯುತ್ತಾರೆ.

ಮಠಗಳು ಧರ್ಮ, ದೇವರು, ನಂಬಿಕೆಯ ಹೆಸರಿನಲ್ಲಿ ಜನರನ್ನು ಸುಲಿಗೆ ಮಾಡುವುದಲ್ಲದೆ ಪ್ರಜಾಪ್ರಭುತ್ವದ ಮೌಲ್ಯಗಳಿಗೆ ಭಂಗ ತರುತ್ತಿದ್ದಾರೆ. ಇಂಥ 'ಪಾಪಕೂಪ'ಗಳ ಬಗ್ಗೆ ಕವಿಗೆ ವಿಷಾದವಿದೆ. ಇಷ್ಟೆಲ್ಲದರ ನಡುವೆಯೂ ಕೆಲವು ವಚನಗಳು ಸಹಜ ಕವಿಮನಸ್ಸಿನ ಕಾವ್ಯಗುಣದಿಂದ ಓದುಗರ ಗಮನ ಸೆಳೆಯುತ್ತವೆ.

ಚಂದ್ರಶೇಖರ ಕಂಬಾರ ಅವರೂ ಸಹ ಕೆಲವು ವಚನಗಳನ್ನು ಬರೆದಿದ್ದಾರೆ. ಇವು ವಚನಗಳ ರಚನೆ ಹಾಗೂ ವಿನ್ಯಾಸಗಳಿಗಿಂತ ಭಿನ್ನವಾದ ಮಾದರಿಯಾಗಿ ಕಾಣಿಸುತ್ತವೆ. ಇವುಗಳನ್ನು ಓದುತ್ತಿದ್ದರೆ ಕವಿತೆಗಳನ್ನು ಓದಿದಂಥ ಅನುಭವ ಆಗುತ್ತದೆ. ಮೂಲ ವಚನಗಳಲ್ಲಿರುವ ಸರಳ ಗೇಯ ಹಾಗೂ ಲಯಗಾರಿಕೆ ಇವುಗಳಿಗಿಲ್ಲ. ಬದಲಾಗಿ ಮುಕ್ತ ಛಂದೋಲಹರಿಯಲ್ಲಿ ರಚನೆಗೊಂಡಿವೆ.

“ಆಕಾಶದೊಂದಿಗೆ ಒಮ್ಮೆ ಚುಕ್ತ
ಮಾಡಿಕೊಳ್ಳುವುದುಚಿತ ಅಂತ
ಅನ್ನಿಸಿದೆ ಇತ್ತೀಚೆಗೆ.
ಅಡಗಿಸಿಟ್ಟದ್ದೆಲ್ಲ ಹೊರಬಂದು ಹಾರೈಸುತ್ತಿದೆ
ಕೈಚಾಚಿ ನಿನ್ನ ಕಡೆಗೆ,
ಅಂಟಿರುವ ನಂಟುಗಳೆಲ್ಲ ಹಳಸಿ
ಗಳಿಸಿದ್ದೆಲ್ಲ ಗೆದ್ದಲು ಹಿಡಿದು
ವಶವಾಗಿದೆ ಕಾಲನ ವರಸೆಗೆ.
ಎಲ್ಲ ಎಲ್ಲವ ಕಳಚಿ
ನೀಲಿಮ ನಭದ ಅಂತ್ಯರಹಿತಾದಿಮ ಪ್ರಭೆಯ
ಧ್ಯಾನಿಸುತ್ತ ಬೆತ್ತಲಾಗಬೇಕೆನಿಸುತ್ತದೆ ನಿನ್ನಂತೆ
ಏಳುತ್ತೇನೆ ನನ್ನದೇ ಉಸಿರನ್ನ
ಮೈಯಲ್ಲಿ ತುಂಬಿಕೊಂಡು ಹಗುರವಾಗುತ್ತ
ಒಂದೊಂದೆ ಕ್ಷಿತಿಜಗಳ ಉಡುದಾರದಂತೆ ಕಳಚುತ್ತ
ನಿನ್ನಂತೆ ಬಯಲಾಗುವುದಕ್ಕೆ. ಆದರೆ
ಬಯಲು ಆಗಲೇ ಹಗಲು ಹೊತ್ತು ಬಿಸಿಲಿನ,
ರಾತ್ರಿ ಹೊತ್ತು ಕತ್ತಲೆ ಇಲ್ಲವೆ ಚಂದ್ರತಾರಾದಿಗಳ
ಮಂದ ಬೆಳಕಿನ ದಿರಸಿನಲ್ಲಿ
ಮರ್ಯಾದೆ ಮುಚ್ಚಿಕೊಂಡಿರುವಾಗ
ನಿನ್ನ ಬತ್ತಲೆಗೆ ಮಾದರಿಯನಿನ್ನೆಲ್ಲಿ ಹುಡುಕಲಿ
ಶಿವಲಿಂಗಾ?”[೧೧]

ಕವಿತೆಯ ಶೀರ್ಷಿಕೆಯೂ ಸಹ ಇದೇ ಆಗಿರುವುದರಿಂದ, ಇದರ ರಚನಾವಿನ್ಯಾಸವೂ ಕವಿತೆಯನ್ನೇ ಹೋಲುವುದರಿಂದ ಇದನ್ನು ವಚನ ಎಂದು ಒಪ್ಪಿಕೊಳ್ಳುವುದು ತುಸು ಕಷ್ಟ.

‘ಶಿವಲಿಂಗಾ’ ಎಂಬ ಅಂಕಿತದಲ್ಲಿ ರಚನೆಗೊಂಡಿರುವ ಇಲ್ಲಿನ ವಚನ ಹೊಸ ಕ್ಷಿತಿಜದ ಹುಡುಕಾಟ ಮಾಡಲು ಬೆತ್ತಲಾಗುವ ಮಾದರಿಗಳನ್ನು ಇಲ್ಲಿ ಚಿತ್ರಿಸುತ್ತಿದೆ. ಇನ್ನೊಂದು ವಚನದಲ್ಲಿ ಶಬ್ದ-ನಿಶ್ಶಬ್ದಗಳ ಸಂಕೀರ್ಣಾವಸ್ಥೆಯನ್ನು ಒಗಟಿನ ರೂಪದಲ್ಲಿ ಬಿಡಿಸುವ ಪ್ರಯತ್ನ ಮಾಡುತ್ತದೆ. ಕಾಡು-ನಾಡುಗಳ ತಾಕಲಾಟದಲ್ಲಿ ಶಬ್ದಕ್ಕೆ ಹೆದರಿ ನಿಶ್ಶಬ್ದವನ್ನು ಹುಡುಕುವ ಪರಿ ಇಲ್ಲಿನದು.

“ನೀನು
ನಭದ ನೀಲಿಮದಲ್ಲಿ
ಚಂದ್ರತಾರಾದಿಗಳ ಬರೆದು
ಕೆಳಗೆ ನೀರ ನಿರ್ಮಿತಂಗಳ ಸೃಷ್ಟಿಸಿದಾಗಲೇ

ನಾನೂ ಹುಟ್ಟಿದೆ.
ಒಬ್ಬಂಟಿ; ಘನ ಮೌನಕ್ಕೆ ಹೆದರಿ
ಕರೆದರೆ ಬರಬಹುದೆಂದು ಶಬ್ದವ ಸೃಷ್ಟಿಸಿ
ನಿನ್ನ ಕರೆದೆ.
ಬಾರದ್ದಕ್ಕೆ ಕಾಡಿಗೆ ಓಡಿ
ದಟ್ಟ ಹಸಿರಿಗೆ ಕಿವಿ ಹಚ್ಚಿ
ನಿನ್ನ ಉಸಿರಾಟ ಕೇಳಿಸುವುದೇ ಅಂತ
ಸ್ವಗತ ಮಾತಾಡಿದೆ.
ಕೊನೆಗೆ ಗಿಜಿ ಗಿಜಿ ಸಿಟಿಗಳ ಕಟ್ಟಿ
ಶಬ್ದ ಸಾಗರವ ಪ್ರಕ್ಷುಬ್ಧಗೊಳಿಸಿ ನೋಡಿದರೆ
ಶಬ್ದಕ್ಕೆ ಹೆದರಿ ನಾನಾಗಲೇ
ಬಯಲಾಗಿ
ನಿಶ್ಶಬ್ದವಾಗಿದ್ದೀಯಲ್ಲೋ ಶಿವಲಿಂಗಾ"[೨]

ಮೇಲ್ನೋಟಕ್ಕೆ ಈ ಎರಡು ವಚನಗಳು ಸರಳವಾಗಿ ಅರ್ಥವಾಗದಿದ್ದರೆ ಅವುಗಳ ಸಂಕೀರ್ಣತೆ, ಬಿಗಿಬಂಧದಿಂದ ಹಲವು ಅರ್ಥಸಾಧ್ಯತೆಗಳನ್ನು ನಮ್ಮ ಮನಸ್ಸಿನಲ್ಲಿ ಹೊಳೆಯಿಸುತ್ತವೆ.

ಯಲ್ಲಪ್ಪ ಕೆ.ಕೆ. ಪುರ ಅವರು ತಾವು ಬರೆದ ವಚನಗಳನ್ನು 'ಊರು ಕೇರಿಯ ವಚನಗಳು' ಎಂದು ಕರೆದುಕೊಂಡಿದ್ದಾರೆ. ತನ್ನ ಕೇರಿಯ ಜೀವನಾನುಭವ, ಶೋಷಣೆ, ಅವಮಾನ ನೋವು-ನಲಿವುಗಳನ್ನು ಈ ವಚನಗಳಲ್ಲಿ ಚಿತ್ರವತ್ತಾಗಿ ರಚನೆ ಮಾಡಿದ್ದಾರೆ.

'ವಚನ' ಎಂಬ ಅಭಿವ್ಯಕ್ತಿ ಕ್ರಮವನ್ನು ಪ್ರಜ್ಞಾಪೂರ್ವಕವಾಗಿ ಸ್ವೀಕಾರ ಮಾಡಿದ ಮೇಲೆ ಅದಕ್ಕೆ 'ನ್ಯಾಯ ಒದಗಿಸಬೇಕಲ್ಲವೆ? ಎಂಬ ಮೂಲಭೂತ ಪ್ರಶ್ನೆ ಬರಹಗಾರರಿಗೆ ಎದುರಾಗುತ್ತದೆ. ಏಕೆಂದರೆ ಈಗಾಗಲೇ ತಮ್ಮ ಎದುರಿಗೆ ಇರುವ ೧೨ನೆಯ ಶತಮಾನದ ಶರಣರ ಸೊಳ್ನುಡಿಗಳಿಗಿಂತ ಭಿನ್ನವಾಗಿ ಬರೆಯುವ ಸವಾಲು ಅನಂತರ ಬರೆಯುವ ಎಲ್ಲರಿಗೂ ಪ್ರಶ್ನೆಯಾಗಿ ಕಾಡಿರುತ್ತದೆ.

ಆಧುನಿಕ ಸಂದರ್ಭದಲ್ಲಿಯೂ ಸಹ ಧರ್ಮ ಜಿಜ್ಞಾಸೆಗಳಗೆ ವಚನಗಳು ಮುಖಾಮುಖಿ ಯಾಗಿವೆ. ಧಾರ್ಮಿಕ ಸಂಘರ್ಷ ಮತ್ತು ಸಾಮರಸ್ಯಗಳಿಗೆ ಪ್ರತಿಕ್ರಿಯಿಸಿವೆ. ಧಾರ್ಮಿಕ ಪ್ರಶ್ನೆಗಳನ್ನು ಆಧುನಿಕ ವಚನಗಳು ತುಂಬ ಸೂಕ್ಷ್ಮವಾಗಿ ನಿಭಾಯಿಸಿವೆ. ಅಂಥ ಒಂದು ವಚನ ಹೀಗಿದೆ:

"ಮುಸ್ಲಿಮರ ದೇಶ ಯಹೂದಿಗಳ ದೇಶ
ಹಿಂದೂಗಳ ದೇಶ ಕಿರಿಸ್ತಾನರ ದೇಶವೆಂದು
ದೇಶ ದೇಶಗಳನ್ನು ಮತಧರ್ಮಗಳಿಗೆ ಕಟ್ಟಿಹಾಕಿದರೆ
ಮನುಷ್ಯರ ದೇಶವನ್ನೆಲ್ಲಿಂದ ತರುವುದಯ್ಯಾ

ಹರಿವ ನೀರಿನ ಗುಣವ ಬೀಸುವ ಗಾಳಿಯ ಗುಣವ
ಅರಿಯಲಾರದ ಧರ್ಮ ಯಾವ ಕೂಪದ ಕರ್ಮವಯ್ಯಾ?
ನಾನು ನನ್ನದೆನ್ನುವ ಮತಧರ್ಮದ ಹಳವಂಡದಲ್ಲಿ
ಮನುಜಕುಲ ನೋಯುತ್ತಿದೆ ಜೀವಜಲ ಬೇಯುತ್ತಿದೆ
ಪಂಚಭೂತದ ಗುಣವ ಬಾಳಿಸಲಾಗದ ಮತವೆಂಬ
ಕಸವ ಸುಟ್ಟು ಜೀವ ಜಾಲವನುಳಿಸೋ
ಅರಿವೇ ಗುರುವೆಂದ ಗುರುಸಿದ್ಧರಾಮ ತಂದೆ"[೧೩]

ಧರ್ಮಕೇಂದ್ರಿತವಾಗಿ ದೇಶವನ್ನು ವಿಭಾಗಿಸುತ್ತ ಹೋದರೆ ಮನುಷ್ಯ ಮತ್ತು ಸಕಲ ಜೀವರಾಶಿಗಳ ಪ್ರೀತಿಗೆ ಗಡಿರೇಖೆಗಳನ್ನು ಹಾಕಲಾಗುತ್ತದೆಯೇ? ಮತ ಧರ್ಮಗಳಿಗೆ ದೇಶಗಳನ್ನು ಕಟ್ಟಿಹಾಕಿದರೆ ಮನುಷ್ಯರ ದೇಶ ಎಲ್ಲಿದೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಪಂಚಭೂತಗಳಾದ ಆಕಾಶ, ಭೂಮಿ, ಗಾಳಿ, ನೀರು, ಬೆಂಕಿ ಎಲ್ಲರಿಗೂ ಒಂದೆ. ಪ್ರಕೃತಿಯ ಮಡಿಲಲ್ಲಿ ಮೇಲು ಕೀಳೆಂಬುದಿಲ್ಲ. ನಾನು ರಾಜ, ನೀನು ಸೇವಕ ಎಂದು ಯಾರಿಗೂ ಯಾವುದಕ್ಕೂ ಭೇದಭಾವ ತೋರದೆ ಸಮನಾಗಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸಬೇಕು. ಮನುಷ್ಯರೆನಿಸಿಕೊಂಡಿರುವ ನಾವುಗಳು ಧರ್ಮ, ಭಾಷೆ, ಜಾತಿ, ದೇಶ ಎಂಬ ಗಡಿರೇಖೆಗಳಿಗೆ ಸಿಲುಕಿ ನಾಶವಾಗುವುದಲ್ಲದೆ ಇಡೀ ಮಾನವಕುಲವನ್ನೇ ಇಂದು ನಾಶ ಮಾಡಲು ಹೊರಟಿದ್ದೇವೆ ಎಂಬ ಭಾವ ಇಲ್ಲಿನದು.

ಆದರೆ ಎಲ್ಲರೂ ಅರಿಯಲೇಬೇಕಾದ ಒಂದು ಧರ್ಮವಿದೆ; ಅದೇ ಮಾನವೀಯ ಧರ್ಮ. ಈ ಮಾನವೀಯತೆಯನ್ನು ತಿಳಿದುಕೊಂಡು ಜೀವನದಲ್ಲಿ ಅಳವಡಿಸಿಕೊಳ್ಳಬೇಕಿದೆ. ಕೋಮುಗಲಭೆ ದೇಶ ದೇಶಗಳ ನಡುವಿನ ವೈರತ್ವದಿಂದ ಮುಕ್ತಿ ಪಡೆದು ಸೌಹಾರ್ದತೆಯಿಂದ ಬಾಳು ಎಂಬುದು ಕವಿಯ ಆಶಯ. ಅದಕ್ಕೆ ಕವಿ 'ಕಸವ ಸುಟ್ಟು ಜೀವಜಾಲವನ್ನುಳಿಸೋ' ಎಂದು ವಚನದ ಮೂಲಕ ಅಭಿವ್ಯಕ್ತಿಸುತ್ತಾರೆ.

ಮಹಿಳೆಯರ ಮೇಲೆ ಶತಮಾನಗಳಿಂದ ದೌರ್ಜನ್ಯ ನಡೆಯುತ್ತಲೇ ಬಂದಿದೆ. ಶೋಷಣೆ, ದೌರ್ಜನ್ಯದಿಂದ ಮುಕ್ತಿ ಪಡೆಯಲು ಹಾಗೂ ಸ್ವತಂತ್ರ ಜೀವನ ಸಾಗಿಸಲು ಮಹಿಳೆಗೆ ಇಂದಿಗೂ ಸಾಧ್ಯವಾಗಿಲ್ಲ. ಭಾರತದಲ್ಲಿ ಮಹಿಳೆಯರ ಹಕ್ಕುಗಳಿಗಾಗಿಯೇ ೨೦ನೆಯ ಶತಮಾನದಲ್ಲಿ ಅನೇಕ ಚಳುವಳಿಗಳು ನಡೆದವು. ಮಹಿಳೆಯರಿಗಾಗಿಯೇ ಹಿಂದೂ ಕೋಡ್‌ಬಿಲ್‌ನಂತಹ ಹಲವು ಕಾಯ್ದೆಗಳನ್ನು ಸಂವಿಧಾನದಲ್ಲಿ ಅಳವಡಿಸಲಾಯಿತು. ಆದರೆ ಪಿತೃಪ್ರಧಾನ ಆಲೋಚನೆಗಳು, ಪುರೋಹಿತಶಾಹಿ ಚಿಂತನೆಗಳು ಸಂವಿಧಾನದಲ್ಲಿರುವ ಕಾಯ್ದೆಗಳನ್ನು ಪುಸ್ತಕದಲ್ಲಿಯೇ ಉಳಿಯುವಂತೆ ಮಾಡಿವೆ ಎಂಬುದನ್ನು ಆಧುನಿಕ ವಚನದ ಮೂಲಕ ಸರಸ್ವತಿ ಚಿಮ್ಮಲಗಿ ಅವರು ಹೀಗೆ ಹೇಳುತ್ತಾರೆ.

"ಮನೆತುಂಬ ಕಾನೂನಿನ ಪುಸ್ತಕ
ತಲೆತುಂಬ ಕಾಯ್ದೆಗಳ ಭಂಡಾರ

ಕಾನೂನಿನ ಪದವಿ ಹೊರೆ ಹೊರೆ
ಗಂಡನ ಕಿರುಕುಳ ತಾಳದ ಹೆಣ್ಣುಗಳಿಗೆಲ್ಲ
ಬೆಂಬಲಿಸಿ ಬರೆಯುವ ನ್ಯಾಯಾಧೀಶಗಳಿಗೆ
ತನ್ನ ದುಷ್ಟ ಗಂಡನಿಂದ ಬಿಡುಗಡೆ ಸಿಗದೆ ಹೋದುದಕೆ
ಏನೆಂಬೆ ಹೇಳಯ್ಯ ಎಡಬಿಡಂಗಿದೇವ"[೧೪]

ತನ್ನ ಅಂಕಿತನಾಮವನ್ನೆ ಎಡಬಿಡಂಗಿದೇವ ಎಂದು ಮೂದಲಿಸುವ ರೀತಿಯಲ್ಲಿ ಕರೆದುಕೊಂಡಿರುವ ಸರಸ್ವತಿ ಚಿಮ್ಮಲಗಿ ಈ ವಚನದ ಮೂಲಕ ಹೇಳುವುದೇನೆಂದರೆ ಆಧುನಿಕ ಸಂದರ್ಭದಲ್ಲಿ ಮಹಿಳೆ ಎಲ್ಲ ರೀತಿಯ ಶಿಕ್ಷಣ ಪಡೆದು ಕಾನೂನಿನ ಕಾಯ್ದೆಗಳನ್ನು ತಿಳಿದುಕೊಂಡು ಕಾನೂನಿನ ಪದವಿ ಪಡೆದು ನ್ಯಾಯಾಧೀಶೆಯಾಗಿದ್ದಾಳೆ. ತಪ್ಪು ಮಾಡಿದವರಿಗೆ ಶಿಕ್ಷೆ ಪ್ರಕಟಿಸುವ ಅಧಿಕಾರ ಪಡೆದಿದ್ದಾಳೆ. ಗಂಡನಿಂದ ಶೋಷಣೆ, ಕಿರುಕುಳಕ್ಕೊಳಗಾದ ಹೆಣ್ಣುಮಕ್ಕಳಿಗೆಲ್ಲ ನ್ಯಾಯ ಒದಗಿಸಿದ ನ್ಯಾಯಧೀಶೆಯಾಗಿದ್ದಾಳೆ. ಆದರೆ ಅವಳ ಗಂಡನ ದೌರ್ಜನ್ಯ, ಕಿರುಕುಳದಿಂದ ಅವಳಿಗೆ ಮುಕ್ತಿ ಸಿಗದೆ ಹೋಗಿದೆ. ನ್ಯಾಯಾಧೀಶಳೇ ಇಂದು ಅನ್ಯಾಯಕ್ಕೆ ಒಳಗಾಗುವಂತೆ ಪಿತೃಪ್ರಧಾನ ಚಿಂತನೆಗಳು ಮಹಿಳೆಯರ ಮೇಲೆ ಹೇರಿವೆ ಎಂದು ಈ ವಚನದಲ್ಲಿ ಹೇಳುತ್ತಾರೆ.

೨೧ನೇ ಶತಮಾನದಲ್ಲಿ ಮಹಿಳೆ ಶಿಕ್ಷಿತಳಾಗಿದ್ದು, ಆರ್ಥಿಕವಾಗಿ ಸಬಲಳಾಗಿದ್ದಾಳೆ. ಆದರೂ ಪುರುಷರಿಂದ ಮಹಿಳೆಯು ಶೋಷಣೆಗೆ ಒಳಪಡುತ್ತಿದ್ದಾಳೆ ಎಂಬುದನ್ನು ಪ್ರಸ್ತುತ ವಚನ ವಿಷಾದದ ಧ್ವನಿಯಲ್ಲಿ ವ್ಯಕ್ತಪಡಿಸುತ್ತದೆ.

ಇಂದು ಇಡೀ ವ್ಯವಸ್ಥೆಯೇ ಭ್ರಷ್ಟಗೊಂಡಿದೆ. ಅತಿಯಾದ ಸ್ವಾರ್ಥದಿಂದ ಜನರಿಗೆ ಹಣದ ಮೇಲೆ ಮೋಹ ಹೆಚ್ಚಾಗಿದೆ. ಭ್ರಷ್ಟಾಚಾರ ಎಲ್ಲೆಲ್ಲೂ ತಾಂಡವವಾಡುತ್ತಿದೆ. ಇದರಿಂದ ಮಾನವೀಯತೆ ಮತ್ತು ನೈತಿಕತೆ ಅಧಃಪತನವಾಗುತ್ತಿವೆ. ಇಂಥ ವಿಕೃತಿಗಳಿಗೆ ವಚನಗಳು ಪ್ರತಿಕ್ರಿಯಿಸಿವೆ. ಸಮಾಜದಲ್ಲಿ ಅಧಿಕಾರಿಗಳು ಸಾಮಾನ್ಯ ಜನರ ಮುಂದೆ ಹೇಗೆ ವರ್ತಿಸುತ್ತಾರೆ ಎಂಬುದನ್ನು ಅಬ್ದುಲ್ ಬಶೀರ್ ಅವರು ಈ ವಚನದ ಮೂಲಕ ಹೀಗೆ ಹೇಳುತ್ತಾರೆ.

"ಮಾತು ಮಾತಿಗೆ ಝೇಂಕರಿಸುವ ಅಧಿಕಾರಿಗಳ ಕಂಡೆ
ಮಾತು ಮಾತಿಗೆ ಟೀಕಿಸುವ ಅಧಿಕಾರಿಗಳ ಕಂಡೆ
ಮಾತು ಮಾತಿಗೆ ತಿರಸ್ಕರಿಸುವ ಅಧಿಕಾರಿಗಳ ಕಂಡೆ
ಮಾತು ಮಾತಿಗೆ ಹಣಕ್ಕೆ ಕೈಚಾಚುವ ಅಧಿಕಾರಿಗಳ ಕಂಡೆ
ಮಾತು ಮಾತಿಗೆ ಅಸೂಯೆ ಪಡುವ ಅಧಿಕಾರಿಗಳ ಕಂಡೆ
ಮಾತು ಮಾತಿಗೆ ಜಾತಿ ಬಲದ ಮಾತನಾಡುವ ಅಧಿಕಾರಿಗಳ ಕಂಡೆ
ಮಾನವೀಯತೆ ಮೆರೆವ ಅಧಿಕಾರಿಗಳ ನಾ ಕಾಣದಾದೆನಯ್ಯ"[೧೫]

ಅಧಿಕಾರಿಗಳ ದರ್ಪ, ಲಂಚ, ಜಾತಿಬಲ, ತಿರಸ್ಕೃತ ಭಾವ ಮತ್ತು ಬೇಜವಾಬ್ದಾರಿಯಿಂದ ಮಾಡುವ ಕಾರ್ಯವನ್ನು ಕವಿ ಇಲ್ಲಿ ಟೀಕಿಸುತ್ತಿದ್ದಾರೆ. ಹಣಕ್ಕಾಗಿ ಎಂತಹ ಕೆಲಸವನ್ನಾದರೂ

ಮಾಡಿಕೊಡುವ ಈ ಅಧಿಕಾರಿಗಳಿಗೆ ಮಾನವೀಯತೆ ಎಂಬುದಿಲ್ಲ. ಸಾಮಾನ್ಯ ಜನರನ್ನು ಶೋಷಿಸುವ ಅಧಿಕಾರಿಗಳಿಗೆ ಮಾನವೀಯತೆ ಬೇಕು ಎಂಬುದನ್ನು ಇಲ್ಲಿ ಹೇಳುತ್ತಿದ್ದಾರೆ.

ಅಬ್ದುಲ್ ಬಷೀರ್ ಅವರ ಮೇಲಿನ ವಚನ ೧೨ನೆಯ ಶತಮಾನದ ವಚನಗಳ ಶೈಲಿಯಲ್ಲಿದೆ. ಅಂತಹುದೇ ಇನ್ನೊಂದು ವಚನವನ್ನಿಲ್ಲಿ ಕಾಣಬಹುದು.

"ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯಾ
ಎತ್ತಣ ಮಹಮದೀಯ ಶಿಶುನಾಳ ಶರೀಫ ಅವಧೂತ ಜ್ಞಾನಿ ಶಿವಯೋಗಿ ಶಿಷ್ಯ
ಎತ್ತಣ ಕಳಸದ ಗೋವಿಂದಭಟ್ಟ ಸ್ಮಾರ್ತಶಾಖೆಯ ಬ್ರಾಹ್ಮಣ ಗುರು ಎತ್ತಣಿಂದೆತ್ತ
ಸಂಬಂಧವಯ್ಯಾ!
'ಅಲ್ಲಾರಖಾ' ನಿನ್ನೊಳಗೆನ್ನ ಅಡಗಿಹುದೆಂಥ ಚೋದ್ಯವಯ್ಯಾ!"[೧೬]

ಅಲ್ಲಮಪ್ರಭು ಹೇಳುವಂತೆ 'ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯಾ' ಎಂದು ಆರಂಭವಾಗುವ ಈ ಧರ್ಮ ಧರ್ಮಗಳ ನಡುವಿನ ಸೌಹಾರ್ದತೆಯನ್ನು ಕವಿ ಎತ್ತಿ ಹಿಡಿಯುತ್ತಾನೆ. ಎತ್ತಣ ಮಹಮದೀಯ ಶಿಶುನಾಳ ಈ ವಚನ ಶರೀಪ ಅವಧೂತಜ್ಞಾನಿ ಶಿವಯೋಗಿ ಶಿಷ್ಯ ಸ್ಮಾರ್ತಶಾಖೆಯ ಬ್ರಾಹ್ಮಣಗುರು ಗೋವಿಂದ ಭಟ್ಟ ಇವರಿಗೆ ಎತ್ತಣಿಂದೆತ್ತ ಸಂಬಂಧ ಎಂದು ಹೇಳುತ್ತಾ ಹಿಂದೂ ಮುಸ್ಲಿಂ ಧರ್ಮಗಳ ನಡುವಿನ ಸೌಹಾರ್ದತೆಯನ್ನು ಕವಿ ಬೆಸೆಯುತ್ತಿದ್ದಾನೆ. ಪ್ರಸ್ತುತ ಸಂದರ್ಭಕ್ಕೆ ಇದು ಅವಶ್ಯಕವಾದ ವಚನವೆಂದರೆ ತಪ್ಪಾಗಲಾರದು.

ಮಡೆಸ್ನಾನ ಒಂದು ಮೌಢ್ಯಾಚರಣೆ. ಶ್ರೇಣೀಕರಣ ವ್ಯವಸ್ಥೆಯಲ್ಲಿ ಮೇಲ್ವರ್ಗದವರೆಂದು ಗುರುತಿಸಲ್ಪಟ್ಟಿರುವ ಬ್ರಾಹ್ಮಣರು ಪುಣ್ಯಕ್ಷೇತ್ರಗಳಲ್ಲಿ ಉಂಡ ಎಲೆಗಳ ಮೇಲೆ ಶೂದ್ರರು ಮತ್ತು ದಲಿತರು ಉರುಳುಸೇವೆ ಮಾಡಿದರೆ ಪಾಪ ಪರಿಹಾರವಾಗುತ್ತದೆ ಎಂಬ ಮೂಢನಂಬಿಕೆಯನ್ನು ತಳಸಮುದಾಯಗಳಲ್ಲಿ ಬಿತ್ತಲಾಗಿದೆ.

ಇಲ್ಲಿ ಮುಖ್ಯವಾಗಿ ಗಮನಿಸಬಹುದಾದ ಅಂಶವೆಂದರೆ ೧೨ನೆಯ ಶತಮಾನದ ವಚನಗಳಲ್ಲಿ ಇರುವಷ್ಟು ಪ್ರಖರವಾದ ಸಾಮಾಜಿಕ ವಿಡಂಬನೆ, ವೈಚಾರಿಕ ದೃಷ್ಟಿಕೋನ, ಭಾವತೀಕ್ಷ್ಣತೆ ಹಾಗೂ ಸುಲಲಿತ ಗುಣ ಇವುಗಳಲ್ಲಿ ಇಲ್ಲ. ಇದಕ್ಕೆ ಬದಲಾದ ಸಂದರ್ಭವೂ ಕಾರಣವಾಗಿರ ಬಹುದಾದರೂ ಮೂಲತಃ ಆಧುನಿಕ ವಚನಗಳಲ್ಲಿ 'ವಚನಗಳದ್ದೇ ಆದ' ಜೀವನ ದರ್ಶನ, ಕಾವ್ಯತತ್ವ ಇಲ್ಲ. ಕೆಲವು ಸಲ ಇವು ಸರಳ ಸುಭಾಷಿತಗಳಂತೆ ರಚನೆಯಾಗಿವೆ.

### ೫.೨. ಗಜಲ್‌ಗಳು

ಗಜಲ್ ಕನ್ನಡ ಕಾವ್ಯದ ಒಂದು ಪ್ರಕಾರ. ಅರಬ್ಬಿ ಭಾಷೆಯ ಈ ಪ್ರಕಾರ ಪಾರ್ಸಿ ಮತ್ತು ಉರ್ದು ಸಾಹಿತ್ಯದಲ್ಲಿ ಹೊಸದಾಗಿ ರೂಪುತಾಳಿ ನಂತರ ಉರ್ದುವಿನಿಂದ ಕನ್ನಡಕ್ಕೆ ಬಂದಿತು. ಗಜಲ್ ಮೂಲತಃ ಅರಬ್ಬೀ ಶಬ್ದ. ಗಜಲ್ ಎಂದರೆ ಹೆಂಗಸರೊಡನೆ ಮಾತನಾಡುವುದು, ಪ್ರೇಮ-ಮೋಹ-ಅನುರಾಗಗಳನ್ನು ವ್ಯಕ್ತಪಡಿಸುವುದು ಎಂದು ಅರ್ಥ. ಗಜಲ್ ಮೂಲತಃ

ಅರಬ್ಬಿ ಭಾಷೆಯದಾದರೂ ಒಂದು ಕಾವ್ಯ ಪ್ರಕಾರವಾಗಿ ಬೆಳೆಯಲಾಗಲಿಲ್ಲ. ಅದು ಹೆಚ್ಚು ಪ್ರಖ್ಯಾತಿ ಪಡೆದಿದ್ದು ಉರ್ದು ಸಾಹಿತ್ಯದಲ್ಲಿ.

ಕನ್ನಡದಲ್ಲಿ ಗಜಲ್‌ನ ಹುಟ್ಟು, ಬೆಳವಣಿಗೆ ಅದರ ಮಹತ್ವದ ಬಗ್ಗೆ ಈಗಾಗಲೇ ಹಲವು ಚರ್ಚೆಗಳಾಗಿವೆ. ಕನ್ನಡದಲ್ಲಿ ಗಜಲ್ ಪ್ರಕಾರ ರೂಪುತಾಳಲು ಬೇರೆ ಬೇರೆ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಹಾಗೂ ಭಾಷಿಕ ಕಾರಣಗಳಿವೆ. ಹೈದರಾಬಾದ್ ನಿಜಾಮನ ಕಾಲದಲ್ಲಿ ಆಸ್ಥಾನದ ಭಾಷೆಯಾಗಿದ್ದ ಉರ್ದು ಅಲ್ಲಿನ ಜನಸಾಮಾನ್ಯರ ಮೇಲೂ ಪ್ರಭಾವ ಬೀರಿತು. ಅಷ್ಟೇ ಅಲ್ಲ, ಶೈಕ್ಷಣಿಕ ಮಾಧ್ಯಮವಾಗುವಷ್ಟರ ಮಟ್ಟಿಗೆ ಉರ್ದುವಿನ ಪ್ರಭಾವ ವ್ಯಾಪಿಸಿತ್ತು. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಉರ್ದು ಭಾಷೆಯ ಪ್ರಭಾವ ಅಧಿಕವಾಗಿದ್ದರಿಂದ ಆ ಪ್ರದೇಶದಲ್ಲಿ ಕನ್ನಡ ಗಜಲ್‌ಗಳು ರಚನೆಯಾದವು. ಆರಂಭದಲ್ಲಿ ಈ ಗಜಲ್‌ಗಳನ್ನು ಕೇವಲ ಮನರಂಜನಾ ಪ್ರಕಾರವೆಂದು ಕರೆಯಲಾಗಿತ್ತು. ಆದರೆ ಇತ್ತೀಚೆಗೆ ಇವು ಸಾಮಾಜಿಕ ಆಯಾಮಗಳಿಂದ ಬಹುಮುಖಿ ವಿಸ್ತಾರತೆಯನ್ನು ಪಡೆಯುತ್ತಿದೆ.

ಹೀಗೆ ಪರ್ಶಿಯನ್ ಮತ್ತು ಉರ್ದುವಿನ ಪ್ರಭಾವ ಮತ್ತು ಪ್ರೇರಣೆಗಳಿಂದ ಮರುರೂಪ ಪಡೆದ ಕನ್ನಡ ಗಜಲ್‌ಗಳು ಇಂದು ಕನ್ನಡ ಕಾವ್ಯದ ಒಂದು ಪ್ರಕಾರವಾಗಿ ಓದುಗರನ್ನು ಸೆಳೆಯುತ್ತಿವೆ. ಈ ಕಾವ್ಯಪ್ರಕಾರಕ್ಕೆ ಜನಪ್ರಿಯತೆಯನ್ನು ತಂದುಕೊಟ್ಟ ಪ್ರಮುಖ ಗಜಲ್‌ಕಾರರೆಂದರೆ ಪರ್ಶಿಯನ್ ಭಾಷೆಯ ಶ್ರೇಷ್ಠ ಕವಿ ಹಫೀಜ್ ಮತ್ತು ಮಿರ್ಜಾ ಗಾಲಿಬ್.

ಕನ್ನಡದಲ್ಲಿ ೭೦ರ ದಶಕದಿಂದೀಚೆಗೆ ಈ ಗಜಲ್ ಪ್ರಕಾರ ರಚನೆಯಾಯಿತು. ಜೊತೆಗೆ ಬಹುವಿಸ್ತಾರತೆಯನ್ನು ಪಡೆಯುವ ಮೂಲಕ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುವುದರೊಂದಿಗೆ ಓದುಗರಿಗೆ ಹತ್ತಿರವಾಗತೊಡಗಿದವು. ಶಾಂತರಸ ಮತ್ತು ಎಚ್.ಎಸ್. ಮುಕ್ತಾಯಕ್ಕ ಅವರು ಕನ್ನಡದಲ್ಲಿ ಮೊದಲು ಗಜಲ್ ಪ್ರಕಾರದ ಪ್ರಯೋಗ ಮತ್ತು ರಚನೆಗೆ ತೊಡಗಿಸಿಕೊಂಡ ಪ್ರಮುಖ ಕವಿಗಳು.

"ಕನ್ನಡದಲ್ಲಿ ಗಜಲ್‌ಗಳ ರಚನೆ ಪ್ರಾರಂಭವಾಗಿದ್ದು ಎಪ್ಪತ್ತರ ದಶಕದಲ್ಲಿ ಶಾಂತರಸರಿಂದ. ದಶಕಗಳ ಕಾಲದ ಉರ್ದು ಒಡನಾಟ ಮತ್ತು ಮೂಲ ಉರ್ದು ಗಜಲ್‌ಗಳ ಅಪಾರ ಅಧ್ಯಯನಾನಂತರವಷ್ಟೇ ಅವರು ಗಜಲ್ ರಚನೆಗಳಿದಿದಿದ್ದು. ರಚನಾದೃಷ್ಟಿಯಿಂದ ಈ ಕನ್ನಡದ ಗಜಲ್ ಪರಂಪರೆಗೆ ಅವರೇ ಆದ್ಯರಾದರೂ ಪೂರ್ಣ ಪ್ರಮಾಣದ ಗಜಲ್ ಸಂಕಲನವನ್ನು ಮೊದಲು ಪ್ರಕಟಿಸಿದವರು ಮಾತ್ರ ಅವರ ಮಗಳು ಎಚ್.ಎಸ್. ಮುಕ್ತಾಯಕ್ಕ ಅವರು."[೧೭]

ಗಜಲ್‌ಗಳನ್ನು ರಚನೆ ಮಾಡುತ್ತಿರುವ ಇತರೆ ಕನ್ನಡ ಕವಿಗಳೆಂದರೆ ಜಂಬಣ್ಣ ಅಮರಚಿಂತ, ಕಾಶೀನಾಥ ಅಂಬಲಗೆ, ಎಂ.ಎನ್. ವಾಲಿ, ಅಬ್ದುಲ್ ಮಜೀದ್ ಖಾನ್, ಗುರುಮೂರ್ತಿ ಪೆಂಡಕೂರು, ಸಿದ್ಧಲಿಂಗ ಪಟ್ಟಣಶೆಟ್ಟಿ, ಇಟಗಿ ಈರಣ್ಣ, ಶೂದ್ರ ಶ್ರೀನಿವಾಸ್, ಆನಂದ ಝುಂಜರವಾಡ, ಎಚ್.ಎಸ್. ಶಿವಪ್ರಕಾಶ್, ಅಲ್ಲಾಗಿರಿರಾಜ ಕನಕಗಿರಿ, ದಸ್ತಗೀರಸಾಬ್ ದಿನ್ನಿ,

ಚಿದಾನಂದ ಸಾಲಿ, ರವಿ ಹಂಪಿ, ಆರೀಫ್‌ರಾಜಾ, ರಮೇಶ ಅರೋಲಿ, ಗಣೇಶ ಹೊಸ್ಮನೆ ಇನ್ನೂ ಮುಂತಾದವರು. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ದ್ವಿಪದಿ, ಚುಟುಕು, ಹನಿಗವಿತೆ, ಹಾಯ್ಕು, ಆಧುನಿಕ ವಚನ ಮತ್ತು ಗಜಲ್‌ಗಳು ತಮ್ಮ ಕವನ ಸಂಕಲನದ ಕೊನೆಯ ಒಂದೆರಡು ಪಟುಗಳಲ್ಲಿ ಮಾತ್ರ ಕಾಣಿಸುತ್ತಿದ್ದವು. ಆದರೆ ಇತ್ತೀಚೆಗೆ ಆಯಾ ಪ್ರಕಾರಗಳನ್ನು ಒಳಗೊಂಡ ಪ್ರತ್ಯೇಕ ಸಂಕಲನಗಳನ್ನೇ ಕವಿಗಳು ಪ್ರಕಟಿಸುತ್ತಿದ್ದಾರೆ. ಹೀಗೆ ಈ ಸಂಕೀರ್ಣ ಕಾವ್ಯಪ್ರಕಾರಗಳು ಇಂದು ಹಲವು ಸ್ಥಿತ್ಯಂತರಗಳಿಗೆ ಒಳಗಾಗಿವೆ. ಅದರಲ್ಲೂ ಕುತೂಹಲಕಾರಿ ವಿಚಾರವೆಂದರೆ ಕವಿಗೋಷ್ಠಿಗಳಲ್ಲಿ ಹೆಚ್ಚು ಜನರ ಮನಸ್ಸನ್ನು ಗೆಲ್ಲುವುದು ಇಂಥ ಸಣ್ಣಪುಟ್ಟ ಕವನಗಳೇ ಆಗಿವೆ. ಇತ್ತೀಚೆಗೆ ಗಜಲ್ ಒಂದು ಜನಪ್ರಿಯ ಕಾವ್ಯಪ್ರಕಾರವಾಗಿ ಜನರ ಮನಸ್ಸನ್ನು ಗೆಲ್ಲುತ್ತಿದೆ.

> ಬೆಂಕಿಯಿಂದ ಪಾರಾದ ಮನೆಗಳು ಮಂಜಿನಿಂದ ಸುಟ್ಟವು
> ತೈಲದಿಂದುರಿಯದ ದೀಪಗಳು ರಕ್ತದಿಂದುರಿದವು
>
> ಕತ್ತಲೆ ಆಳಕ್ಕಿಳಿದಿತ್ತು, ಬೇರು ಭದ್ರವಾಗಿತ್ತು
> ಬುಡಸಹಿತ ಸುಡಲು, ಸುಟ್ಟು ನಮ್ಮೊಳಗೆ ನಾವು ಉರಿದೆವು
>
> ಕನ್ನಡಿ ಹಿಡಿದು ಕಾಲಾಂತರದಿ ನಿಜರೂಪಕೆ ಅಲೆದೆವು
> ಎದರಾದವರೆಲ್ಲ ಹೆದರಿಸಿತು ತನ್ನಯ ನಿಜ ಸ್ವರೂಪವು
>
> ಕೊರಡಿನಂತೆ ಬಿದ್ದುಕೊಂಡೆ ಎದ್ದೋ ಎದ್ದ ನಿರರ್ಥಕ
> ಜೀವನ ವಿಧಾನ ಅರಿತ ಜೀವಿಗೆ ಸಾರ್ಥಕ ಪ್ರತಿಕ್ಷಣವು
>
> ಪ್ರೇಮ ಬಜಾರಿನಲ್ಲಿದೆ ಎಂದು ಬಜಾರು ಅಲೆದೆವು
> ಒಳಗೆ ಮಡುಗಟ್ಟಿದ ಪ್ರೀತಿಯನ್ನರಿಯದೆ ಹೋದೆವು.[೧೮]

ಮನುಷ್ಯನೊಳಗಣ ಕಿಚ್ಚು, ಸೇಡು, ಆಕ್ರೋಶಗಳು ತಣ್ಣಗೆ ಹೊರಜಗತ್ತಿಗೆ ಕಾಣದಂತೆ ಸುಪ್ತವಾಗಿರುತ್ತವೆ. ಇವು ಜಾತಿ, ಧರ್ಮ, ಮತ ಪಂಥಗಳ ನಡುವೆ ಸಂಘರ್ಷ ಏರ್ಪಟ್ಟಾಗ ಒಮ್ಮೆಲೆ ಸ್ಫೋಟಗೊಳ್ಳುತ್ತವೆ. ಇಂಥ ಮನುಷ್ಯನೊಳಗಣ ಕೇಡಿನ ಮುಖವನ್ನು ಈ ಗಜಲ್ ಕಾಣಿಸುತ್ತದೆ. ಹಾಗೆಯೇ ಮನುಷ್ಯನಲ್ಲಿರುವ ಅವ್ಯಕ್ತ ಮಾನವೀಯ ಪ್ರೀತಿಯನ್ನು ಅರಿಯದೆ ಪ್ರೇಮವನ್ನು ಬಜಾರಿನಲ್ಲಿ ಹುಡುಕುವ ಅಸೂಕ್ಷ್ಮತೆಯನ್ನು ಇಲ್ಲಿ ಕಾಣಬಹುದು.

ಸಾಮಾಜಿಕ ಅಸಮಾನತೆಯನ್ನು ವ್ಯಕ್ತಪಡಿಸುವ ಈ ಗಜಲ್ ಶೋಷಣೆಯ ಒಳ ಹೊರಗನ್ನು ಚಿತ್ರಿಸುತ್ತದೆ. ಮುಖ್ಯವಾಗಿ ಕಾಲವೊಡ್ಡಿದ ನಿರಂತರ ಪರೀಕ್ಷೆಗಳಿಗೆ ಎದೆಗೊಟ್ಟು ನಿಲ್ಲಬೇಕು ಎಂಬ ಆತ್ಮವಿಶ್ವಾಸ ಈ ಗಜಲ್‌ನ ಸ್ಥಾಯಿಯಾಗಿದೆ. ಸಮಾಜದಲ್ಲಿ ನಿತ್ಯ ಸಂಭವಿಸುವ ಅನೇಕ ಅಡೆತಡೆಗಳ ನಡುವೆ ಮನುಷ್ಯ ಛಲದಿಂದ ಬದುಕಬೇಕಾಗಿದೆ ಎಂಬ ಆಶಯ ಇಲ್ಲಿನದು.

ಮನಸ್ಸೇನೋ ಮನಮೋಹಕ ನಕ್ಷೆ ಹಿಡಿದಿಟ್ಟಿದೆ
ಹೊಂದಿಕೆಯಾಗದು ಯಾವ ನಿವೇಶನ ನನ್ನ ಈ ನಕ್ಷೆಗೆ

ರಂಗು ರಂಗಿನ ಶೋಷಣೆ ಥಳುಕು ಒಳಹೊರಗೆ ತುಂಬಿದೆ
ಪ್ರತಿ ಆತ್ಮ ನಿಜಬೆಳಕಿಗೆ ಕೈಯೊಡ್ಡಿದೆ ಭಿಕ್ಷೆಗೆ

ಕೆಸರಲಿ ಅರಳಿ ನಾವು ಪರಿಮಳ ಹಂಚುತ್ತಾ ಹೋದೆವು
ಜೀವನವಿಡೀ ಬಲಿಯಾದೆವು ದುರ್ಗಂಧದ ಶಿಕ್ಷೆಗೆ

ದೀಪದಿಂದ ದೀಪ ನಾವು ಉರಿಸುತ್ತಲೇ ಹೋದೆವು
ನಂದಿದವು ಏರಿದ ದೀಪ ತಮಂಧದ ಹೊಟ್ಟೆಕಿಚ್ಚಿಗೆ

ಮಣ್ಣಿನ ದೇಹದ ಮೇಲೆ ಶೀಶೆಯ ಶಿರಹೊತ್ತು
ನಿಲ್ಲಬೇಕು ಮುಕ್ಕಾಗದೆ ಕಾಲವೊಡ್ಡಿದ ಪರೀಕ್ಷೆಗೆ"

ಇಷ್ಟೆಲ್ಲ ಪರೀಕ್ಷೆಗಳ ನಡುವೆಯೂ ಕವಿ ಮನಸ್ಸು ದೀಪ ಹಚ್ಚುತ್ತಲೇ ಸಾಮಾಜಿಕ ವಿಕೃತಿಗಳಿಗೆ ಉತ್ತರಿಸುತ್ತಿದೆ. ಎಷ್ಟೇ ಕಷ್ಟ ಮತ್ತು ಸವಾಲುಗಳ ನಡುವೆಯೂ ದೀಪ ಹಚ್ಚುವ ಕಾಯಕ ಮನವ ಪ್ರೀತಿಯ ಪ್ರತಿರೂಪವೇ ಆಗಿದೆ. ಪ್ರತಿಯೊಬ್ಬ ಮನುಷ್ಯನ ಆದ್ಯ ಕರ್ತವ್ಯ ಇದೇ ಆಗಿದೆ. ಜೊತೆಗೆ ಬದುಕನ್ನು ಅರ್ಥಪೂರ್ಣವಾಗಿ ಬಾಳಬೇಕು ಎಂಬ ಜೀವನ ಪ್ರೀತಿ ಇಲ್ಲಿನ ಮುಖ್ಯ ಧ್ಯೇಯ. ಈ ಬದುಕಿನ ಸಾಫಲ್ಯತೆಗೆ ನಾವು ಎದೆಗುಂದದೆ ಮುನ್ನಡೆಯಬೇಕು ಎಂಬ ದಿಟ್ಟತನ ಇಲ್ಲಿದೆ.

ಸಮಾಜದಲ್ಲಿ ಜರುಗುವ ಹಿಂಸೆ ಮತ್ತು ನೋವಿಗೆ ಕವಿ ಇಲ್ಲಿ ದನಿಯೆತ್ತಿದ್ದಾನೆ. ಸಂಭವಿಸುವ ಸಾವು ನೋವಿಗೆ ಆತಂಕ ಮತ್ತು ವಿಷಾದ ಎರಡೂ ಭಾವವನ್ನು ವ್ಯಕ್ತಪಡಿಸುತ್ತಿದ್ದಾನೆ. ಆಗಂತುಕ ಬುದ್ಧಿ ಮತ್ತು ಮನಸ್ಸು ಮನುಷ್ಯ ಮನುಷ್ಯನ ನಡುವಿನ ಎರಡು ಜೀವಗಳ ನಡುವೆ ಅಂತರ ಸೃಷ್ಟಿಸುತ್ತದೆ. ಕಾಲನ ನಿರಂತರ ಪಯಣಕ್ಕೆ ನಾವು ಎದುರಾಗಿ ಬದುಕನ್ನು ಈಜಬೇಕಾದ ಸನ್ನಿವೇಶ ಇಲ್ಲಿ ಮನೋಜ್ಞವಾಗಿ ಚಿತ್ರಿಸಲ್ಪಟ್ಟಿದೆ.

ಕೇಳಿ, ಗಮನವಿಟ್ಟು ಬಿಕ್ಕಳಿಕೆ ಮಾತಾಡುತ್ತಿದೆ
ಧ್ವನಿ ಬಂಧಿಸಲ್ಪಟ್ಟಿದೆ; ಮೌನ ಮಾತಾಡುತ್ತಿದೆ

ನಾಳೆ, ಏನೋ ಎಂತೋ ಅರಿಯದಾದರು ಯಾರು
ಬೀಸುವ ಗಾಳಿ, ಮುದ್ದಾನ ವಾಸನೆ ಹಿಡಿದು ತರುತ್ತಿದೆ

ಬದುಕು ಆಗಂತುಕನಂತೆ ಯಾಕೋ ವರ್ತಿಸುತ್ತಿದೆ
ನಮ್ಮಿಂದ ನೆರಳೂ ಕೂಡ ದೂರ ಸರಿಯುತ್ತಿದೆ

ಭೋರ್ಗರೆವ ಕಡಲ ಈಜಿ ದಂಡೆಗೆ ಬಂದೆವು ನಾವು
ಇಂದೆಂಥ ದಂಡೆ; ನಮ್ಮನ್ನು ಮುಳುಗಿಸುತ ಹೋಗುತ್ತಿದೆ

ಕಾಳ ಬದುಕುವ ಸನ್ನಿವೇಶ ತಾನೇ ಸೃಷ್ಟಿಸುತ್ತಿದೆ
ಹಿಡಿದ ಹೂಗೊಂಚಲು ಕಿತ್ತಿ ಕೈಗೆ ಖಡ್ಗ ತೋರಿಸುತ್ತಿದೆ[೨೦]

ಕ್ಷುದ್ರ ಮನುಷ್ಯನ ಜೊತೆ ಸೆಣಸುತ್ತಲೇ ಜೀವನ ಅಮೂಲ್ಯ ಸಮಯವನ್ನು ವ್ಯರ್ಥ ಮಾಡಿದ್ದಕ್ಕೆ ಕವಿಗೆ ಗಾಢ ವಿಷಾದವಿದೆ. ಅಷ್ಟೇ ಅಲ್ಲ, ಈ ಸಮಾಜವನ್ನು ಲೂಟಿ ಮಾಡುತ್ತಿರುವ ದರೋಡೆಕಾರರ ಸ್ವಾರ್ಥ ಬುದ್ಧಿಯನ್ನು ಕವಿ ಖಂಡಿಸುತ್ತಿದ್ದಾನೆ. ಜೊತೆಗೆ ಒಡೆದ ಮನಸ್ಸುಗಳಿಂದ ಹರಿದುಹೋಗಿರುವ ಸಮಾಜದ ವಿಕೃತಿಗಳಿಗೆ ಮುಲಾಮು ಹಚ್ಚುವ ಕಾಯಕದಲ್ಲಿ ನಿರತನಾಗಿದ್ದಾನೆ.

ಭ್ರಷ್ಟಾಚಾರ, ಸುಳ್ಳು, ಮೋಸ, ದರೋಡೆಗಳು ನಡೆಯುತ್ತಿರುವ ಈ ಜಗತ್ತಿನಲ್ಲಿ ಮನುಷ್ಯನಿಗೆ ಬದುಕಲು ನೆಮ್ಮದಿ ಇಲ್ಲ. ಹೀಗಿರುವಾಗ ಹೂವೊಂದನ್ನು ಚುಂಬಿಸಿದ್ದಕ್ಕೆ ಕಟಕಟೆಯನ್ನೇರಬೇಕಾದ ಭಯದ ವಾತಾವರಣವೂ ಅವನನ್ನು ಸುತ್ತುವರಿದಿದೆ.

ಪ್ರೀತಿಯ ಸುತ್ತ ಆವರಿಸಿರುವ 'ಕಗ್ಗತ್ತಲೆಯ ಕಬಂಧ ಹಸ್ತಗಳು' ಮೃತ್ಯುಕೂಪಕ್ಕೆಳೆಸುವ ಆತಂಕದ ಬಗ್ಗೆ ಕವಿಗೆ ಭಯವಿದೆ. ಆದರೆ ಪ್ರೀತಿಯ ಬಲದಿಂದ ಮರಣವನ್ನು ಗೆಲ್ಲಬೇಕೆಂದಿರುವ ಮನುಷ್ಯನ ಆತ್ಮವಿಶ್ವಾಸದ ಬಗ್ಗೆಯೂ ಅಷ್ಟೇ ನಂಬಿಕೆಯಿದೆ. ಜೀವನಪ್ರೀತಿ ಮತ್ತು ಬದುಕಿನ ಬಗೆಗೆ ಇರುವ ಅದಮ್ಯ ಜೀವನೋತ್ಸಾಹ ಆತ್ಮವಿಶ್ವಾಸಕ್ಕೆ ಕೊಂಡೊಯ್ಯುತ್ತಿದೆ. ಹೀಗೆ 'ಪ್ರೀತಿಯ ಮುಖದಿಂದ ಮರಣವನು ಗೆಲ್ಲಬೇಕೆಂದಿರುವೆ' ಎಂಬ ಮಾತಿನ ಹಿಂದೆ ಬದುಕಿನ ಬಗ್ಗೆ ಇರುವ ಆಳವಾದ ಜೀವನಪ್ರೇಮವೇ ತುಂಬಿಹೋಗಿದೆ.

ಧಗಧಗಿಸುವ ಮೃತ್ಯುಶಿಖರದ ಮೇಲೆ ಮೃತ್ಯುವಿನಂತೆ
ಪ್ರೀತಿಯ ಮುಖದಿಂದ ಮರಣವನು ಗೆಲ್ಲಬೇಕೆಂದಿರುವೆ

ಕಗ್ಗತ್ತಲೆಯ ಕಬಂಧಹಸ್ತಗಳು ಮುತ್ತಿವೆ ಮೃತ್ಯುವಿನಂತೆ
ಹಾರಿಸಲು ಬೆಳಕೆ ಪತಾಕೆ ಇರುಳ ಮೆಟ್ಟಿ ಗೆಲ್ಲಬೇಕೆಂದಿರುವೆ

ಅ ಬಟ್ಟೆ; ಈ ಬಟ್ಟೆ; ಮೈಲಿಗೆ ತುಂಬಿದ ನೂರು ಮನದ ಬಟ್ಟೆ
ಮಲ್ಲಿಗೆ ಮಡಿ ಮಾಡಿ ಮಡಿವಾಳನಂತೆ ದಾರಿಯುದ್ದ ಚೆಲ್ಲಬೇಕೆಂದಿರುವೆ

ದರೋಡೆಗಾರರೇ ದಾರಿ ತೋರುವ ದಿಕ್ಸೂಚಿಗಳಾಗಿರುವವರು
ಗೋಮುಖವ್ಯಾಘ್ರರೆಂದೂ ಗೋಪಾಲರಾಗರೆಂದು ಹೇಳಬೇಕೆಂದಿರುವೆ[೨೧]

ಇಂಥ ಗೋಮುಖವ್ಯಾಘ್ರರಲ್ಲಿ ತುಂಬಿರುವ ಗೋಸುಂಬೆತನದ ಬಗ್ಗೆ ಕವಿಗೆ ವಿಷಾದವಿದೆ. ಅದಕ್ಕೆ ಕೆಲವೊಮ್ಮೆ ನೋವು, ಸಂಕಟ ಇನ್ನು ಕೆಲವೊಮ್ಮೆ ಆಕ್ರೋಶದ ಧ್ವನಿಯಲ್ಲಿ ತನ್ನೊಳಗಿರುವ ಸಿಟ್ಟನ್ನೂ ಕವಿ ಹೊರಹಾಕುತ್ತಿದ್ದಾನೆ. ಅಷ್ಟೇ ಅಲ್ಲ ಗೋಮುಖವ್ಯಾಘ್ರರೆಂದೂ ಗೋಪಾಲರಾಗರೆಂದು ಈ ಜಗತ್ತಿಗೆ ಸಾರಲು ತುಡಿಯುತ್ತಿದ್ದಾರೆ.

ಬದುಕಿನ ಸಾರ್ಥಕತೆಯನ್ನು ಕುರಿತು ಈ ಸಾಲುಗಳು ಯಾವುದೂ ಶಾಶ್ವತವಲ್ಲ ಎಂಬ ಆತ್ಯಂತಿಕ ಭಾವವನ್ನು ಉದ್ದೀಪಿಸುತ್ತಿವೆ. ಪ್ರೇಮದಂತೆ ಸಾವೂ ಕೂಡ ಕವಿಗೆ ನಿಗೂಢವಾಗಿ

ಕಾಡಿದೆ. ಅರ್ಥದ ತೆಕ್ಕೆಗೆ ಸಿಕ್ಕದ ಸಾವು ಮತ್ತು ಪ್ರೀತಿಯ ಬಗ್ಗೆ ಕವಿಗೆ ನೋವು ಹಾಗೂ ವಿಚಿತ್ರವಾದ ಕುತೂಹಲ. ಅದಕ್ಕೆ ಬದುಕಿನ ಅರ್ಥವನ್ನು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ.

ಸತ್ತರೂ ಬರಲಿಲ್ಲ ಫಲವೇನು ಕೇಳಿದರೆ ಬಿಡು ಬದುಕು ಅರ್ಥವಾಗಿಲ್ಲ
ಪ್ರೇಮ ಸಾಯುವುದೇನು ಛೀ ಅಲ್ಲ ತೆಗೆ ಸಾವು ಸಹ ನಿಜಕು ಅರ್ಥವಾಗಿಲ್ಲ

ನಾಶವಾಗುವುದು ಎಲ್ಲ ಯಾವುದಕು ಶಾಶ್ವತದ ಪಟ್ಟವಿಲ್ಲ ಇಲ್ಲಿ ಎಂಬ
ಈ ವೇದಾಂತ ಭಾವವಳಿಸಲು ನಿಮಿಷದ ತೋಷವೆ ಸಾಕು ಅರ್ಥವಾಗಿಲ್ಲ

ವ್ಯಾಪಿಸುವುದು ತಿಳಿ ಬಾನು ಸಕಲ ವಿಶ್ವಗಳ ಒಂದಿನಿತೂ ಸ್ಥಳ ಬಿಡದೆ ಸಾವು
ಅದರ ಉಸಿರಾಟ ಆಹಾರಕ್ಕೆಲ್ಲ ಜೀವಗಳೇ ಬೇಕು ಅರ್ಥವಾಗಿಲ್ಲ

ಅದು ಇದು ಅವರಿವರು ಅರಿಯದೆಯೆ ಪ್ರೇಮವನು ಕಂಗೆಟ್ಟು ಹೆಸರಳಿಸಿ ಹೋದರು
ಕಡು ವಿರಹಿಯೆದೆಯಲಿ ಕಮ್ಮಗೆ ಹರಡಿದೆಯದರ ಚೆಂಬೆಳಕು ಅರ್ಥವಾಗಿಲ್ಲ

ಕಣ್ಣು ಮನ ನಮ್ಮವಾಗದೆ 'ಅರಸ' ನಮ್ಮವಾದವು ದುಃಖ ದುಮ್ಮಾನ ದುರಿತ
ವ್ಯರ್ಥ ನಿಂದಿಸಿ ಹೊಗಳಿ ಹಾಳಾದರೂ ಒಳಗಿರುವ ಕೊಳಕು ಅರ್ಥವಾಗಿಲ್ಲ[೨೨]

ಇನ್ನೊಂದು ಗಜಲ್‌ನಲ್ಲಿ ಸಾವು ನಮ್ಮ ಬೆನ್ನ ಬಿಡದ ಬೇತಾಳದಂತೆ ಬೆಂಬತ್ತಿದ ಸ್ಥಿತಿಯನ್ನು 'ಸಾವು ನೀರ ಮೇಲಣ ಗುಳ್ಳೆಯಂತೆ' ಬದುಕು ಕ್ಷಣಿಕ, ಸಾವು ಆಕಸ್ಮಿಕ ಇಂಥ ಸಾವನ್ನು ಯಾರು ತಡೆಯಲಿಕ್ಕಾಗದು. ಗಂಟೆ ಬಾರಿಸಿದೊಡನೆ ನುಸುಳಿ ಹೋಗಲೇಬೇಕಾದ ಸ್ಥಿತಿ ಮನುಷ್ಯರದ್ದು. ಯಾರೂ ನಮ್ಮ ಜೊತೆ ಬರುವುದಿಲ್ಲ ಎಂಬ ನಶ್ವರ ಭಾವ ಈ ಗಜಲ್‌ನಲ್ಲಿ ವ್ಯಕ್ತವಾಗುತ್ತದೆ. ಆ ಗಜಲ್ ಹೀಗಿದೆ.

ಬಂದನು ಒಂದು ದಿನ ಮರಳಿ ಹೋಗಲೇಬೇಕಲ್ಲ
ಅರಿಯದಿದ್ದರೂ ದಾರಿ ಹೊರಳಿ ಹೋಗಲೇಬೇಕಲ್ಲ

ಕರೆದು ತಂದವರು ಯಾರೊ ಜೊತೆಗೆ ಇದ್ದವರು ಯಾರೊ
ಲೆಕ್ಕ ಮುಗಿಯುವುದಿಲ್ಲ ಉರುಳಿ ಹೋಗಲೇಬೇಕಲ್ಲ

ಕರುಳು ಎದೆ ಮನೆ ಮಠ ಎತ್ತರದ ಗೋಡೆ ಕಟ್ಟಿದರೂ
ಗಂಟೆ ಬಾರಿಸಿದೊಡನೆ ನುಸುಳಿ ಹೋಗಲೇಬೇಕಲ್ಲ

ಅಲ್ಲಿ ಇಲ್ಲಿ ಎಂಬ ಗೊಡವೆ ಅಡಗಿದಾಕ್ಷಣವೆ 'ಅರಸ'
ಬಿಚ್ಚಿ ಕಾಯ ಜೀವದ ಸುರುಳಿ ಹೋಗಲೇಬೇಕಲ್ಲ[೨೩]

ಪ್ರೇಮದ ಉತ್ಕಟ, ಜೀವನಪ್ರೀತಿ ಈ ಗಜಲ್‌ನ ಕೇಂದ್ರಸ್ಥಾಯಿ. ನಲ್ಲೆಯ ನೆನೆಪು ಕವಿಯ ಮನದಲ್ಲಿ ಅನೇಕ ತೆರನಾಗಿ ಮೈಮನಗಳನ್ನೂ ಆವರಿಸಿದೆ. ಇಂಥ ತಳಮಳದ ಭಾವದ ಜೊತೆ ಕವಿ ನಲ್ಲೆಯೊಂದಿಗೆ ಸಂವಾದಿಸುತ್ತಿರುವ ಪರಿ ಹೀಗಿದೆ:

ನನ್ನೆದೆಯ ಕಳವಳವು ಅವಳ ಸಂಗೀತದಲಿ ತುಂಬಿ ಬಂತು
ಅವಳ ಜೀವನ ದ್ರವ್ಯ ನನ್ನ ನಭಗಳಲಿ ತುಂಬಿ ಬಂತು

ಒನಪು ಒಯ್ಯಾರಕ್ಕೆ ತೂಗಿತೊನೆದವು ಬೆಟ್ಟ ಕಾಡು ಮೇಡು
ಅವಳ ಉಸಿರಿನ ಕಂಪು ದಶದಿಕ್ಕು ನಭಗಳಲಿ ತುಂಬಿ ಬಂತು

ಕೆನ್ನೆ ಕನ್ನಡಿಯಲಿ ನೋಡಿಕೊಂಡವು ಚುಕ್ಕೆ ತಮ್ಮ ರೂಪ
ಓರೆ ನೋಟದ ಕಾವ್ಯ ರಸಿಕರೆದೆಯಾಳದಲಿ ತುಂಬಿ ಬಂತು

ಹೋದಲ್ಲಿ ಬಂದಲ್ಲಿ ಕುಳಿತಲ್ಲಿ ನಿಂತಲ್ಲಿ ಋತು ವಸಂತ
ಪುಷ್ಪಗಳ ತನಿಗಂಪು ಕೋಗಿಲೆಯ ಹಾಡಿನಲಿ ತುಂಬಿ ಬಂತು

ಪುಳಕಗೊಂಡಿತು ಬಯಲು ಪೈಜಣದ ನಾದಕ್ಕೆ 'ಅರಸ' ನೋಡ
ಅವಳೊಲುಮೆ ತಂಬೆಳಕು ಲೋಕಲೋಕಂಗಳಲಿ ತುಂಬಿ ಬಂತು[೨೪]

ಪ್ರೀತಿ, ಪ್ರೇಮ, ಪ್ರಣಯ ಮತ್ತು ಸಲ್ಲಾಪದಂತೆ ಸಾಮಾಜಿಕ, ಧಾರ್ಮಿಕ ಮತ್ತು ಲೌಕಿಕ ಸಮಸ್ಯೆಗಳಿಗೂ ಗಜಲ್ ಪ್ರತಿಕ್ರಿಯಿಸಿವೆ. ಪ್ರೇಮದಷ್ಟೇ ಧಾರ್ಮಿಕ ಸಾಮರಸ್ಯವೂ ಕವಿಗೆ ಮುಖ್ಯವೆಂಬುದು ಇಲ್ಲಿ ವಿದಿತವಾಗುತ್ತದೆ. ಕೋಮುಸಂಘರ್ಷದ ಚಿತ್ರಣವೊಂದು ಹೀಗಿದೆ:

ಹುಡುಕಲು ಹೊರಟಿರುವರು ಸೂರ್ಯನನ್ನು ಕಗ್ಗತ್ತಲೆಯಲ್ಲಿ
ಇಟ್ಟಿರುವರು ಅಡಗಿಸಿ ಚಂದ್ರನನ್ನು ಅಡಗಿಸಿ ಕಗ್ಗತ್ತಲೆಯಲಿ

ಇಂಗಿಲ್ಲ ಮಣ್ಣಲ್ಲಿ ಮೃತ್ಯು ಹಾಕಿದ ಕಂಬನಿ ಇನ್ನೂ
ಹೂಳಿರುವರು 'ಹೇರಾಮ' ಧ್ವನಿಯನ್ನು ಕಗ್ಗತ್ತಲೆಯಲ್ಲಿ

ರಕ್ತದ ಹೊಳೆಯಲ್ಲಿ ಬೆಂಕಿಯ ಸುರಿಮಳೆ ಹೆಣಗಳ ರಾಶಿಗಳು
ಹುರಿಗೊಳಿಸುತ್ತಿರುವರು ಮೀಸೆಯನ್ನು ಕಗ್ಗತ್ತಲೆಯಲ್ಲಿ

ರೋದಿಸುತ್ತಲಿವೆ ಎಲ್ಲಾ ದಾರಿಗಳು ಎದೆಯ ಗಾಯದಿಂದ
ಎಳೆಯುತ್ತಿರುವರು ಧರ್ಮದ ರಥವನು ಕಗ್ಗತ್ತಲೆಯಲ್ಲಿ

ಹಸಿದ ಹೊಟ್ಟೆಯಲ್ಲಿ ರಾಷ್ಟ್ರಪ್ರೇಮವನು ಕೆದರಿ ನೋಡುತ್ತಿಹರು
ಸೆಳೆಯುತ್ತಿರುವರು ಲಕ್ಷ್ಮಿ ಸೀರೆಯನು ಕಗ್ಗತ್ತಲೆಯಲ್ಲಿ

ಹದ್ದು ಒಯ್ಯುತ್ತಿವೆ ಗುಪ್ತ ಕಣಜಗಳ ಹಾಡ ಹಗಲಿನೊಳಗೆ
ನೋಡುತ್ತಿರುವರು ಪಿಳಿಪಿಳಿ ನಭವನು ಕಗ್ಗತ್ತಲೆಯಲ್ಲಿ[೨೫]

ಮತೀಯ ಸಂಘರ್ಷದ ಸ್ವರೂಪವನ್ನು ಬಿಂಬಿಸುವ ಈ ಗಜಲ್ ರಾಷ್ಟ್ರಪ್ರೇಮ ಮತ್ತು ದೇಶಭಕ್ತಿಯ ಹೆಸರಿನಲ್ಲಿ ನಡೆಸುವ ಹಿಂಸಾತ್ಮಕ ದೃಶ್ಯವನ್ನು ಕಟ್ಟಿಕೊಡುತ್ತದೆ. ಜಾತಿ, ಧರ್ಮ, ಮತ ಪಂಥಗಳ ಹೆಸರಿನಲ್ಲಿ ನಿತ್ಯವೂ ಘಟಿಸುವ ಸಾವು ನೋವುಗಳ ಬಗ್ಗೆ ಕವಿಗೆ ವಿಷಾದವಿದೆ.

ದೇವರು ಧರ್ಮದ ಬಗ್ಗೆ ಗಜಲ್ ರಚನೆಗೊಂಡಿರುವುದು ತುಂಬಾ ವಿರಳ. ಅದರಲ್ಲೂ ದೇವರು ಮತ್ತು ಧರ್ಮದ ಅಸ್ತಿತ್ವವನ್ನು ಪ್ರಶ್ನಿಸುವುದು ಇನ್ನು ಅಪರೂಪ. ಆದರೆ ಇಲ್ಲೊಂದು ಗಜಲ್ ದೇವರುಗಳು ಸತ್ತು ನಾರುತ್ತಿರುವುದರ ಬಗೆಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತದೆ.

ಸತ್ತು ನಾರುತ್ತಿವೆ ದೇವರುಗಳೆಲ್ಲ ಹೂಳುವರು ಗತಿಯಿಲ್ಲ
ವಿಕೃತಿಯಿಂದ ಪ್ರಕೃತಿ ಅಳುತಿಹುದು ಕೇಳುವರು ಗತಿಯಿಲ್ಲ

ಸ್ವಾರ್ಥ ಕೋವಿಗಳ ತೊರೆದು ಹೃದಯದಾರತಿ ಬೆಳಗಿ ಹೊಸಯುಗಕೆ
ಹಾಸಿ ಹೂನಗೆಯ ಹಡದಿ ನಲ್ಬರವ ಬಯಸುವರು ಗತಿಯಿಲ್ಲ

ಸಕಲ ಲೋಕದುಸಿರಾದ ಪ್ರೇಮಕ್ಕೆ ಮೈತುಂಬ ಗಾಯಗಳು
ತಂಬೆಳಕಿನಾತ್ಮದ ಮುಲಾಮನ್ನು ಬಳಿಯುವರು ಗತಿಯಿಲ್ಲ

ಎಲ್ಲೆಡೆಗೂ ವ್ಯಾಪಿಸಿದ ವೈರಕ್ಕೆ ಸ್ನೇಹಕ್ಕೆ ದೀಕ್ಷೆಯನ್ನಿತ್ತು
ನನ್ನಿ ಮಮತೆಗಳಿಂದ ಎದೆಯೆದೆಗಳ ನೇಯುವರು ಗತಿಯಿಲ್ಲ

ಏನೇನೋ ಕುರೂಪಗಳು ಹದಗೆಡಿಸಿ ಬಂಧಿಸಿವೆ ಚೆಲುವನ್ನು
ಮುಕ್ತಗೊಳಿಸುತ್ತ ಅದಕ್ಕೆ ನಿಜರೂಪ ನೀಡುವರು ಗತಿಯಿಲ್ಲ

ಸುತ್ತಲೂ ಮುತ್ತಿರುವ ಕತ್ತಲೆಯ ಗರ್ಭದಲ್ಲೊಂದು ಮಿನುಗು
ಹೊಸಹುಟ್ಟು ನೋ'ಡರಸ' ಅದರಿಂದಲೆ ತರುವವರು ಗತಿಯಿಲ್ಲ[೨೬]

ಅಂದರೆ 'ಸತ್ತ ದೇವರುಗಳನ್ನು ಹೂಳುವವರು ಗತಿಯಿಲ್ಲ'ದ ಅನಾಥ ಸ್ಥಿತಿ ದೇವರುಗಳದ್ದಾಗಿದೆ. 'ಮದಿರೆಗೂ' ಗಜಲ್‌ಗೂ ಅವಿನಾಭಾವ ಸಂಬಂಧ ಉರ್ದುಗಜಲ್‌ಗಳ ಮೂಲವೆಂದು ಕರೆಯಲ್ಪಡುವ ಪಾರ್ಸಿ ಭಾಷೆಯಲ್ಲಿಯೂ ಉಮರ್ ಖಯ್ಯಾಮ್ ತನ್ನ ರುಬಾಯತ್‌ಗಳಲ್ಲಿ ಮದಿರೆಯ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾನೆ

ಇಂದು ಇಲ್ಲೆನಬೇಡ ಕೇಳಿದಷ್ಟೂ ಮಧುವ ತುಂಬಿಕೊಂಡು ಸಾಕಿ
ಮನದ ಸಿಂಪಿಯನೊಡೆದು ಎಣಿಸಬೇಕಿದೆ ನೋವ ತುಂಬಿಕೊಂಡು ಸಾಕಿ

ಏಸೊ ದಿನಗಳ ಬಳಿಕ ಓಲೆ ಬಂದಿದೆಯವಳ ಏನಿದೆಯೊ ಅಲ್ಲಿ
ಮುನಿಸೊ ಒಲವೊ ಅದನು ಸಹಿಸಲಿಕೆ ಬಟ್ಟಲವ ತುಂಬಿಕೊಡು ಸಾಕಿ

ಯಾರಯಾರದೋ ಭಾವಗಳ ಸುಳಿಯಲ್ಲಿ ಕಳೆದು ಹೋಗಿರುವೆ ನಾ
ಹುಡುಕಬೇಕಿದೆ ನನ್ನ ನಾ ಒಳಹೊರಗೆ ಜಾಂಬುವ ತುಂಬಿಕೊಡು ಸಾಕಿ

ಘಾಸಿಗೊಳಿಸುತ್ತಿದೆ ಕಚ್ಚಾಡಿ ಎದೆಯೊಳಗೆ ಹಳೆಯ ನೆನಪುಗಳೆಲ್ಲ
ಹೂಳಿಯವುಗಳ ತೆರೆವೆ ಹೊಸಲೋಕ ಬಟ್ಟಲವ ತುಂಬಿಕೊಡು ಸಾಕಿ[೨೮]

ಇಂಥ ಅನೇಕ ಗಜಲ್‌ಗಳಲ್ಲಿ ಶಾಂತರಸರು ಮದಿರೆಯ ಉನ್ಮತ್ತ ಅನುಭವವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ‘ಮಧುಶಾಲೆ’ ಎಂದರೆ ಮದ್ಯದಂಗಡಿ ಎಂಬ ಸಾಮಾನ್ಯ ಅರ್ಥವಿದೆಯಾದರೂ ಇಲ್ಲಿನ ಅರ್ಥ ಅದೊಂದು ಚಿಂತನಾಕೂಟ ಅಥವಾ ಕಾವ್ಯಕಮ್ಮಟ ಎಂದು ಅರ್ಥ. ಇನ್ನು ಸಾಕಿ ಎಂದರೆ “ಮದ್ಯವನ್ನು ಕವಿಗಳಿಗೆ ಕೊಡುವವ ಎಂದರ್ಥವಿದೆ. ‘ಸಾಕಿ’ ದೇವರ ರೂಪವಾಗಿಯೂ ಪ್ರಯೋಗವಾಗಿದೆ”.[೨೮]

ಕಾವ್ಯದ ಉನ್ಮಾದ ಕವಿಯನ್ನು ಪರವಶಗೊಳಿಸುತ್ತದೆ; ಹೊಸ ಅನುಭವಲೋಕಕ್ಕೆ ಕರೆದೊಯ್ಯುತ್ತದೆ. ಹೀಗೆ ಕಾವ್ಯೋನ್ಮಾದದಲ್ಲಿ ಲೀನವಾಗುವ ಕವಿ ಆತ್ಯಂತಿಕ ಪ್ರೀತಿಗೆ ಹಂಬಲಿಸುತ್ತಾನೆ.

ಸಾಗುವ ದಾರಿ ಬಲು ದೂರ ಹೇಗೆ ಹೋಗಲಿ ಸಾಕಿ
ತಲುಪುವ ಗುರಿಯೂ ತಿಳಿದಿಲ್ಲ ಏನು ಮಾಡಲಿ ಸಾಕಿ

ತಿರ್ರನೆ ತಿರುಗುವ ಧರೆಯ ತಲೆಯಲ್ಲಿ ಹೊತ್ತು ಹೊತ್ತು
ಗೊತ್ತಿಲ್ಲದೆ ತಿರುಗುತ್ತಿವೆ ಹೇಗೆ ಸಾಗಲಿ ಸಾಕಿ

ಪ್ರತಿ ಮನೆಯಲ್ಲೂ ಕಂಬನಿ ತುಂಬಿದ ಕಣ್ಣುಗಳಿವೆ
ಕಣ್ಣೊರೆಸುವ ಬಗೆ ತಿಳಿಯದಿರುವೆ ಹೇಗೆ ತೊಡೆಯಲಿ ಸಾಕಿ

ಕುಡಿದು ಬಂದಿಹೆನೆಂದು ಜರೆಯುತ್ತಿದೆ ಜಗವೆಲ್ಲ
ಕುಡಿಯದೆ ಕುಸಿಯುತ್ತಿದೆ ಮನಸುಗಳು ಹೇಗೆ ಹೇಳಿಲಿ ಸಾಕಿ

ಆಗಸದ ಚಂದಿರನೂ ಜಗವ ನೋಡಿ ನಗುತ್ತಿಹನು
ಪ್ರೇಮದ ನಿಶೆ ಕುರಿತು ಇವರಿಗೆ ಹೇಗೆ ತಿಳಿಸಲಿ ಸಾಕಿ[೨೯]

ಇಂಥ ಅನೇಕ ರಸಘಟ್ಟಗಳು ಕನ್ನಡ ಗಜಲ್‌ಗಳಲ್ಲಿ ಕಾಣಿಸುತ್ತವೆ. ಉರ್ದು ಸಾಹಿತ್ಯದಲ್ಲಿ ಹಲವು ಛಂದೋ ಪ್ರಕಾರಗಳಲ್ಲಿ ಗಜಲ್‌ಗಳು ರಚನೆಯಾಗಿವೆ. ಆದರೆ ಕನ್ನಡದಲ್ಲಿ ಇಂಥ ಪ್ರಯೋಗಗಳು ಕಡಿಮೆ.

ಸಾಮಾನ್ಯವಾಗಿ ಜಗಲ್‌ಗಳು ದ್ವಿಪದಿಯಲ್ಲಿ ರಚನೆಯಾಗಿವೆ. ಆದರೂ ಕನ್ನಡದಲ್ಲಿ ಚೌಪದಿಯ ಸ್ವರೂಪದಲ್ಲಿ ಗಜಲ್‌ಗಳು ರಚನೆಯಾಗಿವೆ. ನಾಲ್ಕು ಸಾಲಿನ ಪದ್ಯವನ್ನು ಕೆಲವರು ಗಜಲ್ ಎಂಬ ಹೆಸರಿನಿಂದ ಕರೆದಿರುವ ಉದಾಹರಣೆಗಳು ಸಹ ಸಿಗುತ್ತವೆ.

### ೫.೩. ಹೋರಾಟದ ಹಾಡುಗಳು

ಹೋರಾಟದ ಹಾಡುಗಳು ಕನ್ನಡ ಕಾವ್ಯಪರಂಪರೆಯಲ್ಲಿ ಇತ್ತೀಚೆಗೆ ಚರ್ಚೆಗೊಳಗಾಗುತ್ತಿದ್ದರೂ ಅವುಗಳ ಚರಿತ್ರೆ ತುಂಬಾ ಪ್ರಾಚೀನವಾದುದು. ಮೌಖಿಕ ಪರಂಪರೆಯ ಹಾಡುಗಳ ಲಯ ಮತ್ತು ಮಟ್ಟುಗಳಲ್ಲಿಯೇ ಇದರ ಮೂಲಬೇರುಗಳು ಚಾಚಿಕೊಂಡಿವೆ. ಜನಪದರ ಹಾಡುಗಳ ವಸ್ತು, ಆಶಯ ಮತ್ತು ಧೋರಣೆಗಳಲ್ಲಿಯೂ ಹೋರಾಟದ ಹಾಡುಗಳ ಛಾಯೆ ಇದ್ದೇ ಇದೆ.

ಶೋಷಣೆ, ಅವಮಾನ ಹಾಗೂ ದೌರ್ಜನ್ಯಗಳ ವಿರುದ್ಧ ಸಿಡಿದೇಳುವ ಗುಣ ಹೋರಾಟದ ಹಾಡುಗಳ ಸೃಷ್ಟಿಗೆ ಮೂಲಪ್ರೇರಣೆ. ಜನಪದರು ಇಂಥ ಅನೇಕ ಬಗೆಯ ಶೋಷಣೆ, ಅವಮಾನಗಳನ್ನು ಅನುಭವಿಸಿಯೇ ಹಾಡುಗಳ ಮೂಲಕ ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸಿದ್ದಾರೆ. ಮೌಖಿಕ ಸಾಹಿತ್ಯದಲ್ಲಿ ನೇರವಾಗಿ ವಿರೋಧಿಸಲಾಗದ ಅಸಹಾಯಕ ಸ್ಥಿತಿಗಳು, ನೋವುಗಳು, ಸಂಗತಿಗಳು ಹಾಡುಗಳ ಮೂಲಕ ವ್ಯಕ್ತವಾಗಿವೆ. ಕೆಲವೊಮ್ಮೆ ನೇರವಾಗಿ ವಿರೋಧಿಸಿದ್ದರೂ ಅವು ಎಲ್ಲೂ ದಾಖಲಾಗಿಲ್ಲ. ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಪರಂಪರೆಯ ಮೂಲಕ ದಾಟಿಸುತ್ತಿರುವ ಆಧಾರದ ಮೇಲೆ ಅವುಗಳ ಆಶಯ ಮತ್ತು ಧೋರಣೆಗಳಿಂದ ಇವು ನೊಂದವರ, ತುಳಿತಕ್ಕೆ ಒಳಗಾದವರ ಅವ್ಯಕ್ತ ಭಾವಗಳು ಎಂದು ಗುರುತಿಸಲಾಗಿದೆ. ಹೀಗೆ ತಮಗೆ ತಾವೇ ಹಾಡಿಕೊಳ್ಳುತ್ತಿದ್ದ ಇಂಥ ಹಾಡುಗಳಿಗೆ ಹೊಸ ತಿರುವು ಸಿಕ್ಕಿದ್ದು ಲಾವಣಿ, ದುಂದುಮೆ, ಕಥನಗೀತೆಗಳಿಂದ. ಜನಪದ ತ್ರಿಪದಿಗಳಲ್ಲಿ ಪ್ರತಿರೋಧದ ಸ್ವರೂಪ ವ್ಯಕ್ತವಾಗಿದ್ದರೂ ಲಾವಣಿಗಳಲ್ಲಿ ಇರುವಷ್ಟು ಬಂಡಾಯದ ತೀವ್ರತೆ ತ್ರಿಪದಿಯಲ್ಲಿ ಇಲ್ಲ ಎನ್ನಬಹುದು.

ಬ್ರಿಟಿಷ್ ಅಧಿಕಾರಿ ಜೆ.ಎಫ್. ಫ್ಲೀಟ್ ಸುಮಾರು ೧೮೮೫ರಲ್ಲಿ ಇಂಡಿಯನ್ ಆಂಟಿಕ್ವೆರಿ ಪತ್ರಿಕೆಯಲ್ಲಿ ಪ್ರಕಟಿಸಿದ ಹಲಗಲಿಯ ಬೇಡರ ಸಶಸ್ತ್ರ ಹೋರಾಟ, ಸಂಗೊಳ್ಳಿ ರಾಯಣ್ಣನ ದಂಗೆ, ಆದಾಯ ತೆರಿಗೆ, ಸಂಗ್ಯನ ಅಪರಾಧ ಮತ್ತು ಸಾವು, ಕಿತ್ತೂರ ಚನ್ನವ್ವನ ಪದ, ಇಂಗ್ರೇಜಿ ಸಂಸ್ಥಾನದ ಮೇಲಿನ ಪದ, ನರಗುಂದದ ಮೇಲಿನ ಹಾಡು ಇನ್ನೂ ಮುಂತಾದ ಬ್ರಿಟಿಷ್ ವಿರೋಧಿ ಕನ್ನಡ ಲಾವಣಿಗಳು ಅಂದಿನ ಬ್ರಿಟಿಷ್ ಪ್ರಭುತ್ವವನ್ನು ವಿರೋಧಿಸಿರುವ ದಾಖಲೆಗಳನ್ನು ತಿಳಿಸುತ್ತವೆ. ಜೆ.ಎಫ್. ಫ್ಲೀಟ್ ಒಬ್ಬ ಬ್ರಿಟಿಷ್ ಅಧಿಕಾರಿಯಾಗಿ ಬ್ರಿಟಿಷ್ ವಿರೋಧಿ ಧೋರಣೆಗಳಿರುವ ಇಂಥ ಕನ್ನಡದ ಲಾವಣಿಗಳನ್ನು ಕಲೆ ಹಾಕಿ, ಸಂಪಾದಿಸಿ, ಪ್ರಕಟಿಸಿದ್ದು ಅವನ ಔದಾರ್ಯವೇ ಸರಿ. ಅಷ್ಟೇ ಅಲ್ಲ; ಅವನಿಗಿದ್ದ ಸಾಹಿತ್ಯಪ್ರೀತಿಯನ್ನು ಮೆಚ್ಚಲೇಬೇಕು. ಫ್ಲೀಟ್ ಅವುಗಳನ್ನು ಸಂಗ್ರಹಿಸದಿದ್ದರೆ ಅವು ಏನಾಗುತ್ತಿದ್ದವೋ ಏನೋ! ಜನರ ಬಾಯಲ್ಲಿದ್ದ ಇಂಥ ಹಾಡುಗಳನ್ನು ಸಂಗ್ರಹಿಸಿ, ಪ್ರಕಟಿಸಿ ಫ್ಲೀಟ್ ಕನ್ನಡಿಗರಿಗೆ ಹಾಗೂ ಕನ್ನಡ ಸಾಹಿತ್ಯಕ್ಕೆ ದೊಡ್ಡ ಉಪಕಾರವನ್ನು ಮಾಡಿದ್ದಾನೆ. ಫ್ಲೀಟ್ ಸಂಗ್ರಹಿಸಿದ ಕನ್ನಡ ಲಾವಣಿಗಳು ಹೈದರಾಬಾದ್ ರಜಾಕಾರರ ಲಾವಣಿ, ತತ್ವಪದಗಳು ಹಾಗೂ ಹೋರಾಟದ ಹಾಡುಗಳಿಗೆ ಜೀವ ತುಂಬಿವೆ ಎನ್ನಬಹುದು. ಜೊತೆಗೆ ೧೯೩೦ರ ದಶಕದಲ್ಲಿಯೇ ಪುರೋಹಿತಶಾಹಿ ದಬ್ಬಾಳಿಕೆ, ಊಳಿಗಮಾನ್ಯ ವ್ಯವಸ್ಥೆಯ ದೌರ್ಜನ್ಯಗಳನ್ನು ತಮ್ಮ ಬರಹ ಭಾಷಣಗಳಲ್ಲಿ ತೀವ್ರವಾಗಿ ಪ್ರತಿರೋಧಿಸುವ ಮೂಲಕ ಶೂದ್ರ ಸಮುದಾಯಗಳಿಗೆ ಎಚ್ಚರಿಕೆಯ ಕರೆ ಕೊಟ್ಟ ಕುವೆಂಪು ಅವರ ಕ್ರಾಂತಿಕಾರಕ ಚಿಂತನೆ ಹಾಗೂ ಪ್ರಗತಿಪರ ವಿಚಾರಗಳು ತಳಸಮುದಾಯ ಅಥವಾ ಶೂದ್ರವರ್ಗಗಳ ಹೋರಾಟಗಳಿಗೆ ನೈತಿಕ ಬೆಂಬಲವನ್ನು ನೀಡಿದವು.

ನವೋದಯ ಸಂದರ್ಭದಲ್ಲಿಯೇ ಪ್ರಕಟವಾದ ಕುವೆಂಪು ಅವರ 'ಕೋಗಿಲೆ ಮತ್ತು ಸೋವಿಯತ್ ರಷ್ಯಾ' ಕವನಸಂಕಲನದಲ್ಲಿ ಬಹುತೇಕ ಕ್ರಾಂತಿಕಾರಿ ಕವಿತೆಗಳಿವೆ.

ಓ ಬನ್ನಿ ಸೋದರರೆ ಬೇಗ ಬನ್ನಿ, ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು, ಓ ನನ್ನ ಚೇತನ ಆಗು ನೀ ಅನಿಕೇತನ, ಕಲ್ಕಿ ತರಹದ ಕವಿತೆಗಳು ಹಾಗೂ 'ನೇಗಿಲಯೋಗಿ'ಯಂಥ ರೈತಗೀತೆಗಳು ಎಪ್ಪತ್ತರ ದಶಕದ ಹೋರಾಟದ ಪದಗಳಿಗೆ ಜೀವಸೆಲೆ ಯಾಗಿವೆ; ಅಷ್ಟೇ ಅಲ್ಲ, ದುಡಿಯುವ ಜನಗಳ ಬದುಕಿಗೆ ನೈತಿಕ ಬೆಂಬಲ ನೀಡಿ ಹೋರಾಟದ ಹಾಡುಗಳಿಗೆ ಪ್ರೇರಣೆ ನೀಡಿವೆ.

ಕನ್ನಡದ ಹೋರಾಟದ ಪದಗಳಿಗೆ ಹೆಚ್ಚು ಪ್ರಭಾವ, ಪ್ರೇರಣೆ ಒದಗಿಸಿದ್ದು ತೆಲುಗಿನ ಗದ್ದರ್, ಚರಬಂಡರಾಜು, ಗೋರಂಟಿ ವೆಂಕನ್ನ ಮುಂತಾದ ಜನಕವಿಗಳು ಕಟ್ಟಿ ಹಾಡಿದ ಪದಗಳು. ಆಂಧ್ರಪ್ರದೇಶ ಮತ್ತು ಈಗಿನ ತೆಲಂಗಾಣ ರಾಜ್ಯಗಳಲ್ಲಿ ಹೋರಾಟದ ಹಾಡುಗಳ ರಚನೆಗೆ ಸ್ಫೂರ್ತಿ ಸಿಕ್ಕಿದ್ದು, ಸ್ವಾತಂತ್ರ್ಯ ನಂತರದಲ್ಲಿ ನಡೆದ ತೆಲಂಗಾಣ ರೈತ ಹೋರಾಟ ಹಾಗೂ ಶ್ರೀ ಕಾಕುಳಂ ಗಿರಿಜನರ ಸಶಸ್ತ್ರ ಹೋರಾಟಗಳಿಂದ. ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳಲ್ಲಿ ನಕ್ಸಲ್ ಬರಿ ಚಳುವಳಿಗಳು ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯ ಮತ್ತು ಕಾಂಗ್ರೆಸ್ ಸರಕಾರದ ಬಂಡವಾಳಶಾಹಿ ಪರವಾದ ರಾಜಕೀಯ ಧೋರಣೆಗಳು ತೆಲುಗು ಸಾಹಿತ್ಯದಲ್ಲಿ ಹೋರಾಟದ ಹಾಡುಗಳು ಸೃಷ್ಟಿಯಾಗಲು ಕಾರಣವಾದವು. ಕಂದಕೂರಿ, ವಿರೇಶಲಿಂಗಂ, ಪಂತುಲು, ಗುರಜಾಡ ಅಪ್ಪಾರಾವು, ವರವರರಾವ್, ಶ್ರೀ ಶ್ರೀ, ಚರಬಂಡರಾಜು, ಗದ್ದರ್, ಗೋರಂಟಿ ವೆಂಕನ್ನ ಮುಂತಾದವರು ಆಂಧ್ರಪ್ರದೇಶ ಮತ್ತು ತೆಲಂಗಾಣದ ಜನಚಳುವಳಿಗೆ ಜೀವಚೈತನ್ಯ ತುಂಬಿದ್ದಾರೆ.

ಕರ್ನಾಟಕದ ೭೦ರ ದಶಕದಲ್ಲಿ ನಡೆದ ಸಾಮಾಜಿಕ, ಸಾಂಸ್ಕೃತಿಕ ವಿದ್ಯಮಾನಗಳು ಹಲವು ಚಳುವಳಿಗಳು ರೂಪುಗೊಳ್ಳಲು ಪ್ರೇರಣೆಯಾದವು. ಕಲಾವಿದ ಮತ್ತು ಬರಹಗಾರರ ಒಕ್ಕೂಟ, ಜಾತಿವಿನಾಶ ಚಳುವಳಿ, ದಲಿತ ಸಂಘಟನೆ, ರೈತ ಚಳುವಳಿ, ದೇವರಾಜ ಅರಸು ಅವರು ಜಾರಿಗೆ ತಂದ ಮಲ ಹೊರುವ ಪದ್ಧತಿ ನಿಷೇಧ ಕಾಯಿದೆ, ಉಳುವವನೆ ಭೂಮಿಯ ಒಡೆಯ ಕಾಯಿದೆ, ಈವರೆಗಿನ ಕನ್ನಡದ ಬಹುತೇಕ ಸಾಹಿತ್ಯ ಬೂಸಾ ಎಂಬ ಬಿ. ಬಸವಲಿಂಗಪ್ಪನವರ ಹೇಳಿಕೆ ಮುಂತಾದ ಸಾಮಾಜಿಕ ಕಾರ್ಯಕ್ರಮಗಳು ನಮ್ಮ ಹಿಂದಿನ ಸಾಹಿತ್ಯ-ಸಂಸ್ಕೃತಿ ಚಿಂತನೆಗಳನ್ನು ಆತ್ಮಾವಲೋಕನ ಮಾಡಿಕೊಳ್ಳಲು ಪ್ರೇರೇಪಿಸಿದವು. ಈ ಎಲ್ಲ ಪ್ರಗತಿಪರ ಆಲೋಚನೆಗಳಿಗೆ ಮೂಲಬೇರು ಬುದ್ಧ, ಬಸವ, ಗಾಂಧಿ, ಮಾರ್ಕ್ಸ್, ಅಂಬೇಡ್ಕರ್, ರಾಮಮನೋಹರ ಲೋಹಿಯಾ, ಜ್ಯೋತಿಬಾ ಫುಲೆ, ಪೆರಿಯಾರ್, ನಾರಾಯಣಗುರು, ಜಯಪ್ರಕಾಶ ನಾರಾಯಣ, ಕುವೆಂಪು ಮುಂತಾದವರ ಚಿಂತನೆಗಳು. ಇವರು ಯುವಕರಲ್ಲಿ ಬಿತ್ತುತ್ತಿದ್ದ ಪ್ರಗತಿಪರ, ಸಮಾನತೆಯ ಬೀಜಗಳು ಹೊಸ ಕ್ರಾಂತಿಗಳ ಹುಟ್ಟಿಗೆ ಕಾರಣವಾದವು. ಈ ಎಲ್ಲ ಅಂಶಗಳು ೭೦ರ ದಶಕದ ಹೋರಾಟಕ್ಕೆ ಬೆನ್ನೆಲುಬಾಗಿ ಹೋರಾಟದ ಹಾಡುಗಳ ರಚನೆಗೆ ಪ್ರೇರಣೆಯಾದವು. ಇದೇ ಸಂದರ್ಭದಲ್ಲಿ ಸಾಹಿತ್ಯದ ಮುಖ್ಯ ಉದ್ದೇಶ, ಪ್ರಯೋಗಗಳ ಬಗ್ಗೆ

ಹೆಚ್ಚು ಚರ್ಚೆಗಳು ನಡೆದವು. ಸಾಹಿತ್ಯವೆಂದರೆ ಏನು? ಎಂಬ ಪ್ರಶ್ನೆ ಹೋರಾಟದ ಹಾಡುಗಳ ಅಧ್ಯಯನ ಸಂದರ್ಭದಲ್ಲಿ ಹೆಚ್ಚು ಮುನ್ನೆಲೆಗೆ ಬಂದಿತು.

ಕನ್ನಡದಲ್ಲಿ ಹೋರಾಟದ ಹಾಡುಗಳನ್ನು ಬರೆದ ಪ್ರಮುಖರೆಂದರೆ ಕೋಟಿಗಾನಹಳ್ಳಿ ರಾಮಯ್ಯ, ಚೆನ್ನಣ್ಣ ವಾಲೀಕಾರ, ಕೆ.ಬಿ. ಸಿದ್ಧಯ್ಯ, ಇಂಧೂದರ ಹೊನ್ನಾಪುರ, ಸಿದ್ಧಲಿಂಗಯ್ಯ, ಆರ್. ಮಾನಸಯ್ಯ, ಸಿ. ದಾನಪ್ಪ ನಿಲೋಗಲ್, ಗೊಲ್ಲಹಳ್ಳಿ ಶಿವಪ್ರಸಾದ್, ಕರ್ನಲ್ ನಾರಾಯಣಸ್ವಾಮಿ, ಸತೀಶ್ ಕುಲಕರ್ಣಿ, ಎನ್. ಮುನಿಸ್ವಾಮಿ, ಹೊನ್ನಪ್ಪ ಜಾಲಗಾರ್, ಓ.ಶಿ. ರಾಮಚಂದ್ರೇಗೌಡ, ಜನಾರ್ಧನ್ ಕೆಸರಗದ್ದೆ ಇನ್ನೂ ಮುಂತಾದವರು.

"ಈ ನಾಡ ಮಣ್ಣಿನಲ್ಲಿ
ಮಣ್ಣಾದ ಜನಗಳ ಕತೆಯ
ಈ ನಾಡ ಮಣ್ಣಿನಲ್ಲಿ
ಹೂವಾಗಿ ಅರಳಿದ ಜನರ
ಹಣ್ಣಿನ ಗಿಡಗಳಲ್ಲಿ
ಹಣ್ಣಾಗಿ ಉದುರಿದೋರ
ಕತೆಯನ್ನು ಹೇಳುತ್ತೀವಿ...
ಕಿವಿಗೊಟ್ಟು ಕೇಳಿರಣ್ಣಾ...
ನೋವಿನ ರಾಗವನ್ನು!"[೩೦]

ತುಮಕೂರು ಜಿಲ್ಲೆಯ ದಾಸನಪುರದ ಚಿಕ್ಕತಿಮ್ಮಯ್ಯ ಎಂಬ ವ್ಯಕ್ತಿಯ ಮೇಲೆ ಸಾಲದ ವಿಷಯಕ್ಕೆ ಸವರ್ಣೀಯರು ೧೯೭೫ ಜೂನ್ ೧ರಂದು ಹಲ್ಲೆ ಮಾಡುತ್ತಾರೆ. ನಂತರ ಚಿಕ್ಕತಿಮ್ಮಯ್ಯ ಪೊಲೀಸರಿಗೆ ದೂರು ಕೊಡುತ್ತಾನೆ. ಇದೇ ಕಾರಣಕ್ಕೆ ತಮಗೆ ಅವಮಾನವಾಯಿತೆಂದು ಚಿಕ್ಕತಿಮ್ಮಯ್ಯನನ್ನು ಸವರ್ಣೀಯರು ಕೊಲೆ ಮಾಡುತ್ತಾರೆ. ಇಂಥ ಅಮಾನುಷ ಕೃತ್ಯವನ್ನು ಪ್ರತಿರೋಧಿಸುವ ಹಾಡು ಇದು. ಈ ಹಾಡು ಬಲಿಷ್ಠರ ದಬ್ಬಾಳಿಕೆ, ಶೋಷಣೆ ಇತ್ಯಾದಿ ವಿಕೃತಿಗಳ ಕರಾಳ ಮುಖಗಳನ್ನು ನಮ್ಮ ಕಣ್ಣ ಮುಂದೆ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯಕ್ಕೆ ತನ್ನ ಪತಿಯನ್ನು ಕಳೆದುಕೊಂಡ ವಿಧವೆ ಜಯಮ್ಮನ ನೋವು, ಸಂಕಟಗಳನ್ನು ಈ ಹಾಡು ಧ್ವನಿಸುತ್ತದೆ. ಕೊನೆಗೆ 'ಸುರಿಮಳೆಯು ಸುರಿಯುವಾಗ ನಾವೆಲ್ಲಾ ಕುಣಿಯಬೇಕು, ಮಾನವರಾಗಬೇಕು' ಎಂಬ ಮಾನವೀಯ ತತ್ವವನ್ನು ಎಲ್ಲರೆದೆಯಲ್ಲಿ ಬಿತ್ತುತ್ತಿರುವುದು ವಿಶೇಷ. ಸೇಡು, ದ್ವೇಷಗಳಾಚೆ ಪ್ರಕಟಗೊಳ್ಳುವ ಈ ಕರುಣಾಭಾವ ಮಾನವ ಸಮೂಹಕ್ಕೆ ಜೀವದ್ರವ್ಯವಾಗಬೇಕಾಗಿದೆ.

೧೯೭೭ ಜುಲೈ ೨೭ರಂದು ಬಿಹಾರದ ಬೆಲ್ಚಿ ಎಂಬ ಗ್ರಾಮದಲ್ಲಿ ಹನ್ನೆರಡು ಜನ ಕೃಷಿ ಕೂಲಿ ಕಾರ್ಮಿಕರನ್ನು ಸಜೀವವಾಗಿ ಸುಡಲಾಯಿತು. ಜಮೀನ್ದಾರನಲ್ಲಿ ಕೂಲಿ ಹೆಚ್ಚಿಗೆ ಕೊಡಬೇಕೆಂದು ಕೇಳಿದ ಕಾರಣಕ್ಕಾಗಿ ಜಮೀನ್ದಾರನಲ್ಲಿ ಕೂಲಿ ಹೆಚ್ಚಿಗೆ ಕೊಡಬೇಕೆಂದು ಕೇಳಿದ

ಕಾರಣಕ್ಕಾಗಿ ಈ ದುರ್ಘಟನೆ ನಡೆಯಿತು. ಈ ಮೇಲಿನ ಎರಡು ಘಟನೆಗಳು ದಲಿತರ, ಶೋಷಿತರ ಸ್ವಾಭಿಮಾನವನ್ನು ಕೆಣಕಿತು. ಇದರಿಂದ ಜಾಗೃತರಾದ ಹೋರಾಟಗಾರರು ಇಡೀ ಭಾರತದಾದ್ಯಂತ, ಹೋರಾಟ ಚಳುವಳಿಗಳನ್ನು ರೂಪಿಸುತ್ತ ಜನರಲ್ಲಿ ಜಾಗೃತ ಪ್ರಜ್ಞೆಯನ್ನು ಮೂಡಿಸಿದರು. ಈ ಕರಾಳ ಘಟನೆ ಭಾರತದ ಹೋರಾಟದ ಚರಿತ್ರೆಗೆ ಹೋಗಿ ತಿರುವನ್ನು ಕೊಟ್ಟಿತು. ಈ ಪ್ರಕರಣವನ್ನು ಆಧರಿಸಿ ಸಿಜಿಕೆ ಅವರು 'ಬೆಲ್ಚಿ' ಎಂಬ ಬೀದಿನಾಟಕವನ್ನು ರಚಿಸಿ ನಾಡಿನಾದ್ಯಂತ ಹಲವು ಪ್ರದರ್ಶನಗಳನ್ನು ಮಾಡುವ ಮೂಲಕ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಮಾಡಿದರು. ಇದಕ್ಕೆ ಸಿದ್ಧಲಿಂಗಯ್ಯ ಅವರು 'ಬೆಲ್ಚಿ ಹಾಡು' ಎಂಬ ಹಾಡನ್ನು ಬರೆದು ಈ ಬೀದಿನಾಟಕ್ಕೆ ಮತ್ತಷ್ಟು ಜೀವ ತುಂಬಿದರು. ಹೀಗೆ ಕಂಬಾಲಪಲ್ಲಿ, ಬೆಂಡಿಗೇರಿಯಂಥ ಪ್ರಕರಣಗಳು ಶೋಷಿತರ ಪರವಾದ ಹೋರಾಟಗಳಿಗೆ ಕಾರಣವಾಗಿವೆ. ಇಂಥ ಚಳುವಳಿ, ಹೋರಾಟಗಳಿಗೆ ರಚಿಸಿದ ಹಾಡುಗಳೇ ಹೋರಾಟದ ಹಾಡು ಅಥವಾ ಹೋರಾಟದ ಪದಗಳು. ಇವುಗಳನ್ನು ಕ್ರಾಂತಿಗೀತೆ, ಧಿಕ್ಕಾರದ ಹಾಡುಗಳು, ಪ್ರತಿರೋಧದ ಹಾಡುಗಳು ಎಂದೆಲ್ಲ ಕರೆಯಲಾಗುತ್ತದೆ. ಇವು ನಾಡಿನ ಮೂಲೆಮೂಲೆಗೂ ಹಬ್ಬಿವೆ. ಈಗಲೂ ದಲಿತ ಸಂಘಟನೆ, ರೈತ ಹೋರಾಟ, ಕಾರ್ಮಿಕ ಹೋರಾಟ, ಪರಿಸರ ಚಳುವಳಿ, ಮಹಿಳಾ ಹೋರಾಟ, ಆರೋಗ್ಯ, ಸಾಕ್ಷರತಾ ಆಂದೋಲನ, ಬೀದಿನಾಟಗಳು, ದೇವದಾಸಿ ಪದ್ಧತಿ ನಿರ್ಮೂಲನಾ ಹೋರಾಟಗಳಲ್ಲಿ ಸಂದರ್ಭಕ್ಕನುಗುಣವಾಗಿ ಹೋರಾಟದ ಹಾಡುಗಳನ್ನು ಹಾಡಲಾಗುತ್ತದೆ.

### ೫.೩.೧. ಹೋರಾಟದ ಹಾಡುಗಳು: ಕಾವ್ಯ ಮತ್ತು ಮೀಮಾಂಸೆಯ ಚರ್ಚೆ

ಹೋರಾಟದ ಹಾಡುಗಳು ಸಾಹಿತ್ಯಿಕವಾಗಿ ಇತ್ತೀಚೆಗೆ ಚರ್ಚೆಗೆ ಒಳಗಾಗುತ್ತಿವೆ. ಇದುವರೆಗೂ ಜನರ ಬಾಯಲ್ಲಿ ಹಾಡಲ್ಪಡುತ್ತಿದ್ದ ಈ ಪದಗಳು, ಸಿದ್ಧಮಾದರಿಯ ಮೀಮಾಂಸೆಯ ಪರಿಕರಗಳನ್ನು ಪುನರ್‌ಮೌಲ್ಯೀಕರಣಕ್ಕೆ ಒಳಗು ಮಾಡುತ್ತಿವೆ. ಜೊತೆಗೆ ಕಾವ್ಯ ಎಂದರೇನು? ಎಂದು ಪ್ರಶ್ನೆ ಮಾಡುತ್ತಿವೆ. ಇದು ಅಂತಿಮವಾಗಿ ಭಾರತೀಯ ಕಾವ್ಯಮೀಮಾಂಸೆ, ಕನ್ನಡ ಕಾವ್ಯಮೀಮಾಂಸೆ, ಜನಪದ ಕಾವ್ಯಮೀಮಾಂಸೆ, ಮಹಿಳಾ ಕಾವ್ಯಮೀಮಾಂಸೆ ಹಾಗೂ ದಲಿತ ಕಾವ್ಯಮೀಮಾಂಸೆ ಎಂಬ ನಿರ್ದಿಷ್ಟ ತೀರ್ಮಾನಗಳು ಮತ್ತು ಪರ್ಯಾಯ ಚಿಂತನಾಕ್ರಮಗಳನ್ನು ಪ್ರಶ್ನಿಸುತ್ತಿದೆ. ಇದು ಇನ್ನೂ ಮುಂದುವರಿದು ಇಪ್ಪತ್ತೊಂದನೆಯ ಶತಮಾನದ ಪ್ರಸ್ತುತ ಸಂದರ್ಭದಲ್ಲಿ ಸಾಹಿತ್ಯ ಎಂದರೇನು? ಎಂಬಲ್ಲಿಗೆ ಬಂದು ನಿಂತಿದೆ. ಈ ರೀತಿಯ ಪ್ರತ್ಯೇಕತೆ ಮತ್ತು ನಿರ್ದಿಷ್ಟತೆಗಳು ಆ ಸಾಹಿತ್ಯಕ್ಕಿರುವ ವಿಶ್ವಾತ್ಮಕತೆ ಮತ್ತು ಅನನ್ಯತೆಗಳನ್ನು ಸೀಮಿತಗೊಳಿಸುತ್ತವೆ. ಈ ಪ್ರಶ್ನೆಗಳನ್ನು ಹೀಗೆ ಮುಂದುವರಿಸುತ್ತ ಹೋದರೆ ತುಳುಕಾವ್ಯ ಮೀಮಾಂಸೆ, ಬ್ಯಾರಿ ಕಾವ್ಯ ಮೀಮಾಂಸೆ ಎಂದೆಲ್ಲ ಬೆಳಸಬಹುದೇ ಹೊರತು, ಅಂಥ ಸಾಹಿತ್ಯ ಪಠ್ಯಗಳಲ್ಲಿರುವ ನೋವು ಸಂಕಟಗಳ ಬಗ್ಗೆ ಸಾಹಿತ್ಯ ಪಠ್ಯಗಳಲ್ಲಿರುವ ನೋವು ಸಂಕಟಗಳ ಬಗ್ಗೆ ಆಲೋಚಿಸುವುದು ಯಾವಾಗ? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಒಂದು ನಿರ್ದಿಷ್ಟ ಸಾಹಿತ್ಯಮೀಮಾಂಸೆಗಳಿಗೆ

ಪರ್ಯಾಯವೇ ಹೊರತು ಮನುಷ್ಯನ ನೋವು, ಸಂಕಟಗಳಿಗೆ ಪರ್ಯಾಯವಾಗಲಿಲ್ಲ. ಅಷ್ಟೇ ಅಲ್ಲ, ಮೇಲೆ ಹೇಳಿದ ಚಿಂತನಾಪ್ರಸ್ಥಾನಗಳು ಮನುಷ್ಯಕೇಂದ್ರಿತ ಚಿಂತನೆಗಳಾಗಿ ಕಾಣುವುದಿಲ್ಲ. ಅಂದರೆ ಈ ಸಾಹಿತ್ಯದ ಚರ್ಚೆಗಳು ಮನುಷ್ಯಕೇಂದ್ರದ ಆಚೆಗೆ ಚರ್ಚಿಸಲ್ಪಡುತ್ತವೆಯೇ ಹೊರತು; ಮನುಷ್ಯನ ನೋವು, ದುಃಖ, ಸಂಕಟಗಳ ಬಗ್ಗೆ ಮಾತಾಡುವುದಿಲ್ಲ ಎಂಬುದು ಇದರ ಹಿಂದಿನ ನಿಲುವು. "ಕನ್ನಡ ಸಾಹಿತ್ಯವೆಂದರೆ ನನಗೆ, ಸುಗ್ರಾಸ, ಭೋಜನ ಮಾಡಿದವರು ನಂತರ ಎಲೆ, ಅಡಿಕೆ, ಲವಂಗ, ಮೆಲ್ಲುತ್ತಾ ಆಡುತ್ತಿರುವ ಮಾತಷ್ಟೇ ಆಗಿ ಕಾಣುತ್ತದೆ. ಪರ್ಯಾಯಗಳ ಬಗ್ಗೆ ಮಾತನಾಡುತ್ತಿರುವವರೂ ಸೇರಿದಂತೆ ಎಲ್ಲಾ ಪ್ರಕಾರಗಳಲ್ಲಿ ಬರೆಯುತ್ತಾ ಮಾತನಾಡುತ್ತಿರುವವರು, ಹುಡುಕಾಡುತ್ತಿರುವವರು ಮಾಡುತ್ತಿರುವ ಕೆಲಸ ಅಷ್ಟೇ. ಅಂದರೆ ಅವರಿಗೆ ತಮ್ಮ ಸುತ್ತಲಿರುವ ಹಸಿವಿನ ಬಗ್ಗೆಯಾಗಲೀ, ಗಾಯಗೊಳ್ಳುತ್ತಿರುವ ಜಗತ್ತಿನ ಬಗ್ಗೆಯಾಗಲಿ ಗಮನವಿಲ್ಲ. ಕನ್ನಡ ಸಾಹಿತ್ಯದಲ್ಲಿ ಮಾತಿನ ಮೂಲಕ ಅಭಿವ್ಯಕ್ತಿಗೊಳ್ಳುವ ಪದಗಳ ರಾಶಿ ಇದೆ; ನಿಜವಾದಂಥ ಕೇಳಿರುವ ಮಾತುಗಳಿಲ್ಲ. ಅಂಥವರು ಕಾಣಿಸುತ್ತಿಲ್ಲ ಎಂದಲ್ಲ. ಅಂಥದ್ದು ಕಾಣಿಸುತ್ತಿಲ್ಲ. ಇಂಥದಿದ್ದರೆ ಎಂದು ಹೇಳಿ, ನಾನು ಚರ್ಚಿಸಲು ಸಿದ್ಧ".[೩೧]

ಅಂದರೆ ಇಲ್ಲಿಯವರೆಗೂ ಅಧ್ಯಯನ ಮಾಡುತ್ತಿದ್ದ ಕಾವ್ಯಮೀಮಾಂಸೆಯ ಚೌಕಟ್ಟು ಸಾಮಾಜಿಕ ನೆಲೆಯಾಗಿ ವಿಸ್ತರಣೆಯಾಗುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಿದೆ. ಅಂದರೆ ನಮ್ಮ ಸುತ್ತಲಿನ ಹಸಿವು ಮತ್ತು ಗಾಯಗೊಂಡಿರುವ ನೋವಿನ ಜಗತ್ತನ್ನು ಈವರೆಗಿನ ಸಾಹಿತ್ಯ ಮತ್ತು ಅದನ್ನು ಕುರಿತು ಅಧ್ಯಯನಗಳು ಮರೆಮಾಚಿವೆ ಎಂಬುದು ಕೋಟಿಗಾನಹಳ್ಳಿ ರಾಮಯ್ಯ ಅವರ ಮಾತುಗಳಿಂದ ವ್ಯಕ್ತವಾಗುತ್ತಿದೆ. ಅಪ್ಪಗೆರೆ ಸೋಮಶೇಖರ್ ಅವರು ಹೋರಾಟ ಹಾಡುಗಳು ದಲಿತ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಸ್ಮಿತೆಯ ಅಭಿವ್ಯಕ್ತಿ ರೂಪಗಳಾಗಿರುವ ಬಗೆಯನ್ನು ಈ ರೀತಿ ಗುರುತಿಸಿದ್ದಾರೆ.

"ಹೋರಾಟದ ಹಾಡುಗಳು ಸಾಹಿತ್ಯಿಕವಾಗಿಯೂ ಸಹ ಪ್ರಭಾವವನ್ನು ಬೀರಿವೆ. ಆವರೆಗಿನ ಸಾಂಪ್ರದಾಯಿಕ ಕಾವ್ಯಾಭಿವ್ಯಕ್ತಿಯು ನಡಿಗೆಯನ್ನು ಪಲ್ಲಟಗೊಳಿಸಿವೆ. ಕಾವ್ಯದ ವಸ್ತು, ಅಭಿವ್ಯಕ್ತಿ, ಪ್ರತಿಮೆ, ರೂಪಕಗಳಲ್ಲಿ ಹೊಸತನವನ್ನು ರೂಪಿಸಿದೆ. ಕನ್ನಡದ ಸ್ಥಾವರಗೊಂಡ 'ಕಾವ್ಯಮೀಮಾಂಸೆ'ಯನ್ನು ಭಗ್ನಗೊಳಿಸುತ್ತ ನೆಲಮೂಲ, ಜನಮೂಲ, ಸಮಾಜಕೇಂದ್ರಿತ ಹೊಸ ಬಗೆಯ 'ಸಾಹಿತ್ಯಮೀಮಾಂಸೆಯ' ತಾತ್ವಿಕತೆಯನ್ನು ಕಟ್ಟಿಕೊಟ್ಟಿವೆ. ಕನ್ನಡ ಕಾವ್ಯವನ್ನು ಮತ್ತೊಮ್ಮೆ 'ಜಾನಪದೀಕರಣ'ಗೊಳಿಸಿದ ಶ್ರೇಯಸ್ಸು ದಲಿತ ಚಳುವಳಿಯ ಹೋರಾಟದ ಹಾಡುಗಳಿಗೆ ಸಲ್ಲುತ್ತದೆ. ಕನ್ನಡದ ದಲಿತ ಸಾಹಿತ್ಯ ಚಳುವಳಿಯ ನಿರ್ಮಾಣದಲ್ಲಿ ಹೋರಾಟದ ಹಾಡುಗಳ ಪಾತ್ರ ಮಹತ್ತರವಾದದ್ದು"[೩೨] ಎನ್ನುವ ಅಪ್ಪಗೆರೆ ಸೋಮಶೇಖರ್ ಅವರು ಈ 'ಹೋರಾಟದ ಹಾಡುಗಳು ಅನೇಕ ಚಳುವಳಿಗಳನ್ನು ಪ್ರಭಾವಿಸಿವೆ' ಎನ್ನುತ್ತಾರಾದರೂ ದಲಿತ ಸಾಹಿತ್ಯದ ವ್ಯಾಪ್ತಿಯಲ್ಲಿಯೇ ವಿಶ್ಲೇಷಣೆ ಮಾಡುತ್ತಾರೆ. ಇದು ಹೋರಾಟದ ಹಾಡುಗಳಿಗಿರುವ ಅನನ್ಯತೆಯನ್ನು ಸೀಮಿತಗೊಳಿಸಿದಂತೆ ಆಗುವುದಿಲ್ಲವೆ? ಎಂಬ ಪ್ರಶ್ನೆ ಎದುರಾಗುತ್ತದೆ. ಎಚ್.ಡಿ. ಉಮಾಶಂಕರ್

ಅವರೂ ಸಹ 'ದಲಿತ ಕಾವ್ಯ: ಕಾವ್ಯ ಮತ್ತು ಸಮಾಜ' ಎಂಬ ಸಂಶೋಧನ ಕೃತಿಯಲ್ಲಿ ಹೋರಾಟದ ಹಾಡುಗಳನ್ನು ದಲಿತ ಕಾವ್ಯದ ಪರಿಪ್ರೇಕ್ಷೆಯಲ್ಲಿಯೇ ಚರ್ಚಿಸಿದ್ದಾರೆ. ಬಹುಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ 'ಬಲಿಪಶು'ಗಳೆಂದು ಪರಿಗಣಿಸಲಾಗಿರುವ, ಅಂಚಿಗೆ ಸರಿಸಲಾದ ಎಲ್ಲರ ಬಗ್ಗೆಯೂ ಹಾಡು ಬರೆದಿದ್ದೇನೆ. ರೈತ, ದಲಿತ, ಹೆಣ್ಣು, ಆದಿವಾಸಿ, ಜೀತಗಾರ ಮಕ್ಕಳು, ಬಾಲಕಾರ್ಮಿಕರು, ಫ್ಯಾಕ್ಟರಿ ಕಾರ್ಮಿಕರು, ಲೈಂಗಿಕ ಕಾರ್ಯಕರ್ತೆಯರು, ಪೌರ ಕಾರ್ಮಿಕ ಮಹಿಳೆಯರು, ಬೀದಿಮಕ್ಕಳು... ಈ ಎಲ್ಲರ ಬಗ್ಗೆಯೂ ಆಯಾ ಸಂದರ್ಭ ಒದಗಿ ಬಂದಾಗಲೆಲ್ಲಾ ಹಾಡು ಬರೆದಿದ್ದೇನೆ"[೩೩] ಎಂಬ ಮಾತಿನಲ್ಲಿ ಗಾಯಗೊಂಡ ಮನಸ್ಸುಗಳೆಲ್ಲರ ನೋವಿಗೂ ದನಿಯಾಗಿದ್ದೇನೆ ಎಂಬ ಸಾರ್ಥಕ ಭಾವವಿದೆ. ಹೋರಾಟದ ಹಾಡುಗಳ ಮುಖ್ಯ ತುಡಿತ ಇದೇ ಆಗಿದೆ.

ದಲಿತ ಕಾವ್ಯ ಮತ್ತು ಹೋರಾಟದ ಹಾಡುಗಳ ಮುಖ್ಯ ಉದ್ದೇಶ ಒಂದೇ ಎನಿಸಿದರೂ ಅವುಗಳ ರಚನಾತ್ಮಕ ನೆಲೆಯಲ್ಲಿ ಸಣ್ಣ ಎಳೆಯಷ್ಟು ಅಂತರವಿದೆ ಎನಿಸುತ್ತದೆ. ಯಾವುದೋ ಒಂದು ನಿರ್ದಿಷ್ಟ ಘಟನೆಯನ್ನಾಧರಿಸಿದ ಲಯಬದ್ಧವಾದ ಆ ಹಾಡಿಗೂ ಸಂಕೀರ್ಣವಾದ ಕಾವ್ಯಕ್ಕೂ ಇರುವ ವ್ಯತ್ಯಾಸಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಉದಾಹರಣೆಗೆ 'ದಲಿತರು ಬರುವರು ದಾರಿ ಬಿಡಿ, ದಲಿತರ ಕೈಗೆ ರಾಜ್ಯ ಕೊಡಿ' ಎಂಬ ಸಾಲಿಗೂ ಕೆ.ಬಿ. ಸಿದ್ಧಯ್ಯ ಅವರ ಬಕಾಲ, ಅನಾತ್ಮ, ಗಲ್ಲೆಬಾನಿ ಮತ್ತು ಮುಳ್ಳೂರು ನಾಗರಾಜ ಅವರ 'ನೆಲದ ಜೋಗುಳ' ಕಾವ್ಯಕ್ಕೂ ಅಂತರವಿದೆ. ಈ ವ್ಯತ್ಯಾಸಗಳು ಮೇಲಿನ ಮಾತುಗಳನ್ನು ಇನ್ನಷ್ಟು ಸ್ಪಷ್ಟಪಡಿಸುತ್ತವೆ. ಅಂದರೆ ಸಮೂಹ ಸೃಷ್ಟಿಯಾಗಿರುವ ಹೋರಾಟದ ಹಾಡುಗಳಿಗೂ ಸ್ವ-ರಚನೆಯ ದಲಿತ ಕಾವ್ಯಕ್ಕೂ ನಡುವೆ ಕಾವ್ಯದ ವಿನ್ಯಾಸ, ರಚನೆ ಮತ್ತು ಆಶಯಗಳಲ್ಲಿ ಭಿನ್ನತೆಗಳಿವೆ. ಇದಕ್ಕೆ ಸಾಂದರ್ಭಿಕವಾದ ಘಟನೆ, ಚಾರಿತ್ರಿಕ ಒತ್ತಡವೂ ಕಾರಣವಿರಬಹುದು. ಅಂದರೆ ಘಟನೆಯನ್ನು ಹೊರಗಿಟ್ಟು ಬರಿ ಹಾಡನ್ನಷ್ಟೇ ಸವಿದರೆ, ಈ ಹಾಡುಗಳ ಒಳಗಿನ ಗಾಯದ ಕತೆ; ನೋವಿನ ರಾಗ ನಮಗೆ ದಕ್ಕುವುದಿಲ್ಲ. "...ದಲಿತ ಲೋಕದ ವಸ್ತುಸ್ಥಿತಿಯು ಅಕ್ಷರ ಮತ್ತು ಅಭಿವ್ಯಕ್ತಿಗಳಾಚೆಗೆ ಹೋಗುವುದರಿಂದ 'ಸಾಹಿತ್ಯ' ಎಂಬುದು ಸೀಮಿತ ಚೌಕಟ್ಟಾಗುತ್ತದೆ. ತೊಡಕಾದ ಪರಿಕಲ್ಪನೆಯಾಗುತ್ತದೆ. ಇದನ್ನು ವಿಶಾಲವಾಗಿ ದಲಿತ ಸಮಗ್ರ ಅಭಿವ್ಯಕ್ತಿ ಎನ್ನಬಹುದು. ದಲಿತರು ತಮ್ಮ ಹೋರಾಟಗಳಲ್ಲಿ ಹೋರಾಟದ ಹಾಡನ್ನು ಹೇಳುತ್ತಿದ್ದರೆ ಮುಖ್ಯ ಹಾಡುಗಾರನಿಗಿಂತಲೂ ಅದಕ್ಕೆ ಕೋರಸ್ ಕೊಡುವವರ ಪಾತ್ರವೂ ಮುಖ್ಯವಾಗಿರುತ್ತದೆ. ಹೋರಾಟಗಳಲ್ಲಿ ಕೂಗುವ ಘೋಷಣೆಗಳು ದಲಿತರ ಅಭಿವ್ಯಕ್ತಿಗಳು. ಆದರೆ ಇವನ್ನೆಲ್ಲ ಸಾಂಪ್ರದಾಯಿಕ ಧೋರಣೆ 'ಸಾಹಿತ್ಯ' ಎಂದು ಪರಿಗಣಿಸಿಲ್ಲ. ಆ ಪರಿಗಣನೆಯೂ ಬೇಕಾಗಿಲ್ಲ. ಈಗ ಒಂದು ಪ್ರಶ್ನೆಯನ್ನು ಎತ್ತಿ ಆ ಕುರಿತು ಚರ್ಚಿಸಬಹುದು. ೨೦೦ಕ್ಕೂ ಹೆಚ್ಚಿನ ಹೋರಾಟದ ಹಾಡುಗಳು, ೧೮೦ಕ್ಕೂ ಹೆಚ್ಚಿನ ದಲಿತ ಬರಹಗಾರರ ಬರವಣಿಗೆಗಳು ಬುದ್ಧಿಜೀವಿ ವಲಯದ ಅಕಾಡೆಮಿಕ್ ಚರ್ಚೆಯ ಮುಂಚೂಣಿಗೆ ಯಾಕೆ ಬರಲಿಲ್ಲ? ಒಂದು ಕಡೆ ಒಬ್ಬರು ದಲಿತ

ಸಾಹಿತ್ಯದ ಒಂದು ಕೃತಿಯನ್ನು ಕುರಿತು 'ಬಡವರ ನಗುವಿನ ಶಕ್ತಿ' ಎಂದು ಕೊಂಡಾಡಿದರು. ಮತ್ತೊಬ್ಬರು ಮತ್ತೊಂದು ಕಡೆ 'ಯಾರ ಜಪ್ತಿಗೂ ಸಿಗದ ನವಿಲುಗಳು' ಎಂದು ಕೊಂಡಾಡಿದರು. ಇಂತಹ ಕಲಾತ್ಮಕ ವೇಷದ ಅಪಾಯಕಾರಿ ಬಿರುದುಗಳೇ ದಲಿತರ ಸಮಗ್ರ ಅಭಿವ್ಯಕ್ತಿಯನ್ನು ಸಮಗ್ರವಾಗಿ ನೋಡದಂತೆ ಮಾಡಿವೆ. ಈ ಬಗೆಯ ಆಸ್ವಾದನಾ ಮತ್ತು ಆರಾಧನಾ ನಿಲುವುಗಳು ಮೇಲ್ನೋಟಕ್ಕೆ ಎಷ್ಟೇ ಗಂಭೀರ ಸಾಹಿತ್ಯ ವಿಮರ್ಶೆಯಾಗಿ ಕಂಡರೂ ಅವುಗಳ ಆಳದಲ್ಲಿ ದಲಿತರ ವಿಶಾಲವಾದ ಅಭಿವ್ಯಕ್ತಿಗಳನ್ನು ಸಮಗ್ರವಾಗಿ ನೋಡದಂತೆ ಮಾಡಿರುವ ನಯವಂಚನೆಯಿದೆ. ಈ ರೀತಿಯಲ್ಲಿ ದಲಿತ ಸಾಹಿತ್ಯ ಕೆಲವೇ ಕೆಲವು ಕೃತಿಗಳ ಮೇಲೆ ಆಸ್ವಾದನಾ ಹಾಗೂ ಆರಾಧನಾ ವಿಮರ್ಶಕರ ನೇರ ದಾಳಿ ನಡೆದಿದೆ. ದಾಳಿ ಮಾಡಿ, ಬಿರುದನ್ನು ದಯಪಾಲಿಸಿದ ಆಸ್ವಾದನಾ ಹಾಗೂ ಆರಾಧನಾ ವಿಮರ್ಶೆಯು ತಾನು 'ಯಾರ ಜಪ್ತಿಗೂ ಸಿಗುವುದಿಲ್ಲ' ಎಂದು ಕಲಾತ್ಮಕ ಭ್ರಮೆಯಲ್ಲಿ ತೇಲುತ್ತಿದೆ. ಈ ದಾಳಿಯ ಸ್ವರೂಪವು ದಲಿತ ಸಾಹಿತ್ಯವನ್ನು ಚಲನಶೀಲ ಸಾಮಾಜಿಕ ಚೌಕಟ್ಟಿನಲ್ಲಿ ಗ್ರಹಿಸುವುದಕ್ಕೆ ಅಡ್ಡಿಯುಂಟುಮಾಡಿದೆ. ಈ ಅಪಾಯವನ್ನು ಬಹಳ ಮುಖ್ಯವಾಗಿ ಪರಿಗಣಿಸಬೇಕಿದೆ."[೩೪]

ದಲಿತ ಸಾಹಿತ್ಯವನ್ನು ಕುರಿತು ಬಂದಿರುವ ಆಸ್ವಾದನಾ ಮತ್ತು ಆರಾಧನಾ ನಿಲುವಿನ ವಿಮರ್ಶೆಗಳಿಗಿಂತ ಭಿನ್ನವಾದ ಸಾಮಾಜಿಕ ನೆಲೆಯ ಸ್ವೀಕಾರದ ಗುಣ ಈ ಹಾಡುಗಳನ್ನು ಕೇಳತಕ್ಕವರಿಗೆ ಇರಬೇಕಾಗುತ್ತದೆ. ಅಷ್ಟೇ ಅಲ್ಲ, ಹಾಡಿಗೆ ಅನುಗುಣವಾಗಿ ಹಾಡುಗಾರ, ಹಾಡುಗಾರನಿಗಿಂತಲೂ ದನಿಯೆತ್ತಿ ಹಾಕುವ ಸಹ ಹಾಡುಗಾರರ ಕೋರಸ್, ಪಂಜರ ಅಥವಾ ತಮಟೆಯ ಶಬ್ದ, ಅಲ್ಲಿನ ಭಾಷಣ, ಕೂಗುವ ಘೋಷಣೆಗಳು, ಕರಪತ್ರಗಳು, ಗೋಡೆ ಬರಹಗಳು ಈ ಎಲ್ಲವೂ ಒಳಗೊಂಡ ಸಾಂಸ್ಕೃತಿಕ ಆಯಾಮವೊಂದು ನಿರ್ಮಾಣವಾದಾಗ ಹೋರಾಟದ ಹಾಡುಗಳ ಪರಕು ಇನ್ನಷ್ಟು ಹೆಚ್ಚುತ್ತದೆ. ಅಂದರೆ ಒಂದು ಪರ್ಯಾಯವಾದ ಚಿಂತನೆಯನ್ನು ಸ್ವೀಕರಿಸುವ ಮನೋಭಾವ ಕೇಳುಗರಲ್ಲೂ ಇದ್ದಾಗ, ಈ ಹಾಡುಗಳು ತನ್ನ ಸತ್ವವನ್ನು ಬಿಟ್ಟುಕೊಡುತ್ತವೆ. "ಪರಿಸ್ಥಿತಿಯನ್ನು ಬಿಂಬಿಸುವುದು ಮತ್ತು ಪರ್ಯಾಯವನ್ನು ರೂಪಿಸುವುದು. ಈ ಹಾಡುಗಳ ಪ್ರಧಾನ ಜಾಯಮಾನ ಮಾಡುವುದು ಮತ್ತು ಆಗುವುದು ಎರಡೂ ಜೊತೆ ಜೊತೆಯಲ್ಲೇ ನಡೆಯುವ ಪ್ರಕ್ರಿಯೆಗಳು. ಇರುವಿಕೆಯ ಸಮಸ್ಯೆಯನ್ನು ಮತ್ತು ಆಗುವಿಕೆಯ ಸವಾಲನ್ನು ಒಟ್ಟೊಟ್ಟಿಗೆ ಇಲ್ಲಿಯ ಹಾಡುಗಳು ಬೆಸೆಯುತ್ತವೆ ಅಥವಾ ಈ ಎರಡೂ ಅಂಶಗಳು ಪ್ರತ್ಯೇಕ ಪ್ರತ್ಯೇಕವಾಗಿ ನಿಲ್ಲದೆ ಒಂದರೊಳಗೊಂದು ಕೂಡಿರುತ್ತವೆ."[೩೫]

ಹೀಗೆ ಕೂಡಿಕೊಂಡಿರುವ ಆಗುವಿಕೆ ಮತ್ತು ಇರುವಿಕೆಯ ಕ್ರಿಯೆಗಳನ್ನು ಬೇರ್ಪಡಿಸಿದರೆ ಇವುಗಳಿಗಿರುವ ಅರ್ಥ ಸಾಧ್ಯತೆಗಳ ಸ್ವರೂಪ ಬದಲಾಗಬಹುದು. ಘಟನೆ ಮತ್ತು ಪರಿಸ್ಥಿತಿಯನ್ನು ಬದಿಗಿಟ್ಟು ಅಕಾಡೆಮಿಕ್ ಶೈಲಿಯಲ್ಲಿ ಇವುಗಳನ್ನು ಅಧ್ಯಯನ ಮಾಡಿದರೆ ಹೋರಾಟದ ಪದಗಳಿಗಿರುವ ಬಹುಮುಖಿ ಆಯಾಮಗಳು ಹೊಳೆಯದಿರುವ ಸಂಭವವೂ ಉಂಟಾಗುತ್ತದೆ.

ಈ ಎರಡೂ ಸಾಧ್ಯತೆಗಳನ್ನು ಹೊಂದಾಣಿಕೆ ಮಾಡಿಕೊಳ್ಳದಿದ್ದಾಗ ಕೇಳುಗರಿಗೆ ನೀರಸವಾಗುವ ಅಪಾಯವನ್ನು ನಾವು ಗಮನಿಸಬಹುದು.

"ಮೆದಕಿನಾಳದ ದಲಿತರ ಮೇಲೆ
ಧಣಿಗಳ ದರ್ಬಾರ ಕೇಳಿದ ಜನಮನ ಮರಮರ
ರಾಯಚೂರು ಜಿಲ್ಲೆ ಲಿಂಗಸ್ಗೂರು ತಾಲೂಕು
ಮಸ್ಕಿ ಹೋಬಳಿ ನಾಲ್ಕರ ದಾರಿ
ದೂರೈತಿ ಮೆದಕಿನಾಳ ಬಡವರ ಪಾಲಿಗೆ ಕರಾಳ
ಬ್ಯಾಗಾರು ಮಾದಾರು ಒಡ್ಡರು ಕೊರವರು
ಹಗಲಿರುಳು ದುಡಿಯುವ ಜೀತಗಾರರು
ದುಡಿಯುವವರು ದಲಿತರು
ಕುಂತು ತಿನ್ನುವರು ಬಲಿತರು"[೩೬]

ಹೋರಾಟದ ಹಾಡುಗಳು ಯಾವುದೋ ನಿರ್ದಿಷ್ಟ ಘಟನೆ ಹಾಗೂ ಸಂದರ್ಭಕ್ಕೆ ಸಂಬಂಧಪಟ್ಟವುಗಳು. ಆ ಮೂಲಕ ಇಂಥ ಹಾಡುಗಳು ಎಷ್ಟೋ ಜನ ದಮನಿತರ, ನೊಂದವರ ನೋವನ್ನು ಪ್ರತಿಫಲಿಸುತ್ತವೆ. ಅಸಹಾಯಕರ ಚರಿತ್ರೆಯನ್ನು ಹಾಡುಗಳ ಮೂಲಕ 'ಜನಕವಿ'ಗಳು ಹಾಡಿದ್ದಾರೆ. ಇಂಥ ರಚನೆಗಳು ಆದಿಮ ಕಾಲದಿಂದಲೂ ಕಂಡುಬರುವುದನ್ನು ಗಮನಿಸಬಹುದು. ಪ್ರಶ್ನೆ ಇರುವುದು ಇಂಥ ಘಟನೆ, ಸಂದರ್ಭಗಳಾಚೆಗೆ ಈ ಹೋರಾಟದ ಹಾಡುಗಳ ಅನನ್ಯತೆ ಯಾವ ಸ್ವರೂಪದ್ದು ಎಂಬುದು ದ್ವೇಷವನ್ನು ವಿರೋಧಿಸಿ, ಪ್ರೀತಿಯನ್ನು ಸ್ವಾಗತಿಸುವ ಈ ಕವಿತೆ ದ್ವೇಷಕ್ಕೆ ದ್ವೇಷವೇ ಉತ್ತರವಲ್ಲ ಎಂಬ ಮಾನವೀಯ ತತ್ವವನ್ನು ಒತ್ತಿ ಹೇಳುತ್ತಿದೆ.

ಜಾತಿ, ಕುಲವಿಲ್ಲದ ಹೊಸ ನಾಡನ್ನು ಕಟ್ಟುವ ಹಂಬಲ ಮತ್ತು ಸಮ ಸಮಾಜದ ಕನಸಿನ ಬೀಜಗಳನ್ನು ಬಿತ್ತುವ ದನಿಯೊಂದು ಈ ನೆಲದ ಹಾಡನ್ನು ಬರೆಯುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಿದೆ.

"ಕಟ್ಟುತ್ತೇವ ನಾವು ಕಟ್ಟುತ್ತೇವ ನಾವು
ಕಟ್ಟೆ ಕಟ್ಟುತ್ತೇವ
ಒಡೆದ ಮನಸುಗಳ ಕಂಡ ಕನಸುಗಳ
ಕಟ್ಟೆ ಕಟ್ಟುತ್ತೇವ ನಾವು
ಕನಸ ಕಟ್ಟುತ್ತೇವ ನಾವು ಮನಸ ಕಟ್ಟುತ್ತೇವ||
ಗೋಳಿಲ್ಲದ ಗುಂಡಿಲ್ಲದ ನಾಡ ಕಟ್ಟುತ್ತೇವ
ಕೋಟಿ ಮನಸಿನ ನೂರು ಕನಸಿನ
ಹಾಡ ಬರೆಯುತ್ತೇವ
ಈ ನೆಲದ ಹಾಡ ಬರೆಯುತೇವ||"[೩೭]

ಒಡೆದ ಮನಸ್ಸುಗಳನ್ನು ಒಂದುಗೂಡಿಸುವ ಮಾನವೀಯ ಪ್ರೀತಿ ಮತ್ತು ಜೀವಪರ ಕಾಳಜಿಯೇ ಈ ಕವನದ ಮುಖ್ಯ ಆಶಯ. ಪ್ರತಿಯೊಬ್ಬ ಮನುಷ್ಯ ನಡೆಯಬೇಕಾದ ಹಾದಿ ಇದೇ ಆಗಿದೆ.

ಗ್ರಾಮೀಣ ಭಾಗದ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯ ಮತ್ತು ಶೋಷಣೆಯ ಹಲವು ಬಗೆಗಳನ್ನು ಸಿ. ದಾನಪ್ಪ ನಿಲೋಗಲ್, ಆರ್. ಮಾನಸಯ್ಯ, ಚೆನ್ನಣ್ಣ ವಾಲೀಕಾರ, ರಮೇಶ್ ಗಬ್ಬೂರು ಮುಂತಾದವರು ಹೋರಾಟದ ಹಾಡುಗಳ ಮೂಲಕ ಕಟ್ಟಿಕೊಟ್ಟಿದ್ದಾರೆ.

ಇಲ್ಲಿ ಮೀಸಲಾತಿಗೆ ಸಂಬಂಧಿಸಿದ ಹಾಡುಗಳಿಂದ ಹಿಡಿದು ನೀರಿನ ಖಾಸಗೀಕರಣ, ಮೌಢ್ಯ ವಿರೋಧ, ಚುನಾವಣೆ ಮತ್ತು ರಾಜಕೀಯ, ಮಹಿಳೆ, ಮಕ್ಕಳ ಹಾಡು, ಪರಿಸರ ಜಾಗೃತಿ, ಆರೋಗ್ಯ ಜಾಗೃತಿ, ಸಾಕ್ಷರತಾ ಆಂದೋಲನ, ದೇವದಾಸಿ ಪದ್ಧತಿ ನಿರ್ಮೂಲನೆ ಇನ್ನೂ ಮುಂತಾದ ವರ್ತಮಾನದ ಸಮಸ್ಯೆಗಳಿಗೆ ಹಾಡುಗಳನ್ನು ರಚಿಸಿದ್ದಾರೆ. ಅದೇ ರೀತಿ ಹಿ.ಶಿ. ರಾಮಚಂದ್ರೇಗೌಡ ಮತ್ತು ಕೃಷ್ಣಮೂರ್ತಿ ಬಿಳಿಗೆರೆ ಅವರು ರೈತರ ಬವಣೆಗಳು, ಕೃಷಿ ಕೂಲಿಕಾರ್ಮಿಕರ ಸಮಸ್ಯೆಗಳು, ನೀರಿನ ಸಮಸ್ಯೆ ಮುಂತಾದವುಗಳ ಬಗ್ಗೆ ಹಾಡು ರಚಿಸಿದ್ದಾರೆ.

ಜನಕವಿಗಳು ಆಯಾ ಸಂದರ್ಭ ಮತ್ತು ಸನ್ನಿವೇಶಗಳಿಗೆ ಅನುಗುಣವಾಗಿ ಬರೆದ ಇಂಥ ಹಾಡುಗಳು ಏಕತಾನತೆಯ ಅಪಾಯಕ್ಕೆ ಸಿಲುಕಿ ವಾಚ್ಯಗೊಂಡಿರುವ ಹಲವು ನಿದರ್ಶನಗಳನ್ನು ಕಾಣಬಹುದು. ಅಕ್ಷರಲೋಕದಿಂದ ದೂರವಿರುವ ದಲಿತ, ತಳಸಮುದಾಯ, ಹಿಂದುಳಿದ ಮತ್ತು ಕೂಲಿ ಕಾರ್ಮಿಕ ಸಮುದಾಯದ ಜನರಿಗೆ ಜಾಗೃತಿ ಮೂಡಿಸುವ ಸಲುವಾಗಿ ಸರಳವಾದ, ಹೇಳಿಕೆ ರೂಪದಲ್ಲಿ ಬರೆಯಲ್ಪಟ್ಟಿರುವ ಕಾರಣದಿಂದ ಬಹುತೇಕ ಹಾಡುಗಳು ವಾಚ್ಯರೂಪದಲ್ಲಿವೆ.

"...ಸಿದ್ಧಲಿಂಗಯ್ಯನವರ ಮಾದರಿಯ ಭಾಷಾಬಳಕೆಯನ್ನೇ ಹಲವಾರು ದಲಿತ ಲೇಖಕರು ಅನುಕರಿಸಿದ್ದರ ಪರಿಣಾಮವಾಗಿ ಬಹುಪಾಲು ದಲಿತ ಸಾಹಿತ್ಯ ಸಿದ್ಧಲಿಂಗಯ್ಯನವರ ಭಾಷೆಯ ಪ್ರತಿಧ್ವನಿಯಾಗಿಯೇ ಕೇಳಿಸತೊಡಗಿದ್ದೂ ಉಂಟು. ಆದರೆ ದಲಿತ ಕವಿಗಳು ತಮ್ಮ ಹೆಸರನ್ನು ಸೂಚಿಸದೆ ಬರೆದ 'ಹೋರಾಟದ ಹಾಡುಗಳು' ಸಂಕಲನದ ಹಾಡುಗಳು ಕನ್ನಡ ಕಾವ್ಯ ನವ್ಯೋತ್ತರದಲ್ಲಿ ಕಂಡ ಹೊಸ ಭಾಷಿಕ ಲಯಗಳಿಗೆ ಸಾಕ್ಷಿಯಂತಿವೆ. ತಮಟೆಯ ಧ್ವನಿ ಕೂಡ ಈ ಹಾಡುಗಳ ಭಾಷೆಯನ್ನು ಪ್ರಭಾವಿಸಿತು. ಹೀಗಿದ್ದೂ ದಲಿತ ಕಾವ್ಯದ ಒಂದು ಮಾದರಿಯ ವಸ್ತು ವಿಷಯವನ್ನೇ ಪ್ರಧಾನವಾಗಿಟ್ಟುಕೊಂಡು ಏಕತಾನತೆಯ ಅಪಾಯಕ್ಕೆ ಸಿಲುಕಿದ್ದೂ ಉಂಟು"[೩೮] ಎಂಬ ಮಾತಿನ ಹಿನ್ನೆಲೆಯಲ್ಲಿ ಆಲೋಚಿಸಿದಾಗ ಈ ಹಾಡುಗಳ ಶಕ್ತಿ ಹಾಗೂ ಮಿತಿಗಳು ನಮಗೆ ತಿಳಿಯುತ್ತವೆ.

ಇತ್ತೀಚೆಗೆ ಪ್ರಕಟವಾಗಿರುವ ಹೋರಾಟದ ಹಾಡುಗಳು ದಲಿತರ ಶೋಷಣೆ, ಅವಮಾನ ಇತ್ಯಾದಿ ವಿಷಯಗಳಾಚೆಗೆ ಆರೋಗ್ಯ ಜಾಗೃತಿ, ಸಾಕ್ಷರತೆ, ಪರಿಸರ ಕಾಳಜಿ, ದೇವದಾಸಿ

ಪದ್ಧತಿ ನಿರ್ಮೂಲನೆ, ಗ್ರಾಮೀಣ ಜನರ ಬದುಕು, ವಲಸೆ, ಜಾಗತೀಕರಣದ ಬಿಕ್ಕಟ್ಟು, ನಗರೀಕರಣದ ಸಮಸ್ಯೆಗಳು ಇನ್ನೂ ಮುಂತಾದ ಸಮಸ್ಯೆಗಳಿಗೆ ಸ್ಪಂದಿಸುವ ನಿದರ್ಶನಗಳನ್ನು ಕಾಣಬಹುದು.

### ದಲಿತ ಹೋರಾಟದ ಹಾಡುಗಳು

ಈಗಲೂ ದಲಿತರನ್ನು ಬೆತ್ತಲೆಗೊಳಿಸಿ ಅವಮಾನಿಸಿ, ಅವರ ಮನೆಗಳಿಗೆ ಬೆಂಕಿ ಹಚ್ಚುವ ಅನೇಕ ಅಮಾನವೀಯ ಘಟನೆಗಳನ್ನು ಕಾಣುತ್ತಿದ್ದೇವೆ. ಬೆಲ್ಚಿ, ಪಂಕ್‌ನಗರ, ವಿಲ್ಲುಪುರ, ಕಂಜವಾಲ, ಕಂಬಾಲಪಲ್ಲಿ ಹೀಗೆ ನಾಡಿನ ಮೂಲೆ, ಮೂಲೆಯಲ್ಲಿ ದಲಿತರನ್ನು ಸುಟ್ಟಸುದ್ದಿಯನ್ನು ಓದಿದ್ದೇವೆ, ಕೇಳಿದ್ದೇವೆ. ಇಂತಹ ಘಟನೆಗಳನ್ನು ಆಧರಿಸಿ ಹಲವು ಹೋರಾಟದ ಹಾಡುಗಳು ರೂಪುಗೊಂಡಿವೆ. ಸಮಾಜವನ್ನು ಹೇಗಿದೆಯೋ ಹಾಗೆ ಉಳಿಸಿಕೊಂಡು ಹೋಗಬೇಕೆನ್ನುವುದು ಬಂಡವಾಳಶಾಹಿ ಮತ್ತು ಭೂಮಾಲೀಕ ವರ್ಗದ ಹಿತಾಸಕ್ತಿಯಾದರೆ, ಆ ಆಯಾಮಗಳನ್ನು ಛಿದ್ರಗೊಳಿಸಿ ಅಲ್ಲಿ ಹೊಸದೊಂದು ಹುಟ್ಟಿಗೆ, ಸಾಮಾಜಿಕ ಬದಲಾವಣೆಗೆ ದುಡಿಯುವವರ ಸಾಹಿತ್ಯ ಒತ್ತಾಯಿಸುತ್ತದೆ. ಆದ್ದರಿಂದ ಅದು ಕಟ್ಟಬಯಸುವ ಸಮಾಜದ ಕ್ರೂರ ವಾಸ್ತವ ಭೀಕರವಾಗಿರುತ್ತದೆ. ಬೆಲ್ಚಿ ಗ್ರಾಮದ ಘಟನೆ ಕುರಿತ ಈ ಕ್ರಾಂತಿ ಕಾವ್ಯವನ್ನು ಗಮನಿಸಿದರೆ ದಲಿತರ ಮೇಲಾಗುವ ಶೋಷಣೆಯ ತೀವ್ರತೆ ತಿಳಿಯುತ್ತದೆ.

"ದೊಡ್ಡಗೌಡರ ಬಾಗಿಲಿಗೆ
ನಮ್ಮ ಮೂಳೆಯ ತ್ವಾರಣ
ನಮ್ಮ ಜನಗಳ ಕಾಲು ಕಯ್ಯಿ
ಕಂಬ ಅವರ ಹಟ್ಟಿಗೆ

ಅವರ ಬೇಟೆಗೆ ನಾವು ಮೊಲಗಳು
ನಮ್ಮ ಬಾಳೆ ಬಂಗಲೆ
ಅವರ ಬಂಗಲೆಯಂಗಳಕ್ಕೆ
ನಮ್ಮ ರಕ್ತದ ರಂಗೋಲೆ

ಅವರ ತೋಟದ ತೆಂಗಿನಲ್ಲಿ
ನಮ್ಮ ರಕ್ತದ ಎಳನೀರು
ಅವರ ಅಮಲಿನ ಗುಂಗಿನಲ್ಲಿ
ಕೂಲಿ ಹೆಣ್ಣುಗಳ ಕಣ್ಣೀರು

ಯಾವ ಪಾಪವ ಮಾಡಲಿಲ್ಲ
ಯಾರ ತಲೆಯನು ಹೊಡೆಯಲಿಲ್ಲ
ಕರಗಿ ನಮ್ಮಯ ಬಾಳ ಕತ್ತಲು
ಕಾಣಲಾರದೆ ಹಗಲನು"[೨೯]

ದಲಿತರು ತಮ್ಮ ದೇಹ ಮತ್ತು ಬದುಕು ಎರಡನ್ನೂ ಭೂಮಾಲೀಕರಿಗೆ ಮುಡುಪಾಗಿಟ್ಟಿರುವುದನ್ನು ಮೇಲಿನ ಹಾಡಿನಿಂದ ಅರಿಯಬಹುದು. ದಲಿತರ ಶ್ರಮದಿಂದ ಅವರು ಸಂತೋಷ, ಅಭಿವೃದ್ಧಿಯನ್ನು ಕಾಣುತ್ತಿದ್ದಾರೆ. ಶ್ರಮಪಟ್ಟವನಿಗೆ ಫಲವಿಲ್ಲ, ಎಲ್ಲಾ ರೀತಿಯಲ್ಲೂ ದಲಿತರನ್ನು ಬಳಸಿಕೊಳ್ಳುತ್ತಿದ್ದಾರೆ. 'ಅವರ ತೋಟದ ತೆಂಗಿನಲ್ಲಿ ನಮ್ಮ ರಕ್ತದ ಎಳನೀರು, ಅವರ ಅಮಲಿನ ಗುಂಗಿನಲ್ಲಿ ಕೂಲಿ ಹೆಣ್ಣುಗಳ ಕಣ್ಣೀರು' ಎನ್ನುವಲ್ಲಿ ದಲಿತ ಹೆಣ್ಣುಮಕ್ಕಳನ್ನು ಶೋಷಿಸುವ ಬಗೆಯನ್ನೂ ಇಲ್ಲಿ ಕಾಣಬಹುದು. ಕವಿ 'ರಕ್ತ' ಎಂಬ ಪದವನ್ನು ಪದೇ ಪದೇ ಬಳಸುತ್ತಿದ್ದಾನೆ. ದೇಹಕ್ಕೆ ಆಸರೆಯಾದ ರಕ್ತವನ್ನೇ ಭೂಮಾಲೀಕ ವರ್ಗದವರಿಗೆ ತೇಯುತ್ತಿದ್ದಾರೆ. ತಮ್ಮ ಸ್ವಾರ್ಥ ಮತ್ತು ಸಂತೋಷಕ್ಕೆ ಭೂಮಾಲೀಕರು ದಲಿತರನ್ನು ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಈಗಲೂ ಕತ್ತಲಿನಲ್ಲಿಯೇ ದಲಿತರ ಬದುಕು ಸಾಗುತ್ತಿದೆ.

ಈ ಸಮಾಜಕ್ಕೆ ನಿರಂತರವಾಗಿ ಕಂಟಕವಾಗಿರುವ ಜಾತಿ ದಲಿತರನ್ನು ಶೋಷಿಸುತ್ತಿದೆ. ಮೇಲ್ವರ್ಗ ಮತ್ತು ಮಧ್ಯಮ ವರ್ಗಗಳು ದಲಿತರ ಶೋಷಣೆಗೆ ನೇರ ಹೊಣೆಗಾರರು. ದಲಿತರ ಶತ್ರು ಪುರೋಹಿತರ ವರ್ಗ ಅಥವಾ ಬ್ರಾಹ್ಮಣಶಾಹಿ ವರ್ಗ ಎಂದು ದಿಕ್ಕು ತಪ್ಪಿಸಲಾಗುತ್ತಿರುವ ಸಂದರ್ಭದಲ್ಲಿ ಇಂತಹ ಕ್ರಾಂತಿ ಗೀತೆಗಳು ದಲಿತರ ನಿಜವಾದ ಶತ್ರು ಯಾರೆಂಬುದನ್ನು ತೋರಿಸಿಕೊಟ್ಟಿವೆ.

ಬಂಡವಾಳಶಾಹಿ, ಪರೋಹಿತಶಾಹಿವರ್ಗ ಹಾಗೂ ಭೂಮಾಲೀಕ ವರ್ಗಗಳು ಅಸಹಾಯಕತೆಯ ಸಂದರ್ಭವನ್ನು ಸೃಷ್ಟಿ ಮಾಡಿ ದಲಿತ ಮಹಿಳೆ ಮತ್ತು ದಲಿತ ಪುರುಷರನ್ನು ಶೋಷಣೆಗೆ ಒಳಪಡಿಸಿರುವುದನ್ನು ಈ ಮೇಲಿನ ಕವಿತೆಯಲ್ಲಿ ತಿಳಿಯುತ್ತದೆ.

ದಲಿತ ಕಾವ್ಯ ತನ್ನ ಚಹರೆಗಳನ್ನು ತನ್ನ ಸಾಂಸ್ಕೃತಿಕ ಪರಂಪರೆಯಿಂದ ಪಡೆದುಕೊಂಡಿದೆ. ಜೀವನದ ಎಲ್ಲ ಸಂಗತಿಗಳನ್ನು ಒಳಗೊಂಡಂತೆ ಹಬ್ಬ, ಆಚರಣೆ, ದುಡಿಮೆ ಸಮಗ್ರ ಬದುಕಿನ ಸಾಂಸ್ಕೃತಿಕ ಚಹರೆಯ ಭಾಗವೇ ಆಗಿದೆ. ದಲಿತ ಕಾವ್ಯ ಹೆಸರೇ ಹೇಳುವಂತೆ ನೊಂದವರ ಅಭಿವ್ಯಕ್ತಿಯ ಸಂಕೇತವಾಗಿ ಹುಟ್ಟಿಕೊಂಡ ಕಾವ್ಯ. ಅದಕ್ಕಾಗಿಯೇ ದಲಿತ ಕಾವ್ಯದ ವಸ್ತು ಸದಾ ಹಸಿದ ಒಡಲಿನ ಸುತ್ತ ಸುತ್ತುತ್ತಿರುತ್ತದೆ. ಹಸಿದವರ ಒಡಲಿನ ಆರ್ತನಾದ ಕಾವ್ಯದ ನಿರೂಪಣೆಯನ್ನು ರೂಪಿಸಿದೆ.

ಜಾತಿ ತಾರತಮ್ಯ ಮಾಡುವ ಮನಸ್ಸುಗಳಿಗೆ ಮಾನವೀಯತೆಯ ಬೇರುಗಳನ್ನು ಅರ್ಥ ಮಾಡಿಸುವಂತಹ ಹಾಗೂ ಮೂಲಭೂತವಾದಿ ಚಿಂತನೆಯನ್ನು ಬಿತ್ತುವಂತಹ ಮನಸ್ಸುಗಳಿಗೆ ಮಾನವೀಯತೆ ಮತ್ತು ವೈಚಾರಿಕತೆಯನ್ನು ಅರ್ಥ ಮಾಡಿಸುವ ತುಡಿತ ದಲಿತ ಕಾವ್ಯಕ್ಕಿದೆ. ಅಸಮಾನತೆಯನ್ನು ಪೋಷಿಸಿ, ಯುಗಯುಗಗಳಿಂದ ದಲಿತರ ಮೇಲೆ ದಬ್ಬಾಳಿಕೆ ಮಾಡಿ, ದೌರ್ಜನ್ಯವೆಸಗುವ ಜನರ ವಿರುದ್ಧ ಪ್ರತಿಭಟನೆ, ಭೀತಿ ಹುಟ್ಟಿಸುವಂತಹ ಒಂದು ಹೋರಾಟದ ಹಾಡು ಹೀಗಿದೆ.

"ಬರುತಿಹೆವು ನಾವು ಬರುತಿಹೆವು
ಬರುತಿಹೆವು ನಾವು ಬರುತಿಹೆವು
ಯುಗಯುಗಗಳಿಂದ ನೀವು ತುಳಿದ ಜನಗಳ
ಕೊರಳ ಧ್ವನಿಗಳು ನಾವು

ಅಸಮಾನತೆಯನ್ನು ಸುಟ್ಟುಬಿಡಲು
ಬುಗಿಲೆದ್ದ ಬೆಂಕಿಯ ಜ್ವಾಲೆಗಳು
ಬೆಲ್ಚಿ ಗ್ರಾಮದಲ್ಲಿ ನೀವು ಸುಟ್ಟ
ಬಡಜನರ ಬೂದಿಯಿಂದೆದ್ದವರು
ಪಂಥ ನಗರದಲ್ಲಿ ಕೂಲಿ ಜನಗಳ
ಬಸಿದ ನೆತ್ತರ ಬಾಂಬುಗಳಾಗಿ
ಬೆಳೆದು ಬಂದಿಹ ಧೀರರು

ಹಸಿದ ಜನಗಳ ಬೆವರ ಮೈಗಳು
ನೊಂದವರೆದೆಯ ನೋವಿನ ಕೂಗು
ನಮ್ಮನು ನಡೆಸುವ ಸಿದ್ಧಾಂತ
ಕೂಲಿ ಜನಗಳ ಗೋಳು ತಡೆಯಲು
ನಡೆದಿದೆ ನಮ್ಮ ಹೋರಾಟ"[೪೦]

ಕರ್ನಾಟಕದಲ್ಲಿ ದಲಿತ ಚಳುವಳಿ ಆರಂಭಗೊಂಡಿದ್ದು ೭೦ರ ದಶಕದ ನಂತರ. ಅಕ್ಷರಸ್ಥ ದಲಿತರಲ್ಲಿ ಹೋರಾಟದ ಬಗ್ಗೆ ಒಲವು ಮೂಡಿಸಿದ ಸಂದರ್ಭದಲ್ಲಿ ಅನೇಕ ಚಳುವಳಿಗಳನ್ನು ಮಾಡಿ, ದಲಿತರಿಗೆ ಜಾಗೃತಿಯನ್ನು ಮೂಡಿಸುವ ಕಾರ್ಯವನ್ನು ಅಲ್ಲಿಂದ ಈಚೆಗೆ ಶುರುಮಾಡಿದರು. ಅಂತಹ ಸಂದರ್ಭದಲ್ಲಿ ಹಲವು ಹೋರಾಟದ ಹಾಡುಗಳನ್ನು ರಚಿಸಿದರು. ಹಿಂದೆ ಶೋಷಣೆಗೆ ಒಳಗಾದ ದಲಿತರ ಘಟನೆಗಳನ್ನು ಹಾಗೂ ಅನ್ಯಾಯಕ್ಕೆ ಒಳಪಡಿಸಿದವರ ವಿರುದ್ಧ ಹೋರಾಡುವ ಸಂಗಾತಿಗಳೆಲ್ಲ ಸೇರಿಕೊಂಡು ಈ ರೀತಿಯ ಎಚ್ಚರಿಕೆಯನ್ನು ಮೂಡಿಸುವ ಜೊತೆಗೆ ಹಾಡುಗಳನ್ನು ಸಹ ರಚಿಸಿದರು.

ಬಂಡವಾಳಶಾಹಿ ಮತ್ತು ಪುರೋಹಿತಶಾಹಿ ವರ್ಗ ಹಾಗೂ ಭೂಮಾಲೀಕ ವರ್ಗಗಳ ಕ್ರೌರ್ಯಗಳ ವಿರುದ್ಧ ಸೆಟೆದು ನಿಂತು ಪ್ರತಿಭಟಿಸುವಂತಹ ಹೋರಾಟದ ಹಾಡುಗಳು ರೂಪುಗೊಂಡವು. ಹಿಂದಿನಿಂದಲೂ ಶೋಷಣೆಗೆ ನಮ್ಮನ್ನು ಒಳಪಡಿಸಿ ಅಸಹಾಯಕರನ್ನಾಗಿ ಮಾಡಿದ್ದಕ್ಕೆ ಈಗ ನಾವು ಶೋಷಿತರೆಲ್ಲ ಒಂದಾಗಿದ್ದೇವೆ; ನಮ್ಮ ಪ್ರಜ್ಞೆ ಮೂಡಿದೆ ಎಂಬ ದಿಟ್ಟತನ ದಲಿತರದ್ದು. ಅಸಹಾಯಕತೆಯನ್ನು ಸುಟ್ಟು ಜಾತಿಯತೆಯನ್ನು ಹೋಗಲಾಡಿಸಲು ಬುಗಿಲೆದ್ದ ಬೆಂಕಿಯ ಜ್ವಾಲೆಗಳಂತೆ ಬರುತ್ತಿದ್ದೇನೆ ಎಂದು ಸ್ವಾಭಿಮಾನವನ್ನು ಹಾಗೂ ದಲಿತರಿಗೆ ದನಿಯನ್ನು ಕೊಟ್ಟಿವೆ ಈ ಹೋರಾಟದ ಹಾಡುಗಳು.

"ಧರ್ಮಗುರುಗಳ ಮಠಾಧಿಪತಿಗಳ
ದಗಲಬಾಜಿತನ ಬೀದಿಗೆಳೆಯುತ
ಖಾದಿ ಕಾವಿಗಳ ತಾಯಿಗಂಡರ
ಬಂಡತನವನು ಬಯಲು ಮಾಡುತ"[೪೧]

"ಸಮತಾ ರಾಜ್ಯದ ಕನಸುಗಳೊತ್ತು
ಹೊಸ ನಾಡೊಂದರ ಬಯಕೆಗಳೊತ್ತು
ಕೆಂಪು ಮಣ್ಣಿನಲಿ ಒಕ್ಕಲೂಡಲು
ಬರುತಲಿರುವ ಬಂಡಾಯಗಾರರು"[೪೨]

ಸಾಮಾಜಿಕವಾಗಿ ಅಸಹಾಯಕತೆಯನ್ನು ಸೃಷ್ಟಿ ಮಾಡಿ ಮೂಲಭೂತವಾದಿ ಚಿಂತನೆಗಳಿಂದ ನಮ್ಮನ್ನು ಆಳುತ್ತಿರುವ ಮಠಾಧಿಪತಿಗಳು ಹಾಗೂ ಧರ್ಮಗುರುಗಳ ದಗಲಬಾಜಿತನವನ್ನು ಈ ಹಾಡು ಬಯಲು ಮಾಡುತ್ತಿದೆ. ರಾಜಕೀಯವಾಗಿ ನಮ್ಮನ್ನು ಶೋಷಣೆ ಮಾಡುತ್ತಿರುವ ರಾಜಕಾರಣಿಗಳ ಮೋಸವನ್ನು ಬಯಲಿಗೆಳೆದು ಶೋಷಿತರೆಲ್ಲ ಒಂದಾಗಿ ನಾವೆಲ್ಲರು ಒಂದೇ ಎಂದು ಘೋಷಣೆ ಕೂಗಿದರು.

ಇವರೆಲ್ಲರ ಕನಸು ಒಂದೇ. ಸಮಾನತೆ, ಜಿಡ್ಡು ಹಿಡಿದು ರೋಗದಿಂದ ನರಳುತ್ತಿರುವ ಈ ಸಮಾಜದಿಂದ ಮುಕ್ತಿ ಪಡೆದು ಸಮಾನತೆಯ ಸಮಾಜವನ್ನು ಕಟ್ಟಬೇಕು ಎಂಬುದು. ಸ್ವಂತ ಹೊಲಗಳಲ್ಲಿ ವ್ಯವಸಾಯ ಮಾಡುವ ನಿಲುವನ್ನು ಹೊಂದಿರುವ ಎಲ್ಲಾ ದಲಿತರು ಹೋರಾಟದ ಮೂಲಕ ಧನಿಕರಿಗೆ, ಬಂಡವಾಳಶಾಹಿಗಳಿಗೆ, ಪುರೋಹಿತಶಾಹಿಗಳಿಗೆ ಎಚ್ಚರಿಕೆಯನ್ನು ನೀಡುವಂತೆ ಈ ಹೋರಾಟದ ಹಾಡು ರೂಪಗೊಂಡಿದೆ.

ಎನ್.ಕೆ. ಹನುಮಂತಯ್ಯ ಅವರು ಅಂಬೇಡ್ಕರ್ ಅವರನ್ನು 'ಮಹಾನದಿ'ಗೆ ಹೋಲಿಕೆ ಮಾಡಿರುವ ರೂಪಕ ತುಂಬಾ ಅದ್ಭುತವಾಗಿದೆ. ಕವಿ ಇಲ್ಲಿ ಬರೀ ನದಿ ಎಂದು ಹೇಳುತ್ತಿಲ್ಲ 'ಮಹಾರಿನ ಮಹಾನದಿ' ಎಂದು ಕರೆಯುತ್ತಿದ್ದಾರೆ. ನದಿ ಸ್ಥಿರವಲ್ಲ. ಚಲನಶೀಲತೆಯಿಂದ ಕೂಡಿದ್ದು; ಅಂಬೇಡ್ಕರ್ ಅವರ ಚಿಂತನೆಗಳು ಸಹ 'ಮಹಾನದಿ'ಯಂತೆ ಹರಿಯಬೇಕು ಹಾಗೂ ನಿತ್ಯ ಚಲನಶೀಲತೆಯಿಂದ ಕೂಡಿರಬೇಕು ಎನ್ನುವ ಆಶಯವನ್ನು ಕವಿ ಹೊಂದಿದ್ದಾನೆ.

ಎನ್.ಕೆ. ಹನುಮಂತಯ್ಯ ಅವರು ರಚಿಸಿದ ಕ್ರಾಂತಿಗೀತೆ ಹೀಗಿದೆ:

"ಪರ್ವತದ ಪಾದಗಳೆ ಸಿಡಿಲಿನ ಸ್ಪರ್ಶಗಳೆ
ಶಿಶುವಿನ ಎದೆ ಮೇಲೂ ಮಲಗುವ ನಿದ್ರೆಗಳೆ
ದನಿಯ ಆಲಿಸಿ ನದಿಯ ದನಿಯ ಆಲಿಸಿ

ಹಗಲು ಇರಳು ಉರಿಯುತ್ತಿರುವ
ಕುಲದ ಕುಲುಮೆ ನಂದಿಸಿ

ಬೆಂದು ಕೆಂಡವಾಗುತ್ತಿರುವ ಜೀವಗಳ ಉಳಿಸಿ
ನೆಲವು ಹೊತ್ತಿ ಜಲವು ಬತ್ತಿ
ಧಗಧಗಿಸುವ ಮುನ್ನವೇ
ದನಿಯ ಆಲಿಸಿ ನದಿಯ ದನಿಯ ಆಲಿಸಿ

ಹೊಲಸು ಎಂಬ ವಿಷದ ತೊಗಲ
ತನುಮನಕೆ ಮೆತ್ತದಿರಿ
ಕಣ್ಣ ಹಗಲ ಗರ್ಭ ತುಳಿದು
ನೆತ್ತರನ್ನು ಹರಿಸದಿರಿ
ಕಾಡು ಕಣಿವೆ ಕಡಲ ಕೊಳೆತು
ಗತ ಗತಿಸುವ ಮುನ್ನವೇ
ದನಿಯ ಆಲಿಸಿ ನದಿಯ ದನಿಯ ಆಲಿಸಿ

ಮಹಾರಿನ ಮಹಾನದಿ
ನಮ್ಮ ನಿಮ್ಮ ಪ್ರಾಣನದಿ
ಅಕ್ಷರದ ಹನಿಹನಿಯಲು
ಉಕ್ಕಿ ಹರಿದ ಪ್ರೇಮನದಿ
ಬಿಡುಗಡೆಯ ಹಸಿರು ಉಸಿರ
ಬುದ್ಧ ನಗೆಯ ತಾಯಿನದಿ
ದನಿಯ ಆಲಿಸಿ ನದಿಯ ದನಿಯ ಆಲಿಸಿ”[೪೩]

ಕವಿ ನಿರ್ಜೀವ ವಸ್ತುಗಳನ್ನು ಹೆಸರಿಸುತ್ತಲೇ ಅವುಗಳ ಮೂಲಕ ಚೇತನವನ್ನು ಕಾಣುತ್ತಿದ್ದಾನೆ. ಪರ್ವತ, ಸಿಡಿಲು, ಹಗಲು, ಇರುಳು, ಮಹಾನದಿ ಇವುಗಳನ್ನು ರೂಪಕವಾಗಿ ಬಳಸಿದ್ದಾನೆ. ಪರ್ವತವೆಂಬುದು ಸ್ಥಿರವಾಗಿ ನಿಲ್ಲುವಂತದ್ದು. ಚಳಿ, ಗಾಳಿ, ಮಳೆ, ಬಿಸಿಲು ಯಾವುದಕ್ಕೂ ಜಗ್ಗದೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದು. ಸಿಡಿಲು ವೇಗದ ಶಕ್ತಿ; ಅಷ್ಟೇ ಅಲ್ಲ, ಅದು ಶಬ್ದ ಮತ್ತು ಮಿಂಚಿನಂತೆ ಪ್ರೇರಕಶಕ್ತಿಯನ್ನು ನೀಡುವಂತದ್ದು. ಕುಲದ ಕುಲುಮೆಯಲ್ಲಿ ಹಗಲು–ರಾತ್ರಿ ಬೆಂದು ಕೆಂಡವಾಗುತ್ತಿರುವ ಜೀವಗಳನ್ನು ಉಳಿಸಬೇಕು. ಅಸಮಾನತೆಯನ್ನು ಹೋಗಲಾಡಿಸುವುದಕ್ಕಾಗಿ ಅಂಬೇಡ್ಕರ್ ಅವರ ಚಿಂತನೆಯನ್ನು ಪಾಲಿಸಿ, ಅಸಮಾನತೆ ಉಲ್ಬಣಗೊಳ್ಳುವ ಮೊದಲು ಅಂಬೇಡ್ಕರ್ ದನಿಯನ್ನು ಆಲಿಸಿ ಎಂದು ಕವಿ ಹೇಳಿದ್ದಾನೆ.

ದಲಿತರ, ಶೋಷಿತರ, ದಮನಿತರ ದನಿಯಾಗಿ ಅಂಬೇಡ್ಕರ್ ಶ್ರಮಿಸುತ್ತಿದ್ದಾರೆ. ಸಮಾಜದ ಪಿಡುಗುಗಳನ್ನು ಹೋಗಲಾಡಿಸಿ ಸಮಾನತೆಯ ಸಮಾಜವನ್ನು ಕಟ್ಟುವ ಕನಸನ್ನು ಕಂಡ 'ಮಹಾರಿನ ಮಹಾನದಿ'ಯಾದ ಅಂಬೇಡ್ಕರ್ ಚಿಂತನೆಗಳನ್ನು ತಿಳಿದುಕೊಂಡು ಅವುಗಳನ್ನು ಪಾಲಿಸಿ, ದನಿಯನ್ನು ಕೇಳಿ, ಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎನ್ನುವ ಆಶಯವನ್ನು ಕವಿ

ಅಭಿವ್ಯಕ್ತಪಡಿಸಿದ್ದಾನೆ. ಅಂಬೇಡ್ಕರ್ ಅವರು ಬುದ್ಧನಂತೆಯೇ ಸಮಾಜದ ಬಗ್ಗೆ ಚಿಂತನೆ ನಡೆಸಿದರು. ದಲಿತ ಮತ್ತು ಶೋಷಿತರ ಉದ್ಧಾರಕ್ಕಾಗಿ ದುಡಿದ ತಾಯಿಗುಣವುಳ್ಳ 'ಮಹಾನ್ ವ್ಯಕ್ತಿ' ಎಂದು ಇಲ್ಲಿ ಚಿತ್ರಿಸಲಾಗಿದೆ.

ಅನಸೂಯ ಕಾಂಬಳೆ ಅವರು 'ನನ್ನವರ ನಿಟ್ಟುಸಿರು' ಎಂಬ ಗೀತೆಯನ್ನು ರಚಿಸಿದ್ದಾರೆ. ಈ ಹಾಡು ಜಾನಪದದ ತ್ರಿಪದಿಯ ವಿನ್ಯಾಸ ರಚನೆಯಾಗಿದೆ. ಅಲ್ಲದೆ, ತ್ರಿಪದಿಯ ಲಯದಂತೆ ಈ ಗೀತೆಯನ್ನು ಹಾಡಲಾಗಿದೆ.

'ನನ್ನವರ ನಿಟ್ಟುಸಿರು' ಗೀತೆಯಲ್ಲಿ ಪ್ರಕೃತಿ, ಭೂಮಾಲೀಕ, ದಲಿತ ಅಥವಾ ಶ್ರಮಿಕವರ್ಗ ಈ ಮೂರರ ನಡುವೆ ಯಾವ ರೀತಿಯಲ್ಲಿ ದಲಿತರಿಗೆ ತಲ್ಲಣಗಳನ್ನು ಉಂಟುಮಾಡಲಾಗುತ್ತಿದೆ ಎಂಬುದನ್ನು ಕಾಣಬಹುದು. ಆ ಗೀತೆ ಈ ಕೆಳಗಿನಂತಿದೆ–

ಜ್ವಾಳದ ಹೊಲ ನಮ್ದು ಉತ್ತತ್ತಿ ಬನ ನಮ್ದು
ಕ್ಯಾದಗಿ ಮಲ್ಲೀಗಿ ಬನ ನಮ್ದು । ಮಳೆರಾಯ
ಕುಡಿಲಾಕ ಇಲ್ಲ ಹನಿ ನೀರ.

ಸಂಜೆಯ ಮಾಡೆಲ್ಲ ಚಿತ್ತಾರ ಬಿಡಿಸ್ಯಾವು
ಮಧ್ಯಾನ ಹೊತ್ತೆಲ್ಲ ಮೈಬೆವರು । ಮಳೆರಾಯ
ಮಯ್ಯಾಗಿನ ರಗುತ ಇಂಗ್ಯಾವೊ.

ನಗುವಿಲ್ಲ ನಲಿವಿಲ್ಲ ಮಾರೆಲ್ಲ ಬಾಡ್ಯಾವ
ಬೆಳೆಯೆಲ್ಲಾ ಬಳ್ಳೆಲ್ಲಾ ಒಣಗ್ಯಾವೊ । ಮಳೆರಾಯ
ಹಸಿನೆಲಾ ಬಾಯಿ ತೆರದಾವೊ.

ಹುಣ್ಣೀವಿ ದಿನದಾಗ ಬೆಳದಿಂಗಳ ಚೆಲ್ಲ್ಯಾವ
ಅಂಗಳ್ದಾಗ್ಯಾರ ಸುಳಿವಿಲ್ಲಾ । ಮಳೆರಾಯ
ಗುಳೆಹೋಗಿ ನನ್ನ ಬಳಗೆಲ್ಲ.

ಬರಗಾಲ ಬಿದ್ದರೂ ಇದ್ದವ್ರು ಮೆರಿತಾರ
ನಾವ್ ದುಡಿವ ನಮ್ಮ ಸಾವ್ಕಾರ್ರೋ । ಮಳೆರಾಯ
ನಮ್ನೋಡಿ ಮೀಸ್ಯಾಗ ನಗತಾರೊ.

ಹಸಿದಂತ ದನಕರ ಒದರ್ಯಾವ ಹಗಲೆಲ್ಲ
ಕಟ್ಟಿದ ಹಗ್ಗೆಲ್ಲಾ ಕಡಿದಾವೊ । ಮಳೆರಾಯ
ಹದ್ದುಗಳಿಗೆ ಹಬ್ಬಾಗಿ ಮಲಗ್ಯಾವೊ.

ಒಡವೆಲ್ಲ ಅಡವಿಟ್ಟು ರೊಕ್ಕಾನ ತಂದಾರ
ಕಾಳ್ಗು ನಮಗ ಕಡಿಯಿಲ್ಲ । ಮಳೆರಾಯ
ನಮಗೋಳ ಕೇಳಾವ್ರ ದಿಕ್ಕಿಲ್ಲೊ."[೪೪]

ತ್ರಿಪದಿಯ ಲಯ, ವಿನ್ಯಾಸದ ಜೊತೆಗೆ ಗ್ರಾಮ್ಯ ಭಾಷೆಯ ಪದಗಳನ್ನು ಬಳಸಿದ್ದಾರೆ. ಮಳೆ ಬದುಕಿಗೆ ಅತ್ಯವಶ್ಯಕ. ಕುಡಿಯಲು, ಬೆಳೆ ಬೆಳೆಯಲು ನೀರು ಬೇಕೇ ಬೇಕು. ಮಳೆ ಇಲ್ಲದೆ ಬೆಳೆ ಇಲ್ಲ. ಮಳೆಯೇ ಬಾಳಿನ ಬೆಳಕು ಎನ್ನುವ ರೀತಿಯಲ್ಲಿ ಮಳೆ ಇಲ್ಲಿ ಚಿತ್ರಣಗೊಂಡಿದೆ. 'ಜೋಳದ ಹೊಲ ನಮ್ದು, ಉತ್ತತ್ತಿ ತೋಟ ನಮ್ದು, ಆದ್ರೆ ಕುಡಿಯುದಕ್ಕೆ ನೀರಿಲ್ಲ' ಎನ್ನುವ ಮಾತು ಸಮಾಜದಲ್ಲಿ ಎಲ್ಲ ರೀತಿಯ ಸೌಲಭ್ಯಗಳಿದ್ದರೂ ಏನೂ ಇಲ್ಲದ ಸ್ಥಿತಿಯನ್ನು ಹೇಳುತ್ತದೆ. ಎಲ್ಲವೂ ನಮ್ಮದೆ, ಆದರೆ ಯಾವುದೂ ನಮಗಿಲ್ಲ ಎನ್ನುವ ರೀತಿ ಬದುಕುತ್ತಿದ್ದಾರೆ. ಬರಗಾಲ ಬಂದು, ಹಸಿವಿನಿಂದ ಜನ ಸಾಯುತ್ತಿದ್ದಾರೆ. ದನ ಕರುಗಳು ಹದ್ದುಗಳಿಗೆ ಆಹಾರವಾಗಿವೆ. ಮಳೆಯಿಲ್ಲದೆ ಜನರೆಲ್ಲ ಗುಳೆ ಹೋಗುತ್ತಿದ್ದಾರೆ. ಇಂತಹ ಪರಿಸ್ಥಿಯನ್ನು ನೋಡಿ ಉಳ್ಳವರು ನಸುನಗುತ್ತಿದ್ದಾರೆ. ಬಡವರ ಗೋಳು ಕೇಳುವವರು ಯಾರು ಇಲ್ಲ. ಎಲ್ಲರು ಕಣ್ಣುಮುಚ್ಚಿ ಕುಳಿತಿದ್ದಾರೆ. ದಮನಿತರ ಕಷ್ಟ, ನೋವುಗಳು ಕಣ್ಣಿಗೆ ಕಾಣುತ್ತಿಲ್ಲ. ಎಲ್ಲ ಸಂದರ್ಭದಲ್ಲೂ ನೋವು ಅನುಭವಿಸುವವರು ಬಡವರು ಮಾತ್ರ, ಆರ್ಥಿಕವಾಗಿ, ಸಾಮಾಜಿಕವಾಗಿ, ಸೌಲಭ್ಯ ಮತ್ತು ಅವಕಾಶಗಳಿಂದ ಇವರು ವಂಚಿತರಾಗಿದ್ದಾರೆ. ಸಮಾಜದಲ್ಲಿರುವ ಸಾಮಾಜಿಕ, ಆರ್ಥಿಕ ಅಸಮಾನತೆಯನ್ನು ಈ ಕವಿತೆ ಧ್ವನಿಸುತ್ತಿದೆ.

ಜಗತ್ತನ್ನು ಸುಂದರವಾಗಿ ಕಟ್ಟುವವರು ಕಾರ್ಮಿಕರು. ಆದರೆ ಆ ಜಗತ್ತಿನಲ್ಲಿ ಅವರಿಗೆ ಜಾಗವಿಲ್ಲ ಎಂದು ವ್ಯವಸ್ಥೆಯು ಅವರನ್ನು ಹೊರಗೆ ದೂಡುತ್ತದೆ. ಇಂತಹ ವ್ಯವಸ್ಥೆಯನ್ನು ಅವರು ಪ್ರಶ್ನಿಸುತ್ತಾರೆ. ಉತ್ತರ ಕರ್ನಾಟಕದ ಅನೇಕ ಜನರು ನಗರಗಳಲ್ಲಿ ಕಟ್ಟಡ ನಿರ್ಮಾಣದ ಕೆಲಸಕ್ಕೆ ಗುಳೆ ಹೋಗುತ್ತಿದ್ದಾರೆ. ಅಲ್ಲಿ ಗುಡಿಸಲು ಮತ್ತು ಗುಡಾರಗಳನ್ನು ಹಾಕಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇಂತಹ ಬಡ ಕಾರ್ಮಿಕರ ಕುರಿತು ಆರ್.ಮಾನಸಯ್ಯ ಈ ರೀತಿ ಹಾಡುತ್ತಾರೆ.

"ಶಾರಿಗಂಜಿಗೆ ಸೇರು ಬೆವರು ಸುರಿಸುತ
ಊರೂರು ತಿರುಗುವರು ಯಾರಯ್ಯ
ಈ ನಾಡ ಕಟ್ಟಿದವರು ನಾವೆಲ್ಲಿಗೆ ಹೋಗಬೇಕು
ಕೂಲಿಯವರು ನಾವು ಕೇಳಯ್ಯ॥

ಸುಗ್ಗಿಗೆಂದು ಹಿಗ್ಗಿಕೊಂಡು ಜೆಳ್ಳು ಕಾಳು ಸಿಕ್ಕಿತೆಂದು
ಊರೂರು ಅಲೆಯುತ ಬಂದೆವಲ್ಲಾ
ಮನೆಯಿಲ್ಲ ಮಠವಿಲ್ಲ ಬಂಧು ಇಲ್ಲ ಬಳಗ ಇಲ್ಲ
ಊರೂರು ಕಟ್ಟಿ ಬಂದೆವಲ್ಲಾ॥

ಅರ್ಧ ದೇಶ ಸುತ್ತಿ ಹತ್ತಾರು ಡ್ಯಾಂಕಟ್ಟಿ
ಹತ್ತು ರೂಪಾಯಿ ಕೂಲಿಗೆ ಬದುಕೆಲ್ಲ॥

ಯಂತ್ರಗಳ ಬಾಯಿಗೆ ಬಲಿಯಾಗಿ ಹೋದಾಗ
ಕೈಕಾಲು ಬೆರಳು ಉಳಿಲಿಲ್ಲ॥

ಬೆವರೂರು ಬೆಂದೂರು ಬಡತನದ ತವರೂರು
ಬ್ಯಾಸರಾಗಿ ಬೆಂಗಳೂರಿಗೆ ಬಂದೆವೆಲ್ಲಾ॥
ಗುಲಾಬಿ ನಗರದಾಗ ಗುಡಿಸಲು ಯಾಕಂತ
ಬ್ಯಾಡೆಂದು ಬೆಂಗಳೂರು ದಬ್ಬಿತಲ್ಲಾ॥

ಸಿರಿವಂತ್ರು ಸಾಹುಕಾರ್ರು ಕುರ್ಚಿಗಂಟಿ ಆಳೋರು
ಕೂಲಿಯ ಕದ್ದಿತು ಕುಲವೆಲ್ಲಾ॥
ಕುಲಬೆಳೆದು ದೊಡ್ಡದಾಗಿ ನಮ್ಮ ರಕ್ತ ಕುದಿಯುವಾಗ
ನಮಗೀ ನೆಲದಲ್ಲಿ ಬದುಕಿಲ್ಲ॥

ಈ ನಾಡ ಕಟ್ಟಿದವರು ನಾವೆಲ್ಲಿಗೋಗಬೇಕು
ನಾಡಿನ ಪ್ರಜೆಗಳು ನಾವೆಲ್ಲಾ॥
ನಾವೆದ್ದು ಬರ್ತೀವಿ ನಮ್ಮ ರಾಜ್ಯ ತರ್ತೀವಿ
ನಾಡಿನ ಬಣ್ಣಾ ಕೆಂಪಲ್ಲ ॥ನಾಡಿನ॥”[೪೫]

ಇಲ್ಲಿ ಕೂಲಿ ಕಾರ್ಮಿಕರಿಗೆ ಅಸ್ತಿತ್ವವಿಲ್ಲ ಮತ್ತು ಒಂದು ಕಡೆ ನಿಲ್ಲಲು ನೆಲೆಯಿಲ್ಲ. ಅಸ್ತಿತ್ವದ ಹುಡುಕಾಟದಲ್ಲಿ ಅವರ ಜೀವನವೇ ಸವೆದು ಹೋಗುತ್ತಿದೆ. ಕೂಲಿಯಿಂದ ಬರುವ ಹಣದಿಂದ ಉತ್ತಮ ಅಥವಾ ಸೂಕ್ತ ರೀತಿಯಲ್ಲಿ ಜೀವನ ನಡೆಸಲು ಆಗುತ್ತಿಲ್ಲ. ಸ್ವಂತ ಊರಿನಲ್ಲಿ ನೆಲೆಯೂರಲು ಕೆಲಸವಿಲ್ಲ. ತಮ್ಮದೇ ಆದ ಒಂದು ಮನೆಯಿಲ್ಲ. ಆದ್ದರಿಂದ ಬಂಧು-ಬಳಗ ಎಲ್ಲವನ್ನು ಬಿಟ್ಟು, ಕಾಣದ ಊರಿಗೆ ಗುಳೆ ಹೋಗಿ ಕಟ್ಟಡ ಕಾರ್ಮಿಕರಾಗಿ ಕೆಲಸ ಮಾಡುತ್ತಿರುವ ಜನರ ನೋವಿನ ಸ್ಥಿತಿಯನ್ನು ಈ ಗೀತೆ ಅಭಿವ್ಯಕ್ತಪಡಿಸುತ್ತಿದೆ.

ಊರುಗಳಲ್ಲಿ ಮಳೆ ಬೆಳೆಯಿಲ್ಲದೆ ಬೆಂಗಳೂರಿಗೆ ಬಂದು ದಿನಗೂಲಿ ಕಾರ್ಮಿಕರಾಗಿ ಕಟ್ಟಡ ನಿರ್ಮಾಣ ಮಾಡುತ್ತಿದ್ದಾರೆ. ಇವರು ಕಟ್ಟಿದ ಕಟ್ಟಡಗಳಲ್ಲಿ ಇವರು ವಾಸಿಸಲು ಅವಕಾಶವಿಲ್ಲ. ಇರುವೆಗಳು ಕಟ್ಟಿದ ಹುತ್ತದಲ್ಲಿ ಹಾವುಗಳು ಬಂದು ಸೇರಿಕೊಳ್ಳುವಂತೆ ಈ ಕಾರ್ಮಿಕರು ಅಲ್ಲಿ ವಾಸಿಸಲು ಯೋಗ್ಯವಲ್ಲ ಎಂದು ನಗರಗಳು ಹೊರದೂಡುತ್ತಿವೆ. ಆಧುನಿಕ ಕಾಲದ ಸಾಮಾಜಿಕ ಶ್ರೇಣೀಕರಣಕ್ಕೆ ಇದೊಂದು ಉಜ್ವಲ ನಿದರ್ಶನ.

ಕಾರ್ಮಿಕರು ಇಲ್ಲಿ ಆತ್ಮವಿಶ್ವಾಸವನ್ನು ಕಳೆದುಕೊಂಡಂತೆ ಕಾಣುವುದಿಲ್ಲ. ಕವಿ ಆರ್. ಮಾನಸಯ್ಯ ಅವರು ಈ ಗೀತೆಯ ಮೂಲಕ ಇನ್ನಷ್ಟು ಅವರ ವಿಶ್ವಾಸವನ್ನು ಹೆಚ್ಚಿಸುತ್ತಿದ್ದಾರೆ. ಕೂಲಿಕಾರ್ಮಿಕರ ಸ್ಥಿತಿಯನ್ನು ಹೇಳುತ್ತಲೇ. ಸಮಾಜದ ಮುಂದಿನ ಕಾರ್ಯಯೋಜನೆಯ ಬಗ್ಗೆ; ಅಂದರೆ, ನಾವು ಈ ನಾಡಿನಲ್ಲಿ ಬದುಕಲು ಏನು ಮಾಡಬೇಕು ಎಂಬುದನ್ನು ಹೇಳುತ್ತಿದ್ದಾರೆ.

ಕೂಲಿಕಾರ್ಮಿಕರ ಮೂಲಕ ವ್ಯವಸ್ಥೆಯನ್ನು ಪ್ರಶ್ನಿಸುತ್ತಿದ್ದಾರೆ. ಈ ನಾಡನ್ನು ಕಟ್ಟಿದವರು ನಾವುಗಳು, ನಾವು ಎಲ್ಲಿಗೆ ಹೋಗಬೇಕು. ಈ ನಾಡಿನ 'ನಿಜವಾದ ಪ್ರಜೆಗಳು ನಾವೆಲ್ಲಾ ಎದ್ದು ಬರ್ತೀವಿ, ನಮ್ಮದೇ ರಾಜ್ಯವನ್ನು ತರ್ತೀವಿ' ಎಂದು ಆತ್ಮವಿಶ್ವಾಸದ ಮಾತುಗಳಿಂದ ಈ ಗೀತೆಯನ್ನು ಅಂತ್ಯಗೊಳಿಸುತ್ತಿದ್ದಾರೆ.

ಕೂಲಿ ಮಾಡುವ ಜನರ ನಿತ್ಯಬದುಕು ತುಂಬಾ ಕಷ್ಟಕರವಾಗಿರುವುದನ್ನು ಹಾಗೂ ಅವರ ಸಮಸ್ಯೆಗಳ ಸ್ವರೂಪ, ಆ ಸಮಸ್ಯೆಗಳ ಕಾರಣವನ್ನು ಈ ಗೀತೆ ಚಿತ್ರಿಸುತ್ತದೆ. ಭಾರತ ಹಲವು ಸಂಪನ್ಮೂಲಗಳಿಂದ ಕೂಡಿರುವ ದೇಶ. ಆದರೆ ಸಂಪನ್ಮೂಲಗಳನ್ನು ಬಳಸಿಕೊಳ್ಳುತ್ತಿರುವವರು ಯಾರು? ದೇಶದ ಸಂಪತ್ತು ಕೆಲವರಲ್ಲಿ ಮಾತ್ರ ಅಡಕವಾಗಿರುವುದನ್ನು ಕುರಿತು ಈ ಗೀತೆ ಹೇಳುತ್ತದೆ.

"ಕುಂತಾ ಕೇಳಿರಿ ನೀವು ಕೂಲಿಜನ
ನಿತ್ಯ ಬದುಕಿನ ಕತೆಯ ಹೇಳುವೆನಾ
ಕಥೆಯಲ್ಲಾ ಗೀತೆಯಲ್ಲ ಈ ಪದವು
ಕಷ್ಟಪಡುವ ಜನರ ಕರಾಳವು

ಭಾರತ ದೇಶವು ಬಲು ದೊಡ್ಡದು
ಬೇಡಿದ್ದು ಸಿಕ್ಕುವ ಪುಣ್ಯ ಭೂಮಿಯು
ಗಂಗಾ ತುಂಗ ಯಮುನಾ ಬ್ರಹ್ಮಪುತ್ರ
ತುಂಬಿ ತುಳುಕುತ ಹರಿವ ದೇಶವು

ಇಂಥ ದೇಶದಲ್ಲಿ ಬದಕುವವರು
ನೂರಕ್ಕೆ ಎಂಬತ್ತು ಬಡ ಜನರು
ರೈತನೇ ದೇಶದ ಬೆನ್ನ ಎಲುಬು
ಎಂದು ಹೇಳಿದ ಜಾಣಂದಿರು
ಕಷ್ಟ ಪಡುವವ ರೈತನಾದ
ಪಡದೆ ತಿನ್ನುವವ–ಪುಣ್ಯಾತ್ಮನಾದ
ಗಾಳಿ–ಬೆಳಕು–ನೀರು–ಭೂಮಿಯೆಲ್ಲಾ
ಪರಮಾತ್ಮ ಮಾಡಿದ್ದು ಗೊತ್ತೈತೆಲ್ಲಾ
ಕಾಯಕವೇ ಕೈಲಾಸ ಬರೀ ಮಾತಲ್ಲಾ
ಕಷ್ಟ ಪಡುವ ಜೀವಿಗೆ ಒಣ ರೊಟ್ಟಿಲ್ಲಾ."[೪೬]

೧೨ನೇ ಶತಮಾನದಲ್ಲಿ ಬಸವಣ್ಣ' ಕಾಯಕವೇ ಕೈಲಾಸ' ಎಂದು ಹೇಳಿದ ಮಾತು ಇಂದು ಸುಳ್ಳಾಗುತ್ತಿದೆ. ಶ್ರಮಪಡುವವರು ಊಟಕ್ಕೂ ಗತಿಯಿಲ್ಲದೆ ಉಪವಾಸದಿಂದ ಸಾಯುತ್ತಿದ್ದಾರೆ. ಕೂಲಿ ಮಾಡುವ ಜನರ ಶ್ರಮದಿಂದ ಬಂಡವಾಳಶಾಹಿಗಳು, ಭೂಮಾಲೀಕರು ದಿನದಿಂದ

ದಿನಕ್ಕೆ ಶ್ರೀಮಂತರಾಗುತ್ತಿದ್ದಾರೆ. ಬಡವರ ಸುಖ-ಸಂತೋಷವನ್ನು ಕಸಿದುಕೊಳ್ಳುತ್ತಿದ್ದಾರೆ. ರಾಜಕಾರಣಿಗಳು ಬಂಡವಾಳಶಾಹಿಗಳ ಜೊತೆ ಕೈಜೋಡಿಸಿ ಕೋಟಿ ಕೋಟಿ ಹಣ ಪಡೆದು ಕೂಲಿ ಜನರನ್ನು ಇನ್ನಷ್ಟು ನಿರ್ಗತಿಕರನ್ನಾಗಿ ಮಾಡುತ್ತಿದೆ. ಸರ್ಕಾರ ಕೂಡ ಬಂಡವಾಳಶಾಹಿಗಳ ಪರವಾಗಿದೆ. ಇವರೆಲ್ಲ 'ಪ್ರಜೆಗಳ ಸೇವೆ ಮಾಡುತ್ತೇವೆ' ಎಂದು ಹೇಳುತ್ತ ಪ್ರಜೆಗಳ ಸಾವನ್ನು ಬಯಸುತ್ತಿದ್ದಾರೆ. ಈ ಗೀತೆಯಲ್ಲಿ ಸಮೂಹ ಸೃಷ್ಟಿಯ ರೂಪದಲ್ಲಿ ಬಡಜನರ ಆಶಯ ವ್ಯಕ್ತವಾಗಿದೆ.

## ರೈತ ಹೋರಾಟದ ಹಾಡುಗಳು

ಹಿ.ಶಿ. ರಾಮಚಂದ್ರೇಗೌಡ ಅವರು ೧೯೮೩ರಲ್ಲಿ ಬರೆದ 'ರೈತ ಹೋರಾಟದ ಹಾಡುಗಳು' ಎಂಬ ಪುಸ್ತಕದಲ್ಲಿನ ಕ್ರಾಂತಿಗೀತೆಗಳು 'ಹೊಂಬಾಳೆ' ಎಂಬ ಧ್ವನಿಸುರುಳಿಯಾಗಿ ನಾಡಿನಾದ್ಯಂತ ಸಂಚಲನವನ್ನೇ ಉಂಟುಮಾಡಿದವು. ಈ ಹಾಡುಗಳನ್ನು ಕೇಳಿದ ರೈತರು ಎದೆಯುಬ್ಬಿಸಿ ತಮ್ಮ ಹಕ್ಕುಗಳನ್ನು ಪಡೆಯಲು ಹೋರಾಟಕ್ಕೆ ದುಮುಕಿದರು. ರೈತ ಚಳುವಳಿಗಾಗಿ ಇವರು ಬರೆದ ಹಾಡುಗಳು ಎಂಥವರನ್ನೂ ಸೆಳೆಯುವಂತಿದ್ದವು.

ಹಿ.ಶಿ. ರಾಮಚಂದ್ರೇಗೌಡ ಅವರನ್ನು ಒಳಗೊಂಡಂತೆ ಕೋಟಿಗಾನಹಳ್ಳಿ ರಾಮಯ್ಯ, ಗೊಲ್ಲಹಳ್ಳಿ ಶಿವಪ್ರಸಾದ್, ಆರ್. ಮಾನಸಯ್ಯ, ಸಿ. ದಾನಪ್ಪ ನಿಲೋಗಲ್, ಹೊನ್ನಪ್ಪ ಜಾಲಗಾರ್, ಜನಾರ್ಧನ್ ಕೆಸರಗದ್ದೆ, ರಮೇಶ್ ಗಬ್ಬೂರು, ಕೃಷ್ಣಮೂರ್ತಿ ಬಿಳಿಗೆರೆ ಇನ್ನೂ ಮುಂತಾದವರು ರೈತ ಮತ್ತು ಕೃಷಿ ಕೂಲಿ ಕಾರ್ಮಿಕರ ಬದುಕು ಮತ್ತು ಬವಣೆಗಳನ್ನು ತಮ್ಮ ಹೋರಾಟದ ಹಾಡುಗಳಲ್ಲಿ ಕಟ್ಟಿಕೊಟ್ಟಿದ್ದಾರೆ.

"ಎಲ್ಯವನೆಲ್ಯವನೆ?
ನಮ್ಮ ಭತ್ತರಾಗಿಯ ತಿಂದ ಕತ್ತೆ ಸೂಳೆಮಗ ॥ಎ॥

ನೆತ್ತಿಯ ಸೀಳಿ ಅವನ ಪಿತ್ತವ ತೆಗೆವೆವು
ಕತ್ತಲೆ ಕೋಣೆಲಿ ಕಣ್ಣನು ಕೊರೆವೆವು ॥ಎ॥

ಹೆಣ ಮಾಡಿ ನಮ್ಮ ಹಣವನ್ನು ಎಣಿಸಿದ
ಎದೆಯ ಸಾರಿಸಿ ನಮ್ಮ ಬಂಗಲೆ ಕಟ್ಟಿದ ॥ಎ॥

ಬಿಸಿಲಲ್ಲಿ ಒಣಗಿಸಿ ಮಳೆಯಲ್ಲಿ ನೆನೆಸಿಟ್ಟು
ಹದ್ದುಕಾಗೆಗೆ ನಮ್ಮ ಹೊತ್ತು ಹಾಕಿದ ಖೂಳ ॥ಎ॥

ನಮ್ಮೆಂಡತಿ ಮಕ್ಕಳ ಬಟ್ಟೆಯ ಹರಿದವ
ಎದೆಸೀಳಿ ನಮ್ಮ ರಕ್ತವ ಕುಡಿದವ ॥ಎ॥

ನಮ್ಮ ಅಕ್ಕ ತಂಗೆರ ಬಾಳ ನೆಕ್ಕಿ ನೆಲೆಕೆಸೆದಂಥ
ಒಕ್ಕಲ ಮಕ್ಕಳ ಮುಕ್ಕಿ ತಿಂದವ ಮಂತ್ರಿ ॥ಎ॥"[೪೭]

ಅಧಿಕಾರಶಾಹಿಯನ್ನು ಕಟುವಾಗಿ ಪ್ರಶ್ನಿಸುವ ಈ ಹಾಡು ರೈತನ ಕಣ್ಣೀರ ಕಥೆಯನ್ನು ಹೇಳುತ್ತದೆ. ಒಕ್ಕಲ ಮಕ್ಕಳನ್ನು ಶೋಷಿಸುವ ಈ ವ್ಯವಸ್ಥೆಯ ವಿರುದ್ಧ ರೈತನಿಗೆ ತೀವ್ರವಾದ ಕೋಪವಿದೆ. ಅಂಥ ಕೋಪ–ತಾಪಗಳು ಈ ಹಾಡಿನುದ್ದಕ್ಕೂ ಹಾಸುಹೊಕ್ಕಾಗಿವೆ. ಈ ವ್ಯವಸ್ಥೆಯಲ್ಲಿ ಎಲ್ಲಾ ಸರಕುಗಳಿಗೂ ನಿಗದಿತ ಬೆಲೆ ಇರುವಾಗ ರೈತ ಬೆಳೆದ ವಸ್ತುಗಳಿಗೆ ನಿಗದಿತ ಬೆಲೆಯಿಲ್ಲದೆ ನಷ್ಟ ಅನುಭವಿಸುವುದೇ ಹೆಚ್ಚು. ಹೀಗೆ ಮಧ್ಯವರ್ತಿಗಳಾದ ದಳ್ಳಾಳಿಗಳು ಮತ್ತು ಅಧಿಕಾರಶಾಹಿಯ ಕಪಿಮುಷ್ಟಿಗೆ ಸಿಲುಕಿದ ರೈತ ಅವರಿವರ ಬಳಿ ಸಾಲಕ್ಕೆ ಮೊರೆ ಹೋಗುತ್ತಾನೆ. ಸಾಲ ಮತ್ತು ಬಡ್ಡಿಯ ಹಣವನ್ನು ತೀರಿಸಲಾಗದೆ ಸಾಲಬಾಧೆಯಿಂದ ಆತ್ಮಹತ್ಯೆ ಮಾಡಿಕೊಂಡು ಸಾವಿನ ಕೂಪಕ್ಕೆ ಸಿಲುಕುತ್ತಾನೆ.

ಈ ಮೂಲಭೂತ ಸಮಸ್ಯೆಯನ್ನು ಅರಿತ ಕವಿ 'ಏನು ಮಾಡಿ ಏನು ಬಂತಣ್ಣ, ಯಾತಕಾಗಿ ಬದುಕು ತಿಳಿಯಣ್ಣ' ಎಂದು ಬೇಸರದಿಂದ ನುಡಿಯುತ್ತಾನೆ. ಬೆಳೆದ ಬೆಳೆಗೆ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗದೆ ಹೋದಾಗ ಇಂಥ ಬೇಸರ ಸಹಜವೇ ಆಗಿರುತ್ತದೆ. ಹೀಗೆ ತಾನು ಕಷ್ಟಪಟ್ಟು ಬೆಳೆದು ದುಡಿದರೂ ರೈತನಿಗೆ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗದಿದ್ದಾಗ ರೈತ ತೀವ್ರ ಸಂಕಷ್ಟಕ್ಕೆ ಸಿಲುಕುತ್ತಾನೆ.

"ಭತ್ತ ಬೆಳೆದರೆ ಲೆವಿಯ ಕಾಟ
ರಾಗಿ ಬೆಳೆದರೆ ಬೆಲೆಯ ಕಾಟ
ಹೊಗೆಸೊಪ್ಪು ಬೆಳೆದುಕೊಟ್ಟರೆ
ಶೆಟ್ಟಿ ಹಿಂದೆ ಅಲೆವ ಕಷ್ಟ ॥ಏನು॥

ಬೆಳೆದ ಬೆಳೆಗೆ ಹುಳದ ಕಾಟ
ಬೆಳೆದು ಇಟ್ಟರೆ ಇಲಿಯ ಕಾಟ
ಬೆಳೆದ ಬೆಳೆಯ ಮಾರ ಹೋದರೆ
ಮೋಸಗಾರ ದಲ್ಲಾಳಿ ಕೂಟ ॥ಏನು॥

ಶೆಟ್ಟಿ ಸುಲಿವನು ಭಟ್ಟ ಸುಲಿವನು
ರಾಜಕಾರಣಿ ತಲೆಯ ತಿನ್ವನು ।
ಪೋಲಿಸು ಬಂದು ಚಿಲ್ರೆ ಕಿತ್ತರೆ
ಅಧಿಕಾರಿ ಬಂದು ಮನೆಯ ದೋಚಿದ ॥ಏನು॥

ಅರ್ಧ ಬೆಲೆಗೆ ಮಾರಿ ಧಾನ್ಯವ
ಅರ್ಧಬಟ್ಟೆ ಹೊಲಿಸಿ ಮೈಗೆ ।
ಅರ್ಥವಿಲ್ಲದೆ ಬದುಕೊ ನಾವು
ವ್ಯರ್ಥವಾಗಿ ಸಾಯುತಿರುವೆವು ॥ಏನು॥"[೪೮]

ರೈತ ಇಷ್ಟೆಲ್ಲ ಕಷ್ಟಪಟ್ಟು ದುಡಿದರೂ ಸಾಲದ ಬಾಧೆ ತಾಳಲಾಗದೆ ಸಾವಿಗೆ ಶರಣಾಗುವ ದುಸ್ಥಿತಿಗೆ ತಲುಪುತ್ತಾನೆ. ಆದರೆ ಸಾವು ಒಂದೇ ಎಲ್ಲ ಸಮಸ್ಯೆಗಳನ್ನು ನಿವಾರಿಸುವುದಿಲ್ಲ ಎಂಬ ಸತ್ಯವೂ ತಿಳಿದಿರಬೇಕಾಗುತ್ತದೆ. ಜೊತೆಗೆ ಎಂತಹ ಸಮಸ್ಯೆಗಳು ಬಂದರೂ ಸಾವಿಗೆ ಶರಣಾಗದೆ ಧೈರ್ಯದಿಂದ ಎದುರಿಸಬೇಕಾದ ಹೊಣೆ ಎಲ್ಲರದೂ ಆಗಿದೆ. ಅಂದರೆ ನಮ್ಮನ್ನು ಶೋಷಿಸುತ್ತಿರುವವರ ವಿರುದ್ಧ ಎದೆಗುಂದದೆ ಹೋರಾಡಬೇಕು ಎಂಬುದು ಇಲ್ಲಿನ ಇಂಗಿತ.

ರೈತ ನಿರಂತರ ದುಡಿಮೆ ಮಾಡುತ್ತ, ಎಷ್ಟೇ ಕಷ್ಟಪಟ್ಟು ದುಡಿದರೂ ಅವನ ಬೆಳೆಗೆ ಸೂಕ್ತ ಬೆಲೆ ಸಿಗದಿದ್ದಾಗ ಮೋಸಕ್ಕೆ ಒಳಗಾಗುತ್ತಾನೆ. ಇದಕ್ಕೆ ಮುಖ್ಯಕಾರಣ ಮಧ್ಯವರ್ತಿಗಳ ಹಾವಳಿ ಹಾಗೂ ಸರ್ಕಾರ ನಿಗದಿತ ಬೆಲೆಯನ್ನು ನಿರ್ಧಾರ ಮಾಡದಿರುವುದೇ ಆಗಿದೆ. ವಾಸ್ತವ ಹೀಗಿರುವಾಗ ರೈತ ಬರೀ ವ್ಯವಸಾಯ ಮಾಡುತ್ತಲೇ ಇರಬೇಕೇ ಹೊರತು, ಆರ್ಥಿಕವಾಗಿ ಮುಂದುವರಿದು ಉತ್ತಮ ಸ್ಥಿತಿಗೆ ತಲುಪಲು ಆಗುತ್ತಿಲ್ಲ. ಹಾಗೊಮ್ಮೆ ಮನೆ, ಮಕ್ಕಳು ಬೇಸಾಯಕ್ಕೆ ಹಣ ಖರ್ಚು ಮಾಡಲು ಹೋದರೆ ಸಾಲಗಾರನಾಗಬೇಕಾದ ಸ್ಥಿತಿ ರೈತನದು. ಇಂಥ ರೈತರ ಗೋಳನ್ನು ಹೇಳುವ ಹಾಡು ಹೀಗಿದೆ–

ಎಂಥ ಮೋಸವು ನೋಡಣ್ಣ । ಏ ರೈತಣ್ಣ
ಸತ್ಯ ತಿಳಿಯೋಣ ಬಾರಣ್ಣ ॥

ಕೋಟಿ ಕೋಟಿ ವರ್ಷ ಕಳೆದೊ
ಕೋಟೆ ಕೊತ್ತಲು ಆಳಿ ಅಳಿದೊ ।
ಉಟ್ಟು ಉಂಡು ಕೊಂಡು ಹೋದರು
ನಿನಗೆ ಬಂದ ಫಲವು ಏನಣ್ಣ? ॥ ಎಂಥ॥

ಉಡಲು ಒಳ್ಳೆ ಬಟ್ಟೆ ಇಲ್ಲ
ಇರಲು ತಕ್ಕ ಮನೆಯು ಇಲ್ಲ ।
ಕೈಗೆ ಬಂದುದು ಬಾಯಿಗಿಲ್ಲ
ನಿನ್ನ ಬಾಯ್ಗೆ ಬಡಿದು ಕದ್ದೋದ್ರ್ಯಾರಣ್ಣ ॥ಎಂಥ॥

ನೀನು ಹೊಲವ ಕೆರದು ಕೂತೆ
ನಿನ್ಮಕ್ಳು ಎಮ್ಮೆ ಕಾದು ಸೋತೊ।
ಹೆಂಡ್ತಿ ಕಸವ ಕೆರೆದು ಕೂತಳು
ಅಧಿಕಾರ ಯಾರೊ ಉಣ್ಣುತಿರುವರು ॥ಎಂಥ॥

ಹೊಲವ ಕೆರೆದು ಹೊನ್ನು ಬೆಳೆದೆ
ಕಸವ ಕೆರೆದು ರಸವ ಕೊಟ್ಟೆ ।
ಹಸುವ ಕರೆದು ಹಾಲು ಕೊಟ್ಟೆ
ಹಾಲು ಕುಡಿದು ತೇಗಿದವರು ಒದೆಯ ಕೊಟ್ರಲ್ಲೊ ॥ಎಂಥ॥”[೪೯]

ಹೀಗೆ ರೈತ ಕಷ್ಟಪಟ್ಟು ದುಡಿದರೂ ನೆಮ್ಮದಿಯಿಂದ ಬದುಕಲಾರದ ಅತಂತ್ರ ಸ್ಥಿತಿಯಲ್ಲಿ ಬಾಳಬೇಕಾಗಿದೆ. ಎಲ್ಲರಿಗೂ ಅನ್ನ ಕೊಡುವ ರೈತನೇ ಸ್ವತಃ ಹಲವಾರು ಸಂಕಷ್ಟಗಳಿಗೆ ಸಿಲುಕಿರುವುದು ಈ ಕಾಲದ ದುರಂತವೇ ಸರಿ. ಕಾಡುನಾಶದಿಂದ ಪರಿಸರವೂ ನಾಶವಾಗುತ್ತಿದೆ. ಇದರ ಪರಿಣಾಮದಿಂದ ಜಾಗತಿಕ ತಾಪಮಾನ ದಿನೇದಿನೇ ಹೆಚ್ಚುತ್ತಿದೆ. ಜೊತೆಗೆ ಪ್ರಕೃತಿ ವಿಕೋಪಗಳಿಂದ ರೈತ ನಿರಂತರವಾದ ತೀವ್ರ ಬರಗಾಲವನ್ನು ಎದುರಿಸುತ್ತಿದ್ದಾನೆ. ಮಳೆ-ಬೆಳೆ ಇಲ್ಲದೆ ತಿನ್ನಲು ಅನ್ನವಿಲ್ಲದ ಕರುಣಾಜನಕ ಸ್ಥಿತಿ ರೈತನದು. ವಾಸ್ತವ ಹೀಗಿರುವಾಗ ಕೂಲಿಗಾಗಿ ನಗರಗಳಿಗೆ ಗುಳೆ ಹೋಗುತ್ತಿದ್ದಾನೆ. ಭೂಮಿಯ ಪ್ರತಿಯೊಂದು ವಸ್ತುವನ್ನು ಉದ್ದಿಮೆಯ ಸರಕಾಗಿ ನೋಡುತ್ತಿರುವ ಮನುಷ್ಯ ತನ್ನ ವಿನಾಶವನ್ನು ತಾನೇ ತಂದುಕೊಳ್ಳುತ್ತಿದ್ದಾನೆ. ಮನುಷ್ಯನ ಸ್ವಾರ್ಥ ಮತ್ತು ಅವಿವೇಕತನದಿಂದ ಪ್ರಕೃತಿಯ ಜೊತೆಗೆ ಸಂಘರ್ಷಕ್ಕಿಳಿದಿದ್ದಾನೆ.

"ಸತ್ತಂತ ತೊಗಲೀಗೆ ಮತ್ತೆ ಜೀವವ ತುಂಬಿ
ಸುತ್ತ ನಾಡೆಲ್ಲ ಪ್ರತಿಧ್ವನಿ
ಸುತ್ತ ನಾಡೆಲ್ಲ ಪ್ರತಿಧ್ವನಿ ಮಾಡುತ್ತ
ಚಿತ್ತಾರದಲಿಗಿಡಿದು ಬಡಿಯುತ್ತ ಕುಣಿಯುತ್ತ
ಬತ್ತಿದ ನೆಲಕಾಗಿ ಎಚ್ಚೆತ್ತ ಜನಕ್ಕಾಗಿ
ಮುತ್ತೀನ ಮಳೆ ನಾವು ಕರೆಯೋಣ ॥

ಮೂಡಣದ ಸೀಮ್ಯಾಗ ಗೇಣುದ್ದ ಮಾಡ್ಯಾಗಿ
ಹಾಡ್ಯಾಡಿ ಬಾರೋ ಮಳೆರಾಯ
ಹಾಡ್ಯಾಡಿ ಬಾರೋ ಮಳೆರಾಯ ಮಹರಾಯ
ಎತ್ತೆಮ್ಮೆ ಕರುಗಳ ಕಾಲುಗಳ್ಹೋಗ್ಯಾವ
ಗಂಗಾ ತುಂಗಾ ಕೆರೆಯ ನೀರಿಂಗಿ ಜಲ ಸರಿದು
ಚಿಲಿ ಪಿಲಿ ಗಿಳಿಗುಬ್ಬಿ ನೆಲಕಚ್ಚಿ ಸತ್ತಾವ
ಬತ್ತಿದ ನೆಲಕ್ಕಾಗಿ ಎಚ್ಚೆತ್ತ ಜನಕ್ಕಾಗಿ
ತಪ್ಪದೇ ಬಾರೋ ಮಳೆರಾಯ॥"[೨೦]

ಹೀಗೆ ಮಳೆಗಾಗಿ ಮಳೆರಾಯನಲ್ಲಿ ರೈತರು ಮೊರೆಯಿಡುತ್ತಾರೆ. ಇದಕ್ಕೂ ಕರಗದ ಮಳೆರಾಯನಿಗೆ ಮತ್ತೊಮ್ಮೆ ಜನರು ಕೇಳುವುದು ಹೀಗೆ:

"ನೀ ಬರದೆ ಹೋದರೆ ಬದುಕಲಾರೆವು ನಾವು
ಮರಿಬ್ಯಾಡ ಮಳೆರಾಯ ಮುನಿಬ್ಯಾಡೊ
ಮರಿಬ್ಯಾಡ ಮಳೆರಾಯ ಮುನಿಬ್ಯಾಡೊ ದಯಮಾಡಿ
ಕಾಲಕಾಲದಿಂದ ಕೂಲಿಮಾಡೋರು ನಾವು
ಕೂಳೀಗೆ ಕಾಸಿಲ್ಲ ಕೂಲಿಗೆ ಕರೆಯೋರಿಲ್ಲ

ಕೂಳಿಲ್ಲ ಕೂಸಿಗೆ ನೀರಿಲ್ಲ ಬ್ಯಾಸಿಗೆ
ಎಚ್ಚೆತ್ತ ಜನಕ್ಕಾಗಿ ಬತ್ತಿದ ನೆಲಕ್ಕಾಗಿ
ತಪ್ಪದೇ ಬಾರೋ ಮಳೆರಾಯ॥"[೫೧]

ನೊಂದ ಜನರ ಆಕ್ರಂದನ ಮಳೆಗಾಗಿ ಮೊರೆಯಿಡುತ್ತಿದೆ. ಹೋರಾಟದ ಹಾಡುಗಳು ಶೋಷಣೆ–ಅವಮಾನದ ವಿರುದ್ಧ ಪ್ರತಿರೋಧಿಸುವ ಜೊತೆಗೆ ನೊಂದವರ ದನಿಗೂ ಜೀವ ಮಿಡಿದಿವೆ. ಜನಪದ ಕಥನಕವನದ ಧಾಟಿಯ ಈ ಹಾಡು ಮಳೆ ಮತ್ತು ಜನರ ನಡುವಿನ ಅಂತರ್‌ಸಂಬಂಧದ ಸೂಕ್ಷ್ಮ ಎಳೆಗಳನ್ನು ಬಿಚ್ಚಿಡುತ್ತದೆ.

ಆಧುನಿಕತೆಯ ಭರಾಟೆಯಲ್ಲಿ ರೈತರು ಬೀಜ ಸಂರಕ್ಷಣೆಯನ್ನು ಕೈಬಿಟ್ಟು ಹೈಬ್ರಿಡ್ ಮತ್ತು ಕುಲಾಂತರಿ ತಳಿಗಳನ್ನು ಬಿತ್ತನೆಯಲ್ಲಿ ಬಳಕೆ ಮಾಡುತ್ತಿದ್ದಾರೆ. ಇದರ ಪರಿಣಾಮ ಮೂಲತಳಿಗಳು ಅಳಿವಿನ ಅಂಚಿಗೆ ಸರಿಯಲ್ಪಡುತ್ತಿವೆ. ಕಡಿಮೆ ಸಮಯದಲ್ಲಿ ಹೆಚ್ಚು ಇಳುವರಿಯನ್ನು ಪಡೆಯಬಹುದೆಂಬ ಆಸೆಗೆ ತುತ್ತಾಗಿ ಆಹಾರದ ಮೂಲ ಸೊಗಡನ್ನೇ ನಾಶ ಮಾಡಿವೆ. ಅನೇಕ ರೀತಿಯ ಹೈಬ್ರಿಡ್ ತಳಿಗಳನ್ನು ಬೆಳೆಯಲು ಪ್ರಯತ್ನಿಸಿ, ವಿಫಲರಾಗಿ ಸಾವಿರಾರು ರೈತರು ಸಾಲಗಾರರಾಗಿದ್ದಾರೆ; ಬಹುತೇಕರು ಸಾಲಬಾಧೆಗೆ ತಾಳಲಾರದೆ ಆತ್ಮಹತ್ಯೆಯನ್ನು ಮಾಡಿಕೊಂಡಿದ್ದಾರೆ.

"ಲೋಕದ ಹುಟ್ಟಿನ ಗುಟ್ಟಿನ ಬೀಜವೆ
ನಮೋ ಜೀವವೇ ನಮೋ ಜಾಲವೆ

ಅನಾದಿ ಕಾಲದ ಒಡಲಿನ ಹೂವೆ
ಮಣ್ಣಿನೊಳಗಿನ ಹೊಕ್ಕುಳ ಬಳ್ಳಿಯೆ
ಸಾವಿರ ಸಾವಿನ ದವಡೆಗಳಿಂದ
ತಪ್ಪಿಸಿಕೊಂಡ ನಂಟಿನ ಗಿಳಿಯೆ

ಹಕ್ಕಿ ಗೂಡಲ್ಲಿ ಫಲಿಸಿತು ಮೊಟ್ಟೆ
ಇಕ್ಕೆ ಇಟ್ಟಲ್ಲಿ ಬೆಳೆದೆ ಬಿಟ್ಟೆ
ಹಕ್ಕಿಗಳತ್ತರೆ ನೀನೂ ಅತ್ತೆ
ಬಗ್ಗದೆ ಹೋದೆ ಬರಗಾಲಕ್ಕೆ

ಗೂಡೆಗಳಲ್ಲಿ ಮೂಡೆಗಳಲ್ಲಿ
ಮಡಕೆಯ ಸಾಲಿನ ಸಂಭ್ರಮದಲ್ಲಿ
ಜಂತೆಗಳಲ್ಲಿ ಸೂರುಗಳಲ್ಲಿ
ಅಜ್ಜಿಯ ಜೀವದ ಗಂಟುಗಳಲ್ಲಿ

ಮಳೆಗಾಲದಲಿ ಕುಣಿಯುತ ಬೆಳೆದೆ
ಬರಗಾಲದಲು ಬಗ್ಗದೆ ಉಳಿದೆ

ಬೇವಿನ ಸೊಪ್ಪಿನ ಸಲ್ಲಾಪದಲಿ
ಬೂದಿಯ ಉಪ್ಪಿನ ಸಂಗದಲಿ"[೫೨]

ಹೀಗೆ ಅನಾದಿ ಕಾಲದಿಂದ ಬೆಳೆಯುತ್ತಿದ್ದ ಬೆಳೆಗಳನ್ನು ಬದಿಗೊತ್ತಿ, ಹಣದಾಸೆಗೆ ಹೈಬ್ರಿಡ್ ಬೀಜಗಳ ಮೊರೆಹೋದರು. ಇದರಿಂದ ಅನಾದಿ ಕಾಲದಿಂದಲೂ ಬೆಳೆಯುತ್ತ ಬಂದಿರುವ ಬೀಜಗಳ ಬದಲಿಗೆ ಹೈಬ್ರಿಡ್ ಬೀಜಗಳನ್ನು ಬೆಳೆಯುತ್ತ, ಹೆಚ್ಚು ಇಳುವರಿಯನ್ನು ಪಡೆಯುವ ಆಸೆಗೆ ಬಲಿಯಾಗಿ ತಾನೇ ಸಾವಿನ ದವಡೆಗೆ ಸಿಲುಕುವ ಅಪಾಯ ತಂದುಕೊಳ್ಳುತ್ತಿದ್ದಾನೆ.

"ಬೀಟಿ ಈಟಿ ಬೀಜಗಳು
ಅಣುಗಳಾದವು ವ್ರಣಗಳಾದವು
ಮಣ್ಣಿನ ಕಣ್ಣನು ಕಿತ್ತುಕೊಂಡವು
ರೈತರ ಸಾವಿನ ಸಂಕಟವಾದವು

ನಿನ್ನ ಮರೆತವರು ಮತ್ತೆ ಬಂದಿಹರು
ನಿನ್ನ ಜರಿದವರು ಹುಡುಕಿ ತಂದಿಹರು
ಲೋಕದ ಹುಟ್ಟಿನ ಗುಟ್ಟಿನ ಬೀಜವೆ
ನಿಲ್ಲದ ನಿನ್ನ ಪಯಣಕೆ ನಮಿಸುವೆ"[೫೩]

ಬೀಜಗಳ ಹುಟ್ಟಿನ ಗುಟ್ಟನ್ನು ವಿಸ್ಮಯದಿಂದ ನೋಡುತ್ತಿರುವ ಕವಿ, ಬೀಜಗಳ ಅಸಲಿತನವನ್ನು ಈ ಹಾಡಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಬಿ.ಟಿ. ಹತ್ತಿ ಮತ್ತು ಬಿ.ಟಿ. ಬದನೆ ರೈತರನ್ನು ಸಾಲದ ಕೂಪಕ್ಕೆ ತಳ್ಳಿದ್ದು ಎಲ್ಲರಿಗೂ ಗೊತ್ತಿರುವ ಸಂಗತಿ. ಇಷ್ಟಾಗಿಯೂ ರೈತ ಲಾಭದಾಸೆಗೆ ಬೆಳೆಗೆ ರಾಸಾಯನಿಕ ಗೊಬ್ಬರ ಬಳಸುವುದರಿಂದ ಮತ್ತು ಬೆಳೆಗಳಿಗೆ ಕ್ರಿಮಿನಾಶಕಗಳನ್ನು ಸಿಂಪಡಿಸುವುದರಿಂದ ಮಣ್ಣಿನ ಫಲವತ್ತತೆಯನ್ನು ಕೊಲ್ಲುವುದಲ್ಲದೇ, ಇಡೀ ಪರಿಸರವನ್ನು ನಾಶ ಮಾಡುತ್ತಿದ್ದಾನೆ. ಹೀಗೆ ಪ್ರಕೃತಿಯ ನಾಶಕ್ಕೆ ಕವಿ ಸೂಕ್ಷ್ಮವಾಗಿ ಪ್ರತಿಕ್ರಿಯಿಸುತ್ತಿದ್ದಾನೆ. ಇಷ್ಟೆಲ್ಲ ಸಮಸ್ಯೆಗಳನ್ನು ರೈತ ಅನುಭವಿಸುತ್ತಿದ್ದರೂ ಅವನಿಗೆ ಅರಿವಾದಂತಿಲ್ಲ. ಹಣದ ಮೋಹ ಮತ್ತು ಸ್ವಾರ್ಥ ರೈತರನ್ನು ಬಲಿ ತೆಗೆದುಕೊಳ್ಳುತ್ತಿದೆ. ಆದ್ದರಿಂದಲೇ ಪ್ರಕೃತಿಯಿಂದ ಅನೇಕ ವಿಕೋಪಗಳಿಗೆ ತುತ್ತಾಗುತ್ತಿದ್ದಾನೆ. ನೆಲದ ನಂಟಿನಿಂದ ದೂರ ಸರಿಯುತ್ತಿದ್ದಾನೆ.

**ಮಹಿಳಾ ಹೋರಾಟದ ಹಾಡುಗಳು**

ಕರ್ನಾಟಕದಲ್ಲಿ ತೊಂಬತ್ತರ ದಶಕದವರೆಗೆ ಜನಪರ ಚಳವಳಿಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ತುಂಬಾ ವಿರಳವಾಗಿತ್ತು. ಆದರೆ ಈಗ ದಲಿತ, ರೈತ, ಕಾರ್ಮಿಕ ಹಾಗೂ ಮಹಿಳಾ ಹೋರಾಟಗಳಲ್ಲಿ ಅತಿಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಭಾಗವಹಿಸಿ ಹೋರಾಟಕ್ಕೆ ಶಕ್ತಿ ತುಂಬುತ್ತಿದ್ದಾರೆ. ಸ್ವತಃ ಮಹಿಳೆಯರು ಕೂಡ ಸಂವಿಧಾನಬದ್ಧ ಹಕ್ಕುಗಳ ಪರವಾಗಿ ಹೋರಾಟದಲ್ಲಿ ದುಮುಕುತ್ತಿದ್ದಾರೆ. ಶತಶತಮಾನಗಳಿಂದ ತುಳಿತಕ್ಕೆ ಒಳಗಾಗಿದ್ದ ಮಹಿಳೆಯರಿಗೆ

ಶಿಕ್ಷಣವು ಪ್ರಜ್ಞೆಯನ್ನು ಮೂಡಿಸಿದೆ. ಈ ಎಚ್ಚೆತ್ತ ಪ್ರಜ್ಞೆ ಮಹಿಳೆಯರ ಹೊರಾಟಗಳಿಗೆ ಸ್ಫೂರ್ತಿಯಾಯಿತು. ಆದರೆ ಅನಾದಿ ಕಾಲದಿಂದಲೂ ಮಹಿಳೆಯರು ತಮ್ಮ ನೋವು, ಸಂಕಟಗಳನ್ನು ಹಾಡಿನ ರೂಪದಲ್ಲಿ ವ್ಯಕ್ತಪಡಿಸುತ್ತಲೇ ಬಂದಿದ್ದಾರೆ. ಇಂಥ ಹಾಡುಗಳು ಮೌಖಿಕ ಪರಂಪರೆಯಲ್ಲಿ ತುಂಬಾ ಇವೆ. ಇವುಗಳ ಮುಂದುವರಿಕೆಯಾಗಿ ಮಹಿಳೆಯರು ತಮ್ಮ ನೋವು ಸಂಕಟಗಳನ್ನು ಹೋರಾಟದ ಹಾಡುಗಳ ಮೂಲಕ ಹೊರಹಾಕುತ್ತಲೇ ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸಿದ್ದಾರೆ.

ಈ ಹಾಡು ನೊಂದ ಮಹಿಳೆಯರನ್ನು ಚಳವಳಿಗಳಲ್ಲಿ ಪಾಲ್ಗೊಳ್ಳಲು ಕರೆ ಕೊಡುತ್ತಿದೆ.

"ಸಿಂಹದಂತೆ ಸಿಡಿದು ಬನ್ನಿ
ಹುಲಿಯಂತೆ ಜಿಗಿದು ಬನ್ನಿ
ಹೋರಾಟದ ಸಾಗರಕ್ಕೆ ನಾರಿಯರೇ ನಗುತ ಬನ್ನಿ
ವೀರ ನಾರಿಯರ ಮಡಿಲ
ಧೀರ ನಾರಿಯರು ನೀವು
ಸಂಘದಲ್ಲಿ ಸೇರ ಬನ್ನಿ ಸಂಘರ್ಷವ ಮಾಡ ಬನ್ನಿ"[೫೪]

ಹೋರಾಟಕ್ಕೆ ಬೇಕಾದ ಛಲ, ದೃಢಸಂಕಲ್ಪವನ್ನು ಈ ಹಾಡು ಹೋರಾಟಗಾರರಲ್ಲಿ ಉದ್ದೀಪಿಸುತ್ತಿದೆ.

ಇನ್ನೊಂದು ಹಾಡಿನಲ್ಲಿ ಈ ಪುರುಷವ್ಯವಸ್ಥೆ ರೂಪಿಸಿರುವ ಪುರುಷಕೇಂದ್ರಿತ ವ್ಯವಸ್ಥೆಗೆ ಬದಲಾಗಿ ತಮ್ಮದೇ ಒಂದು ಚರಿತ್ರೆಯನ್ನು ನಿರ್ಮಿಸಿಕೊಳ್ಳೋಣ ಎಂಬ ಇಂಗಿತವಿದೆ. ಕವಯಿತ್ರಿ ಈ ಹಾಡಿನಲ್ಲಿ 'ದೇಹದಗುಂಟ ಹರಿದ ನೆತ್ತರಿನ ಚರಿತೆ ತೊಳೆಯಲು ಹೊಸ ನದಿಯ ಹುಡುಕುವ ಹವಣಿಕೆಯನ್ನು ವ್ಯಕ್ತಪಡಿಸುತ್ತಿದ್ದಾರೆ.

"ಒಂದಲ್ಲ ಒಂದು ದಿನ
ಈ ನೆಲದ ತುಂಬ ಹೆಣ್ಣುಗಳು
ಮೆರವಣಿಗೆ ಹೊರಡುತ್ತಾರೆ.
ದೇಹದಗುಂಟ ಹರಿದ
ನೆತ್ತರಿನ ಚರಿತೆ ತೊಳೆಯಲು
ಹೊಸ ನದಿಯ ಹುಡುಕಿ ನಡೆಯುತ್ತಾರೆ.
ದೇಹ ಮುಚ್ಚಿದ ಎಲ್ಲವನೂ ಕಳಚಿಟ್ಟು
ಎತ್ತಿ ತುರುಬು ಕಟ್ಟಿ, ದಾಪುಗಾಲಿಟ್ಟು
ಈ ನೆಲದ ಹಾದಿಗಳಲಿ ಬೀದಿಗಳಲಿ
ಹೆಣ್ಣುಗಳು ಮೆರವಣಿಗೆ ಹೊರಡುತ್ತಾರೆ."[೫೫]

ಮೂಲತಃ ಇದೊಂದು ಕವಿತೆ, ಆದರೆ ಇದನ್ನು ಹೋರಾಟದ ಹಾಡನ್ನಾಗಿ ಹಾಡಲಾಗುತ್ತದೆ. ಇಂಥ ಬಹುತೇಕ ಕವಿತೆಗಳು ಹೋರಾಟದ ಹಾಡಾಗಿ ಹಾಡಲಾಗುತ್ತಿದೆ. ಹಾಡುಗಾರರು

ಲಯ ಮತ್ತು ಗೇಯತೆಯನ್ನು ಹೊಂದಿಸಿಕೊಂಡು ತಮಗೆ ಬೇಕಾದ ಹಾಗೆ ಹಾಡುತ್ತಾರೆ. ಪುರುಷಕೇಂದ್ರಿತ ಯಜಮಾನಿಕೆಯ ವ್ಯವಸ್ಥೆಯನ್ನು ಧಿಕ್ಕರಿಸಿ ತನ್ನದೇ ಆದ ಹೊಸ ಮತ್ತು ಸಮಾನ ಸ್ವಾತಂತ್ರ್ಯವುಳ್ಳ ಚರಿತ್ರೆಯನ್ನು ಸೃಜಿಸಿಕೊಳ್ಳುವ ದಾರಿಯನ್ನು ಕವಯಿತ್ರಿ ಹುಡುಕಲೆತ್ನಿಸುತ್ತಿದ್ದಾರೆ.

"ಹೊಸ ಮಾತ ಹುಡುಕುತ್ತ
ಗಲ್ಲಿ ಗಲ್ಲಿಗಳ ಹೊಕ್ಕು
ಎಲ್ಲ ಮಕ್ಕಳನೂ ತೆಕ್ಕೆಗೆ ತಂದು
ಮಂದಿರದ ಮುರ್ತಿಯ ತಿನ್ನುವುದ ಕಲಿಸುತ್ತಾರೆ
ಮಸೀದಿಯ ಗೋಡೆಯ ಒಡೆಯುವುದ ಕಲಿಸುತ್ತಾರೆ.

ಹಾದಿಯುದ್ದಕ್ಕೂ ಗಿಡ ನೆಡುತ್ತ
ಮಳೆ ಹಾಡ ಹಾಡುತ್ತ
ಬಯಲ ಬಿಗುಮಾನ ಹೊತ್ತು
ಒಂದಲ್ಲ ಒಂದು ದಿನ ಈ ನೆಲದ ತುಂಬ ಹೆಣ್ಣುಗಳು
ಮೆರವಣಿಗೆ ಹೊರಡುತ್ತಾರೆ."[೫೬]

ಶಾಂತಿ ಮತ್ತು ಸಮಾನತೆಯ ಆಶಯ ಹೊತ್ತು ಸಂದೇಶವನ್ನು ಸಾರಲು ಕರೆ ಕೊಡುವ ಈ ಹಾಡು ಮಾನವೀಯ ಪ್ರೀತಿಯ ಪಾತಳಿಯಲ್ಲಿ ಬದುಕಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಿದೆ. ಹಾಗೆಯೇ ಮಂದಿರ ಮಸೀದಿಗಳನ್ನು ಒಡೆದು ಜಾತಿ, ಮತ, ಭೇದವನ್ನು ಕಿತ್ತೊಗೆಯುವ ಸಂಕಲ್ಪಕ್ಕೆ ಹಾತೊರೆಯುತ್ತಿದೆ. 'ಒಂದಲ್ಲ ಒಂದು ದಿನ ಈ ನೆಲದ ತುಂಬ ಹೆಣ್ಣುಗಳು ಮೆರವಣಿಗೆ ಹೊರಡುತ್ತಾರೆ' ಎಂದು ಕರೆಕೊಡುವ ಪ್ರತಿರೋಧಾತ್ಮಕ ದನಿಯ ಆಂತರ್ಯದಲ್ಲಿಯೇ 'ಹಾದಿಯುದ್ದಕ್ಕೂ ಗಿಡ ನೆಡುತ್ತ, ಮಳೆ ಹಾಡ ಹಾಡುವ' ಮಾನವೀಯ ಪ್ರೀತಿಯ ಸಂದೇಶವನ್ನು ಹೊಮ್ಮಿಸುತ್ತಿದೆ.

ಮಹಿಳೆಯನ್ನು ಶತಶತಮಾನಗಳಿಂದಲೂ ಈ ಪುರುಷಕೇಂದ್ರಿತ ವ್ಯವಸ್ಥೆ ಎರಡನೆಯ ದರ್ಜೆಯ ಪ್ರಜೆಯನ್ನಾಗಿಯೇ ನೋಡಿದೆ. ಅಲ್ಲಿಂದ ಇಲ್ಲಿಯವರೆಗೆ ಪುರುಷನಿಂದ ಹೆಣ್ಣು ಎಷ್ಟೆಲ್ಲ ನೋವು ಅನುಭವಿಸಿದ್ದರೂ ದ್ವೇಷವನ್ನು ಸಾಧಿಸದೆ ಅದನ್ನು ನುಂಗಿಕೊಳ್ಳುವ ತಾಯ್ತನ ಹೆಣ್ಣಿನದು. ಇಂಥ ಮಾನವೀಯ ಪ್ರೀತಿ ಮತ್ತು ಅಂತಃಕರಣದ ಗುಣವೇ ಈ ಹಾಡಿನ ಜೀವಸೆಲೆಯಾಗಿದೆ.

ಶೋಷಣೆ, ಅವಮಾನಗಳ ವಿರುದ್ಧ ಪ್ರತಿಕಾರ ತೀರಿಸಿಕೊಳ್ಳುವ ಹೋರಾಟದ ಹಾಡುಗಳ ನಡುವೆ ಈ ಹಾಡು ಕೊಡುವ ಸಂದೇಶ ಮಹತ್ವವಾದುದು. ದ್ವೇಷಕ್ಕೆ ದ್ವೇಷವನ್ನೇ ಉತ್ತರವಾಗಿಸದೆ, ಮಾನವೀಯ ಪ್ರೀತಿಯ ಸಂದೇಶ ಸಾರುತ್ತಿರುವುದು ಈ ಹಾಡಿನ ವಿಶೇಷವಾಗಿದೆ.

ಅಂದರೆ ಹೋರಾಟ ಅಥವಾ ಕ್ರಾಂತಿಗೀತೆಗಳೆಂದರೆ ಸಿಟ್ಟು, ಆಕ್ರೋಶ ತುಂಬಿದ ದನಿಯಲ್ಲಿ ಪ್ರತಿರೋಧವನ್ನು ಹೊರಹಾಕುವ ಹಾಡುಗಳೆಂಬ ಸಾಮಾನ್ಯ ಅರ್ಥವೇ ಬಹುತೇಕರಲ್ಲಿ ತುಂಬಿರುವಾಗ ಇಂಥ ಹಾಡುಗಳು ಭಿನ್ನ ದನಿಯಾಗಿ ಕಾಣಿಸುತ್ತವೆ.

**ಕಾರ್ಮಿಕ ಹೋರಾಟದ ಹಾಡುಗಳು**

ಕಾರ್ಮಿಕರು ತಮ್ಮ ನೋವು, ಸಂಕಟಗಳನ್ನು ಹಾಡಿನ ಮೂಲಕ ಹೊರಹಾಕುತ್ತಲೇ ಬಂದಿದ್ದಾರೆ. ಜನಪದರು ಕುಟ್ಟುವಾಗ, ಬೀಸುವಾಗ ತಮ್ಮ ಬೇಸರವನ್ನು ಕಳೆಯಲು ಹಾಡು, ಕಥೆಗಳನ್ನು ಕಟ್ಟಿ ಹಾಡಿರುವ ನಿದರ್ಶನಗಳು ನಮ್ಮ ಮೌಖಿಕ ಪರಂಪರೆಯಲ್ಲಿ ಬಹಳಷ್ಟು ಸಿಗುತ್ತವೆ. 'ಹಾದೀಲಿ ಹೋಗೋರೆ ಹಾಡೆಂದು ನಿಲಬೇಡಿ, ಹಾಡಲ್ಲ ನನ್ನ ಒಡಲುರಿ। ದೇವರೆ ಬೆವರಲ್ಲ ನನ್ನ ಕಣ್ಣೀರು' ಎಂದು ಕಾಯಕ ಜೀವಿಗಳಾದ ಜನಪದರು ಬಹಳ ಹಿಂದೆಯೇ ತಮ್ಮ ಒಡಲಾಳದ ನೋವನ್ನು ಈ ರೀತಿ ಹಾಡಾಗಿಸಿದ್ದಾರೆ.

ಮನಸಿನಲ್ಲಿ ಎಷ್ಟೇ ನೋವಿದ್ದರೂ ಅದನ್ನು ಹೇಳಲಾಗದ ಸ್ಥಿತಿ ಈ ತ್ರಿಪದಿಯಲ್ಲಿ ವ್ಯಕ್ತವಾಗಿದೆ. ಇಂಥ ಅಸಂಖ್ಯ ವೇದನೆಗಳು ನಮ್ಮ ಮೌಖಿಕ ಪರಂಪರೆಯ ಉದ್ದಕ್ಕೂ ಅಭಿವ್ಯಕ್ತಿಸಲ್ಪಟ್ಟವೆ. ಈಗಲೂ ದುಡಿಯುವ ಜನರ ನೋವಿನ ಕಥೆಗಳು ಹಾಡಾಗಿ ವ್ಯಕ್ತಗೊಳ್ಳುತ್ತಿವೆ.

"ಹೊತ್ತಾರೆ ಎದ್ದು ಗುಡ್ಡ ಬೆಟ್ಟ ಸುತ್ತಿದವರು ನಾವು
ತುತ್ತು ಕೂಳಿಗಾಗಿ ಜೀತಕ್ಕಿದ್ದವರು
ಕಪ್ಪು ನೆಲದಲ್ಲಿ ಮುಖವಿಟ್ಟು ಕಣ್ಣೀರಿಟ್ಟವರು ನಾವು
ನಮ್ಮ ಬಂಧನ ಕಳಚದ ಮಂತ್ರಿ ಯಾತಕೋ ನಿಮ್ಮ ಸರಕಾರ ಯಾತಕೋ

ಬೆವರ ಹರಿಸಿ ದುಡಿದವರು ನಾವು
ಬಿತ್ತಿ ಬೆಳೆ ಬೆಳೆದವರು
ಬೆಟ್ಟದಂತ ಕನಸಕಟ್ಟಿ ರಾಶಿ ಮಾಡಿದವರು ನಾವು
ನಮ್ಮ ಬೆಳೆಗೆ ಬೆಲೆಕಟ್ಟಲು
ಮಂತ್ರಿ ಯಾತಕೋ ಸರಕಾರ ಯಾತಕೋ"[೫೭]

ಶತಶತಮಾನಗಳಿಂದಲೂ ಬಡವ–ಶ್ರೀಮಂತ ಎಂಬ ತರತಮ ಭಾವಗಳು ಈ ಸಮಾಜದಲ್ಲಿ ತಾಂಡವವಾಡುತ್ತಿವೆ. ಬಡವರಿಗೆ ಭೂಮಿಯಿಲ್ಲ, ಸ್ವಂತ ದುಡಿಮೆಗೆ ಅವಕಾಶವಿಲ್ಲ. ಭೂಮಾಲೀಕರು ಬಡವರ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದಾರೆ. ಒಂದು ಹೊತ್ತಿನ ಊಟಕ್ಕಾಗಿ ಬಡವರು ಶ್ರೀಮಂತರ ಮನೆಯಲ್ಲಿ ಸಂಬಳವಿಲ್ಲದೆ ಹಗಲಿರುಳು ದುಡಿದಿದ್ದಾರೆ. ಒಂದು ವೇಳೆ ಕಷ್ಟಪಟ್ಟು ದುಡಿದರೂ ದುಡಿಮೆಗೆ ತಕ್ಕ ಪ್ರತಿಫಲ ಸಿಗುವುದಿಲ್ಲ. ಆದ್ದರಿಂದ ಶ್ರೀಮಂತರ ಮನೆಯಲ್ಲಿ ಜೀತವಿದ್ದು, ಇಡೀ ಜೀವನಪೂರ್ತಿ ಅವರ ಸೇವೆ ಮಾಡಬೇಕಾದ ಅನಿವಾರ್ಯತೆ ಬಡವರದ್ದು. ಆದ್ದರಿಂದ ಉಳ್ಳವರಿಂದ ಆಗುವ ನೋವು, ಅವಮಾನಗಳ ವಿರುದ್ಧ ಪ್ರತಿಭಟಿಸಲಾಗದು ಅಸಹಾಯಕ ಸ್ಥಿತಿ ಬಡ ಕೂಲಿಕಾರರದ್ದು. ಹಸಿವಿನ ತೀವ್ರತೆ ಕುರಿತು ಹೇಳುತ್ತಾರೆ.

ಭೂಮಾಲೀಕರು, ಪುರೋಹಿತಶಾಹಿಗಳು ಬಡವರನ್ನು ಒಂದು ರೀತಿಯ ಶೋಷಣೆ ಮಾಡಿದರೆ, ರಾಜಕಾರಣಿಗಳು ಇನ್ನೊಂದು ರೀತಿಯಲ್ಲಿ ಶೋಷಣೆ ಮಾಡುತ್ತಿದ್ದಾರೆ. ಭೂಮಾಲೀಕರು ಬಡವರನ್ನು ಕೀಳಾಗಿ ನಡೆಸಿಕೊಂಡು ಸಾಲ ಕೊಟ್ಟು ಜೀವನಪರ್ಯಂತ ಜೀತಕ್ಕೆ ಇಟ್ಟುಕೊಂಡು ಶೋಷಣೆ ಮಾಡಿದರೆ; ಪುರೋಹಿತಶಾಹಿಗಳು ಮೂಢನಂಬಿಕೆ, ಮೌಢ್ಯಾಚರಣೆ ದೇವರು-ಧರ್ಮ ಇತ್ಯಾದಿ ಹೆಸರಿನಲ್ಲಿ ಬಡವರನ್ನು ಸುಲಿಗೆ ಮಾಡುತ್ತಿದ್ದಾರೆ. ಇಷ್ಟಾದರೂ ರಾಜಕಾರಣಿಗಳು ಬಡವರ ಸಮಸ್ಯೆಗಳನ್ನು ನಿವಾರಣೆ ಮಾಡುತ್ತೇನೆಂದು ಹೇಳಿ ಚುನಾವಣೆಯಲ್ಲಿ ಗೆದ್ದ ಮೇಲೆ ಅವರನ್ನು ವಂಚಿಸುವುದು ಗೊತ್ತಿರುವ ಸಂಗತಿಯೇ ಆಗಿದೆ. ಬಡವರಿಗೆ ನೀಡಬೇಕಾದ ಸೌಲಭ್ಯಗಳನ್ನು ನೀಡದೆ ವಂಚಿಸುತ್ತಿರುವುದು ಇನ್ನೊಂದು ರೀತಿಯ ದುರಂತ.

ಬಡವರು ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ವಂಚನೆಗೆ ಒಳಗಾಗುತ್ತಿದ್ದಾರೆ. ದಿನನಿತ್ಯ ಕೂಲಿ ಮಾಡಿಕೊಂಡು ಕಾರ್ಮಿಕರು ತಮ್ಮ ಬದುಕನ್ನು ಕಟ್ಟಿಕೊಳ್ಳಬೇಕಾಗಿದೆ. ಇಂತಹವರ ಸ್ಥಿತಿಯನ್ನು ಕುರಿತು ಕವಿ ಈ ರೀತಿ ಚಿತ್ರಿಸಿದ್ದಾರೆ.

"ಶ್ಯಾರಿ ಗಂಜಿಗಾಗಿ
ಸೇರು ಬೆವರು ಸುರಿಸುತಾ
ಊರೂರು ತಿರುಗುವವರ್ಯಾರಯ್ಯ...
ಈ ನಾಡ ಕಟ್ಟಿದವರು ನಾವೆಲ್ಲಿಗ್ಹೋಗಬೇಕು
ಕೂಲಿಯವರು ನಾವು ಕೇಳಯ್ಯ"[೫೮]

ಅಧಿಕಾರಶಾಹಿಯ ದಬ್ಬಾಳಿಕೆಯನ್ನು ತೀವ್ರವಾಗಿ ಪ್ರತಿರೋಧಿಸುವ ಈ ಹಾಡು ಭ್ರಷ್ಟವ್ಯವಸ್ಥೆಯ ಬಗ್ಗೆ ಸಮರ ಸಾರುತ್ತಿದೆ.

"ನೂರಕೆ ತೊಂಬತ್ತು ಬಡ ಜನಗಳು
ಭೂಮಿಯ ನಂಬಿ ಬದುಕುತಿರುವರು
ಉಳುವವನಿಗೆ ಭೂಮಿ ಇಲ್ಲ
ಉತ್ತರು ಬಿತ್ತರು ಗಂಜಿ ಇಲ್ಲ
ರೈತ ದೇಶದಲ್ಲಿ ರೈತ ಮಗನಿಗೆ ಭೂಮಿ ಇಲ್ಲವಲ್ಲೊ ಜನರೇ॥

ಟಾಟಾ ಬಿರ್ಲಾರ ಹಣದಿಂದಲೇ ಗದ್ದುಗೇರಿದ ನರಸಿಂಹರಾಯ
ಟಾಟಾ ಬಿರ್ಲಾರ ಹಣದಿಂದಲೇ ಕುರ್ಚಿಲಿ ಕುಂತ ರಾಜೀವಗಾಂಧಿ
ಕಟ್ಟಿರುವಂತ ಭವ್ಯ ಬಂಗಲೆಗಳು ಯಾರ ಯಾರವೋ ಜನರೇ॥
ಟಾಟಾ ಬಿರ್ಲಾರ ಆಸ್ತಿ ಪಾಸ್ತಿಗಳು ಕೋಟಿಗಟ್ಟಲೇ ಬೆಳೆಯುತಿರುವವು
ದಿನಕಳೆದಂತೆ ಬಡತನವೆಂಬುದು ಚಿಕ್ಕಿಗಳಲ್ಲಿ ಸೇರುತಿರುವುದು
ಆ ಅಸಮಾನತೆಗೆ ಮೂಲಕಾರಣ ಆಲಿಸಿಕೇಳಿರೋ ಜನರೇ॥"[೫೯]

ಬಂಡವಾಳಶಾಹಿಗಳ ಹಿತಾಸಕ್ತಿಗಳನ್ನು ಕಾಪಾಡುವ ಸಲುವಾಗಿ ದಲಿತ ಮತ್ತು ರೈತರನ್ನು ಒಕ್ಕಲೆಬ್ಬಿಸಿ ಭೂಮಿ ಕಿತ್ತುಕೊಂಡಿದ್ದಕ್ಕೆ ಪ್ರತಿರೋಧವನ್ನು ಈ ಹಾಡು ಒಡ್ಡುತ್ತಿದೆ. ಇದು ಬಂಡವಾಳಶಾಹಿ ಮತ್ತು ಆಳುವ ವರ್ಗಗಳ ನಡುವಿನ ಗುಪ್ತ ಮತ್ತು ಅಲಿಖಿತ ಒಪ್ಪಂದಗಳ ನಿಜಬಣ್ಣವನ್ನು ಬಯಲು ಮಾಡುತ್ತಿದೆ. ಮುಕ್ತ ಮಾರುಕಟ್ಟೆಯ ಹೆಸರಿನಲ್ಲಿ ವಿದೇಶಿ ಬಂಡವಾಳ ಹೂಡಿಕೆದಾರರನ್ನು ಪೋಷಿಸಿ ಲಾಭ ಪಡೆಯುವ ರಾಜಕೀಯ ವ್ಯವಸ್ಥೆಯನ್ನು ಈ ಹಾಡಿನಲ್ಲಿ ವಿಡಂಬಿಸಲಾಗಿದೆ.

**ಪರಿಸರದ ಹಾಡುಗಳು**

ಆಧುನೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದ ಪರಿಸರ ದಿನದಿಂದ ದಿನಕ್ಕೆ ಮಾಲಿನ್ಯವಾಗುತ್ತಿದೆ. ಮತ್ತು ನಾಶವಾಗುತ್ತಿದೆ. ಅಷ್ಟೇ ಅಲ್ಲದೆ, ಈ ಪರಿಸರ ವಿನಾಶದಿಂದ ಪ್ರಾಣಿ, ಪಕ್ಷಿ, ಮನುಷ್ಯನ ಜೀವನದ ಮೇಲೂ ದುಷ್ಪರಿಣಾಮಗಳು ಉಂಟಾಗುತ್ತಿವೆ. ಕಾಡು ನಾಶವಾಗುತ್ತಿದೆ. ಮನುಷ್ಯರ ಆರೋಗ್ಯದಲ್ಲಿ ವಿಪರೀತ ಏರುಪೇರುಗಳಾಗುತ್ತಿವೆ. ಎಷ್ಟೋ ಪ್ರಾಣಿಪಕ್ಷಿಗಳು ಅಳಿವಿನ ಹಂಚಿಗೆ ಸರಿದಿವೆ. ಇಂತಹ ಪರಿಸರದ ಸ್ಥಿತ್ಯಂತರದ ಸಂದರ್ಭವನ್ನು ಕುರಿತ ಗೀತೆ ಈ ಕೆಳಗಿನಂತಿದೆ.

"ಎಲ್ಲಿ ಹೋದವೋ ಕಣ್ಣಿಗೆ ಕಾಣದಾದವು
ಗಿಡಮರಬಳ್ಳಿ ಪ್ರಾಣಿ ಪಕ್ಷಿ ಓತಿಕ್ಯಾತ

ಹೊತ್ತು ಮುಳುಗೋ ಹೊತ್ತಿನ್ಯಾಗ
ನೆತ್ತಿ ಮ್ಯಾಲೆತ್ತಿ ನೋಡಿದಾಗ
ಕೆರೆ ಕೋಳಿಗಳ ಹಿಂಡು ಕಿಲಕಿಲನೆ ಸಾಗಿತ್ತು
ನಿಂಗೊಂದು ಮೊಟ್ಟೆ ನಂಗೊಂದು ಮೊಟ್ಟೆ
ಕೆರೆಕೋಳಿ ಎಂದು ಕರೆದುಬಿಟ್ಟೆ

ಆಡು ಮೇಯಿಸಲು ನಾನು
ಕಾಡುಕಣಿವೆ ಅಲೆದಾಗ
ನರಿ ಮೊಲ ಜಿಂಕೆಗಳು ಎಲ್ಲೆಂದರಲ್ಲಿ ಆಡುತ್ತಿದ್ದವು.
ಜಿಂಕೆ ನೋಡಬೇಕೆಂದ್ರೆ
ಜೂಗೆ ಹೋಗಿ ಕಾಸು ಕೊಡಬೇಕಿಲ್ಲ

ಅಲಾರಾಂ ಗಡಿಯಾರ
ಎಲ್ಲರ ಮನೆಯಲ್ಲಿರಲಿಲ್ಲ
ಹೊತ್ತಾರೆದ್ದು ಹೊಲಕೋಗಲು ಏಳಿಸೋರು ಯಾರಿರಲಿಲ್ಲ
ಗುಬ್ಬಚ್ಚಿಗಳ ಚಿಲಿಪಿಲಿಗೆ
ಎಚ್ಚೆತ್ತು ನಾ ಎದ್ದು ಹೋದನಲ್ಲಾ

ಬೇಲಿ ಮ್ಯಾಲೆ ಬಣ್ಣ ಬಣ್ಣದ
ಚಿಟ್ಟೆಗಳ ಪರದಾಟ
ಗುಡಿಗೋಪುರದ ಮ್ಯಾಲೆ ರಂಗು ರಂಗಿನ ಹಕ್ಕಿಗಳಾಟ
ರಂಗನತಿಟ್ಟಿಗೋ ಕೂಡ
ರಜಾ ಹಾಕಿ ಹೋಗಿವೆಯಲ್ಲೋ"[೬೦]

ಈ ಗೀತೆಯನ್ನು ಕೇಳುತ್ತಿದ್ದರೆ ಪ್ರತಿಯೊಬ್ಬರಿಗೂ ಬಾಲ್ಯದ ನೆನಪುಗಳು ಮರುಕಳಿಸುತ್ತವೆ. ಕಾಡಿನಲ್ಲಿ ಸ್ವತಂತ್ರವಾಗಿ ಓಡಾಡುತ್ತ, ಹಾರಾಡುತ್ತ, ನಲಿಯುತ್ತಿದ್ದ ಪ್ರಾಣಿಪಕ್ಷಿಗಳನ್ನು ಇಂದು ಬಂಧನದಲ್ಲಿಟ್ಟು ನೋಡಿ ಸಂತೋಷ ಪಡುತ್ತಿದ್ದೇವೆ. ಪ್ರಾಣಿಪಕ್ಷಿಗಳ ಸಂತೋಷಕ್ಕಿಂತ ಮನುಷ್ಯರ ಸ್ವಾರ್ಥ ಮತ್ತು ಸಂತೋಷ ಬಹಳ ಮುಖ್ಯವಾಗಿದೆ. ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಪ್ರಾಣಿಪಕ್ಷಿಗಳ ಸಂತೋಷವನ್ನು ಬಲಿ ಕೊಡುತ್ತಿದ್ದಾನೆ.

ಆಧುನೀಕರಣ, ಜಾಗತೀಕರಣ ಮನುಷ್ಯರ ಬದುಕಿನಲ್ಲಿ ಹೇಗೆ ನಿಧಾನವಾಗಿ ಪ್ರವೇಶ ಮಾಡಿದೆ ಎಂದು ಕವಿ ಹೇಳುತ್ತಿದ್ದಾರೆ. ಕಾಡುನಾಶ ಮಾಡಿ, ಪರಿಸರವನ್ನು ಮಾಲಿನ್ಯ ಮಾಡಿ ಮನುಷ್ಯರ ಮತ್ತು ಪ್ರಾಣಿಪಕ್ಷಿಗಳ ಸಂತೋಷ ಮತ್ತು ಸ್ವಾತಂತ್ರ್ಯವನ್ನು ಕಸಿದುಕೊಂಡಿದೆ.

'ಎಲ್ಲಿ ಹೋದವೋ ಕಣ್ಣಿಗೆ ಕಾಣದಾದವು' ಎನ್ನುವ ಸಾಲು ಪ್ರಾಕೃತಿಕ ಸ್ಥಿತ್ಯಂತರವನ್ನು ಸೂಚಿಸುತ್ತದೆ. ಇಲ್ಲಿ ಗಿಡ-ಮರಬಳ್ಳಿ, ಕೆರೆಕೋಳಿ, ಜಿಂಕೆ, ಮೊಲ, ಗುಬ್ಬಚ್ಚಿಗಳು ಅಷ್ಟೆ ಅಲ್ಲ; ಪರಿಸರ, ಆರೋಗ್ಯ ಇವೆಲ್ಲವೂ ಮಾಯವಾಗಿವೆ.

ಆಧುನೀಕರಣ ಮತ್ತು ಜಾಗತೀಕರಣ ಪ್ರವೇಶ ಮಾಡಿದ ಮೇಲೆ ನಾವು ಏನನ್ನೆಲ್ಲ ಕಳೆದುಕೊಂಡಿದ್ದೇವೆ ಎಂದು ಹೇಳುವುದರ ಜೊತೆಗೆ ಈ ಆಧುನೀಕರಣ ಹಾಗೂ ಜಾಗತೀಕರಣವನ್ನು ವ್ಯಂಗ್ಯವಾಗಿ ಕವಿ ಟೀಕಿಸುತ್ತಿದ್ದಾರೆ.

"ಆಂಧ್ರದ ಸೆರಗಿನ ಕರ್ನಾಟಕದ ಹಳ್ಳಿಯೊಂದರಲ್ಲಿ ರಾತ್ರಿ ತಂಗಿದ್ದೆ. ಅದು ಡಿಸೆಂಬರ್ ತಿಂಗಳು. ಚಳಿ ಮೈ ಕೊರೆಯುತ್ತಿತ್ತು. ಹರಕುಸೋಗೆ ಗುಡಿಸಲುಗಳು, ಚಿಂದಿ ಬೊಂತೆಗಳು ಚಳಿಯನ್ನು ಹಿಮ್ಮೆಟ್ಟಿಸಲಾಗದೆ ನಡುಗುತ್ತಿದ್ದವು. ಇಂಥ ರಾತ್ರಿಯಲ್ಲಿ ಹಗಲೆಲ್ಲಾ ಎಲ್ಲೆಲ್ಲೋ ಕೂಲಿಗೆ ಹೋಗಿ ದುಡಿದು ಬಂದಿದ್ದ ಜನ ಒಂದೆಡೆ ಕಲೆತು ರಾತ್ರಿ ಬಹಳ ಹೊತ್ತಿನ ತನಕ ತೆಲುಗಿನ ಹೋರಾಟದ ಹಾಡುಗಳನ್ನು ಹಾಡುತ್ತಿದ್ದರು. ಹಸಿವು, ದಾರಿದ್ರ್ಯ ಅವರ ಬದುಕಿನ ಎಲ್ಲವನ್ನೂ ದೋಚಿ, ರಕ್ತ ಮಾಂಸವನ್ನು ಹೀರಿ ಹಿಪ್ಪೆ ಮಾಡಿದ್ದರೂ ಈ ಹಾಡುಗಳು ಅವರಲ್ಲೇನೋ ಒಂದು ಹೊಸ ಸಂಚಲನೆಯನ್ನು ಉಂಟುಮಾಡುತ್ತಿದ್ದವು. ಹಾಡು ಹಾಡುವಾಗಿನ ಅವರ ತನ್ಮಯತೆ, ಆತ್ಮವಿಶ್ವಾಸ, ಆಸೆಯ ಚಿಗುರು ನನ್ನನ್ನು ಕದಲಿಸಿದವು. ಇಂಥ ಜನರ ಕಂಗೆಟ್ಟ ಬದುಕಿನಲ್ಲೂ ಚೂರೇ ಚೂರು ಬದುಕುವ ಆಸೆ ಮೂಡಿಸಬಹುದಾದ ಕಾವ್ಯ, ಕಲೆಯ ಶಕ್ತಿ ನನ್ನನ್ನು ಸೆಳೆಯಿತು."[೬೧] ಇಂಥ ಅದಮ್ಯ ಜೀವನಪ್ರೀತಿ ಕನ್ನಡದ ಹೋರಾಟದ ಹಾಡುಗಳಲ್ಲೂ ವ್ಯಕ್ತವಾಗಿದೆ.

ಕೋಟಿಗಾನಹಳ್ಳಿ ರಾಮಯ್ಯ ಅವರ 'ಹೆಜ್ಜೆ ಮಾತಾಡು', ಆರ್. ಮಾನಸಯ್ಯ ಅವರ 'ರಕ್ತದ ರಂಗೋಲಿ', ಹಿ.ಶಿ. ರಾಮಚಂದ್ರೇಗೌಡ ಅವರ 'ರೈತ ಹೋರಾಟದ ಹಾಡುಗಳು' ಮತ್ತು 'ರೈತ ಹೋರಾಟ ಸಾಹಿತ್ಯ', ಸಿ. ದಾನಪ್ಪ ನಿಡೋಗಲ್ ಅವರ 'ಜೋಡು ಗುಂಡಿಗೆ' ಹಾಗೂ ಬೇರೆ ಬೇರೆ ಪ್ರಕಾಶಕರು ಹೊರತಂದ 'ಪ್ರತಿರೋಧದ ಹಾಡುಗಳು'; ಹೋರಾಟದ ಹಾಡುಗಳು ಬಹುಮುಖ್ಯವಾಗಿ ಕಂಡುಬರುವ ಕೃತಿಗಳು. ಇವುಗಳಲ್ಲಿ ತೆಲುಗಿನಿಂದ ಅನುವಾದಗೊಂಡ ಹಾಡುಗಳು, ಅಜ್ಞಾತ ತತ್ವಪದಕಾರರು ಹಾಡಿದ ಹಾಡುಗಳು ಹಾಗೂ ಕುವೆಂಪು, ಚಂದ್ರಶೇಖರ ಕಂಬಾರ, ಜಂಬಣ್ಣ ಅಮರಚಿಂತ, ಸಿದ್ಧಲಿಂಗಯ್ಯ, ಕೆ.ಬಿ. ಸಿದ್ಧಯ್ಯ, ದೇವನೂರ ಮಹಾದೇವ, ಚೆನ್ನಣ್ಣ ವಾಲೀಕಾರ ಇನ್ನೂ ಮುಂತಾದವರು ಬರೆದ ಹಾಡುಗಳು ಇವೆ.

### ಕೊನೆ ಟಿಪ್ಪಣಿಗಳು

೧. ದಸ್ತಗೀರ್‌ಸಾಬ್ ದಿನ್ನಿ, **ಬಿಸಿಲು ಚೆಲ್ಲಿದ ನೆರಳು,** ಪುಟ ೬.

೨. ಸಿ.ಪಿ. ಸಿದ್ಧಾಶ್ರಮ, **ನೂರೊಂದು ಆಧುನಿಕ ವಚನಗಳು,** ಪುಟ ೫.

೩. ಅದೇ, ಪುಟ ೧.

೪. ಜಯಶ್ರೀ ದಂಡೆ, **ಆಧುನಿಕ ವಚನಗಳು,** ಪುಟ ೧೩.

೫. ಯಲ್ಲಪ್ಪ ಕೆ.ಕೆ. ಪುರ, **ಊರು ಕೇರಿಯ ವಚನಗಳು,** ಸಾಪ್ತಾಹಿಕ ಪುರವಣಿ, ೧೫ ಮೇ, ೨೦೧೬.

೬. ಅದೇ.

೭. ಸಿ.ಪಿ. ಸಿದ್ಧಾಶ್ರಮ, **ನೂರೊಂದು ಆಧುನಿಕ ವಚನಗಳು,** ಪುಟ ೬೯

೮. ಎಸ್.ಜಿ. ಸಿದ್ಧರಾಮಯ್ಯ, **ವಚನ, ಸಾಪ್ತಾಹಿಕ ಪುರವಣಿ,** ೨೩ ಅಕ್ಟೋಬರ್ ೨೦೧೧.

೯. ಅದೇ.

೧೦. ಎಸ್.ಜಿ. ಸಿದ್ಧರಾಮಯ್ಯ, **ಅರಿವು ನಾಚಿತ್ತು,** ಪುಟ ೨೮.

೧೧. ಚಂದ್ರಶೇಖರ ಕಂಬಾರ, **ಬತ್ತಲೆಯ ಮಾದರಿ,** ಸಾಪ್ತಾಹಿಕ ಪುರವಣಿ, ೨೦ ಸೆಪ್ಟೆಂಬರ್ ೨೦೧೨.

೧೨. ಚಂದ್ರಶೇಖರ ಕಂಬಾರ, **ನಿಶ್ಶಬ್ಧ,** ಸಾಪ್ತಾಹಿಕ ಪುರವಣಿ, ೨೦ ಸೆಪ್ಟೆಂಬರ್ ೨೦೧೨.

೧೩. ಎಸ್.ಜಿ. ಸಿದ್ಧರಾಮಯ್ಯ, **ಅರಿವು ನಾಚಿತ್ತು,** ಪುಟ ೪೭.

೧೪. ಸರಸ್ವತಿ ಚಿಮ್ಮಲಗಿ, **ಆಧುನಿಕ ವಚನಗಳು,** ಪುಟ ೨೪.

೧೫. ಅಬ್ದುಲ್ ಬಷೀರ್, **ಆಧುನಿಕ ವಚನಗಳು,** ಪುಟ ೩೬.

೧೬. ಅದೇ, ಪುಟ ೨೬.

೧೭. ಚಿದಾನಂದ ಸಾಲಿ, **ಕನ್ನಡ ಗಜಲ್,** ಪುಟ ೧೨.

೧೮. ಜಂಬಣ್ಣ ಅಮರಚಿಂತ, **ಹರಿಯುವ ನದಿಗೆ ಮೈಯೆಲ್ಲ ಕಾಲು,** ಪುಟ ೫೩.

೧೯. ಅದೇ, ಪುಟ ೫೨.

೨೦. ಅದೇ, ಪುಟ ೫೧.

೨೧. ಅದೇ, ಪುಟ ೬೨.

೨೨. ಶಾಂತರಸ, **ಗಜಲ್ ಮತ್ತು ಬಿಡಿ ದ್ವಿಪದಿ,** ಪುಟ ೫.

೨೩. ಅದೇ, ಪುಟ ೯.

೨೪. ಅದೇ, ಪುಟ ೧೫.

೨೫. ಅದೇ, ಪುಟ ೩೭.

೨೬. ಅದೇ, ಪುಟ ೧೭.

೨೭. ಅದೇ, ಪುಟ ೬೩.

೨೮. ಸಿದ್ಧರಾಮ ಹಿರೇಮಠ, **೩೫ ಗಜಲ್‌ಗಳು ೪೫ ಹೈಕುಗಳು,** ಪುಟ ೧೦.

೨೯. ಅದೇ, ಪುಟ ೨೬.

೩೦. ಕೆ.ಬಿ. ಸಿದ್ಧಯ್ಯ, **ಹೋರಾಟದ ಹಾಡುಗಳು,** ಪುಟ ೧೮

೩೧. ಕೋಟಿಗಾನಹಳ್ಳಿ ರಾಮಯ್ಯ, **ನಾನು ಕವಿಯಲ್ಲ: ಹಾಡುಗಾರ,** ಸಾಪ್ತಾಹಿಕ ಪುರವಣಿ, ೨೪ ಏಪ್ರಿಲ್ ೨೦೧೧.

೩೨. ಅಪ್ಪಗೆರೆ ಸೋಮಶೇಖರ್, **ಅಗ್ನಿ,** ೨೦ ಜೂನ್ ೨೦೧೬.

೩೩. ಕೋಟಗಾನಹಳ್ಳಿ ರಾಮಯ್ಯ, **ಹೆಜ್ಜೆ ಮಾತಾಡು,** ಪುಟ ೨೩.

೩೪. ಬಿ.ಎಂ. ಪುಟ್ಟಯ್ಯ, **ದಲಿತ ಸಾಹಿತ್ಯಕ್ಕೆ ಮೀಮಾಂಸೆ ಎಂಬುದು ಬೇಕೆ?,** ಕನ್ನಡ ಅಧ್ಯಯನ ಸಂಪುಟ-೧೨, ಸಂಚಿಕೆ-೨, ಪುಟ ೧೫೨.

೩೫. ಬಿ.ಎಂ. ಪುಟ್ಟಯ್ಯ, **ಮುಖಾಮುಖಿ,** ಪುಟ ೩೦.

೩೬. ಆರ್. ಮಾನಸಯ್ಯ, **ರಕ್ತದ ರಂಗೋಲಿ,** ಪುಟ ೧೫.

೩೭. ಸತೀಶ ಕುಲಕರ್ಣಿ, **ಪ್ರತಿರೋಧದ ಹಾಡುಗಳು,** ಪುಟ ೧೨೪.

೩೮. ಎನ್.ಕೆ. ಹನುಮಂತಯ್ಯ, **ದಲಿತ ಅಧ್ಯಯನ,** ಪುಟ ೪೫.

೩೯. **ಹೋರಾಟದ ಹಾಡುಗಳು,** ಪುಟ ೨೯.

೪೦. ಕೋಟಿಗಾನಹಳ್ಳಿ ರಾಮಯ್ಯ, **ಹೆಜ್ಜೆ ಮಾತಾಡು,** ಪುಟ ೭೯.

೪೧. ಅದೇ, ಪುಟ ೭೯.

೪೨. ಅದೇ, ಪುಟ ೮೦.

೪೩. ಎನ್.ಕೆ. ಹನುಮಂತಯ್ಯ, **ಮಾಂಸದಂಗಡಿಯ ನವಿಲು,** ಪುಟ ೧೧೮-೧೧೯.

೪೪. ಅನುಸೂಯ ಕಾಂಬಳೆ, **ಮುಳ್ಳು ಕಂಟಿಯ ನಡುವೆ,** ಪುಟ ೭.

೪೫. ಆರ್. ಮಾನಸಯ್ಯ, **ಹೋರಾಟದ ಹಾಡುಗಳು,** ಪುಟ ೫೮.

೪೬. **ಪ್ರತಿರೋಧದ ಹಾಡುಗಳು,** ಪುಟ ೩೫.

೪೭. ಹಿ.ಶಿ. ರಾಮಚಂದ್ರೇಗೌಡ, **ರೈತ ಹೋರಾಟ ಸಾಹಿತ್ಯ,** ಪುಟ ೩.

೪೮. ಅದೇ, ಪುಟ ೧೫.

೪೯. ಅದೇ, ಪುಟ ೨೨.

೫೦. ಆರ್. ಮಾನಸಯ್ಯ, **ಪ್ರತಿರೋಧದ ಹಾಡುಗಳು,** ಪುಟ ೧೦೮.

೫೧. ಅದೇ, ಪುಟ ೧೦೮-೧೦೯.

೫೨. ಕೃಷ್ಣಮೂರ್ತಿ ಬಿಳಿಗೆರೆ, **ಬಿಳಿಗೆರೆಯ ಹಾಡುಗಳು,** ಪುಟ ೧೯.

೫೩. ಅದೇ, ಪುಟ ೨೦.

೫೪. ಸಿ. ದಾನಪ್ಪ ನಿಲೋಗಲ್, **ಜೋಡುಗುಂಡಿಗೆ,** ಪುಟ ೨೬.

೫೫. ವಿನಯಾ, **ನೂರು ಗೋರಿಯ ದೀಪ,** ಪುಟ ೧.

೫೬. ಅದೇ, ಪುಟ ೧.

೫೭. ರಾಮಪ್ಪ ಮಾದರ, **ಕೆರೆಹೊತ್ತ ಬಸವ,** ಪುಟ ೧೫.

೫೮. ಆರ್. ಮಾನಸಯ್ಯ, **ರಕ್ತದ ರಂಗೋಲಿ,** ಪುಟ ೨೪.

೫೯. **ಹೋರಾಟದ ಹಾಡುಗಳು,** ಪುಟ ೨೦.

೬೦. ಗೊಲ್ಲಹಳ್ಳಿ ಶಿವಪ್ರಸಾದ್, **ಪ್ರತಿರೋಧದ ಹಾಡುಗಳು,** ಪುಟ ೪೫.

೬೧. ಕೋಟಿಗಾನಹಳ್ಳಿ ರಾಮಯ್ಯ, **ಕಟಕಟೆ ಹತ್ತಲು ಬಿಡಿ,** ಮುನ್ನುಡಿ.



ಅಧ್ಯಾಯ : ಆರು

# ಸಮಕಾಲೀನ ಕನ್ನಡ ಕಾವ್ಯ ಮತ್ತು ಅಸ್ಮಿತೆಯ ಹುಡುಕಾಟ

ಅಧ್ಯಾಯ : ಆರು

# ಸಮಕಾಲೀನ ಕನ್ನಡ ಕಾವ್ಯ ಮತ್ತು ಅಸ್ಮಿತೆಯ ಹುಡುಕಾಟ

ಪಾರಂಪರಿಕ ಲಯದ ಪರಿಭಾಷೆಯನ್ನು ಬದಿಗೆ ತಳ್ಳಿದ ದಲಿತ ಕಾವ್ಯ ಓವನಿಗೆ, ಒನಕೆವಾಡು, ಜಾನಪದದ ಮಟ್ಟುಗಳನ್ನು ಬಳಸಿಕೊಂಡಿದೆ. ಹಾಗೆಯೇ ಆಡುಮಾತಿನ ಲಯ, ಜನಪದ ಮಹಾಕಾವ್ಯಗಳ ನಿರೂಪಣಾಕ್ರಮ, ಜನಪದ ಗೀತೆಗಳ ಹಾಡಿನ ಲಯ ಮುಂತಾದ ಅಭಿವ್ಯಕ್ತಿಕ್ರಮಗಳು ಇಲ್ಲಿ ಬಳಕೆಯಾಗಿವೆ. ದಲಿತ ಕಾವ್ಯದ ಈ ವಾಚನ ಮತ್ತು ವಾಚ್ಯ ಗುಣಗಳೇ ಕಾವ್ಯವನ್ನು ಜನತೆಯ ಹತ್ತಿರ ಕೊಂಡೊಯ್ಯಲು ಸಾಧ್ಯವಾಯಿತು. ಇದರೊಳಗಿನ ಜಾನಪದ ಮಟ್ಟುಗಳು ಜನತೆಯ ಬಾಯಲ್ಲಿ ಬಹುಬೇಗ ಕಾವ್ಯ ನೆಲೆಗೊಳ್ಳುವಂತೆ ಮಾಡಿದವು.

ಅಂದರೆ ೭೦ರ ದಶಕದಲ್ಲಿ ಸಿದ್ಧಲಿಂಗಯ್ಯ ಅವರು ಬರೆಯುತ್ತಿದ್ದ ಆಕ್ರೋಶದ ಮಾದರಿಗಿಂತ ಭಿನ್ನವಾದ ಕಾವ್ಯರಚನಾ ಮಾದರಿಯನ್ನು ೮೦ರ ದಶಕದ ನಂತರದ ಕಾವ್ಯಪ್ರಯೋಗದಲ್ಲಿ ಮೇಲೆ ಹೇಳಿರುವ ಭಿನ್ನತೆಗಳನ್ನು ಕಾಣಬಹುದು.

“ದೇಸಿ ಮೂಲ, ನೆಲದ ಸತ್ವ, ಪರಂಪರೆಯ ವಾರಸುದಾರಿಕೆ ಜನಪದ ಬದುಕಿನ ಜೀವನಪ್ರೀತಿ ಮುಂತಾದ ವಸ್ತುಗಳ ಮುಖಾಂತರ ತಮ್ಮ ಹಂಬಲಗಳನ್ನು, ತುಡಿತಗಳನ್ನು ವ್ಯಕ್ತಪಡಿಸುವ ಕವಿಗಳ ಪಡೆಯೊಂದು ಈಗ ಕನ್ನಡದಲ್ಲಿ ತಕ್ಕಮಟ್ಟಿಗೆ ಸನ್ನದ್ಧಗೊಂಡಿದೆ”[೧] ಎನ್ನುವ ಬಂಜಗೆರೆ ಜಯಪ್ರಕಾಶ ಅವರ ಮಾತುಗಳು ಇಲ್ಲಿ ಗಮನೀಯ.

ಕೆ.ಬಿ. ಸಿದ್ಧಯ್ಯ, ವಡ್ಡಗೆರೆ ನಾಗರಾಜಯ್ಯ, ಎನ್.ಕೆ. ಹನುಮಂತಯ್ಯ, ಮೂಡ್ನಾಕೂಡು ಚಿನ್ನಸ್ವಾಮಿ, ಸತ್ಯಾನಂದ ಪಾತ್ರೋಟ, ಸುಬ್ಬು ಹೊಲೆಯಾರ್, ಆನಂದ ಲಕ್ಕೂರು, ಮಹಾದೇವ ಶಂಕನಪುರ, ಅನುಸೂಯ ಕಾಂಬಳೆ, ಮೊಗಳ್ಳಿ ಗಣೇಶ್, ಎ.ಕೆ. ಹಂಪಣ್ಣ, ರವಿಕುಮಾರ್ ನೀಹ, ರಾಮಪ್ಪ ಮಾದರ್, ರಮೇಶ್ ಆರೋಲಿ, ಬಸವರಾಜ ಹೃತ್ಸಾಕ್ಷಿ, ಗಂಗಪ್ಪ ತಳವಾರ, ಶಿವಕುಮಾರ್ ಕಂಪ್ಲಿ ಮುಂತಾದವರು ವಾಚ್ಯತನದಿಂದ ಕಳಚಿಕೊಂಡು ಕಾವ್ಯದ ನಡಿಗೆಗೆ ಹೊಸ ಶಕ್ತಿಯನ್ನು ತುಂಬುತ್ತಿರುವ ಕವಿಗಳಲ್ಲಿ ಪ್ರಮುಖರು. ಇವರ ಬರಹಗಳಲ್ಲಿ ದಲಿತ ಸಾಹಿತ್ಯದ ವಿಸ್ತರಣೆಯ ವಿವಿಧ ಆಯಾಮಗಳನ್ನು ಕಾಣಬಹುದು. ಜೊತೆಗೆ ಆಕ್ರೋಶಕ್ಕಿಂತ

ಹೆಚ್ಚಾಗಿ ವಿಷಾದದ ನೆಲೆಯಲ್ಲಿ ಆದಿಮ ಸಂಸ್ಕೃತಿಯನ್ನು ಹುಡುಕಾಟ ಮಾಡುವ ಬಗೆ ಇವರ ಕಾವ್ಯದಲ್ಲಿದೆ.

ಕುಲಪುರಾಣಗಳು ಕನ್ನಡ ಕಾವ್ಯಪರಂಪರೆಯ ಪುನರ್‌ಸೃಷ್ಟಿಗಳೆಂಬಂತೆ ಆಧುನಿಕ ಕನ್ನಡ ಕಾವ್ಯಸಂದರ್ಭದಲ್ಲಿ ರಚನೆಗೊಳ್ಳುತ್ತಿವೆ. ಮೌಖಿಕ ಪರಂಪರೆಯ ಮಂಟೇಸ್ವಾಮಿ ಮಲೆಮಾದಪ್ಪ, ಜಾಂಬವ ಮುನಿ, ಮಾತಂಗ ಮುನಿ, ತತ್ವಪದಕಾರರು ಹಾಗೂ ಬುದ್ಧ, ಅಲ್ಲಮ, ಬಸವಣ್ಣನವರ ಸಮಾಜೋ–ಅಧ್ಯಾತ್ಮ ಪ್ರಯಾಣದ ನಡೆಗಳು ಹಾಗೂ ಅಂಬೇಡ್ಕರ್, ಗಾಂಧೀಜಿಯವರ ಸಾಮಾಜಿಕ ಹೋರಾಟದ ನಡೆಗಳು ಮತ್ತು ಇಂಥವರ ತತ್ವಸಿದ್ಧಾಂತಗಳು ಸ್ಮೃತಿರೂಪದ ಕುಲಪುರಾಣಗಳಿಗೆ ಸ್ಫೂರ್ತಿಯಾಗಿವೆ ಮತ್ತು ಪ್ರಭಾವಿಸಿವೆ.

ಹೀಗೆ ನೋಡುವಾಗ ಕೆ.ಎನ್. ಶಿವತೀರ್ಥನ್ ಅವರ 'ಗೆಂಡಗಯ್ಯ', ಕೆ.ಬಿ. ಸಿದ್ಧಯ್ಯ ಅವರ 'ಬಕಾಲ', 'ದಕ್ಲಕಥಾದೇವಿ ಕಾವ್ಯ', 'ಅನಾತ್ಮ' ಹಾಗೂ 'ಗಲ್ಲೆಬಾನಿ'; ವಡ್ಡಗೆರೆ ನಾಗರಾಜಯ್ಯ ಅವರ 'ಆಸಾದಿ', 'ಗೋಸಂಗಿ' ಕವಿತೆಗಳು; ರವಿಕುಮಾರ್ ನೀಹ ಅವರ 'ಜಲಜಂಬೂಕನ್ನೆ' ಮುಂತಾದ ಕೃತಿಗಳನ್ನು ನೋಡಬಹುದು.

೨೦೦೦ರಲ್ಲಿ ಪ್ರಕಟವಾದ ವಡ್ಡಗೆರೆ ನಾಗರಾಜಯ್ಯ ಅವರ ಆಸಾದಿ ಖಂಡಕಾವ್ಯಕ್ಕೆ ಮುನ್ನುಡಿ ಬರೆಯುತ್ತ ಕಿ.ರಂ. ನಾಗರಾಜ ಅವರು "ದಲಿತ ಪುರಾಣಗಳು ಹೊಸ ಸಂವೇದನೆಯಲ್ಲಿ ಜಾಗೃತಗೊಂಡು ಇಂದಿನ ಸಾಂಸ್ಕೃತಿಕ ಪ್ರಶ್ನೆಗಳ ಮೂಲಚೂಲಗಳನ್ನು ಶೋಧಿಸಲು ಸಜ್ಜಾಗುತ್ತಿರುವುದು ಸಮಕಾಲೀನ ಕನ್ನಡ ಕಾವ್ಯದ ಹೊಸ ಆಶಯಗಳಿಗೆ ದಿಕ್ಸೂಚಿಯಾಗಿದೆ"[೨] ಎಂದಿರುವ ಮಾತುಗಳು ಸ್ವತಃ ಕುಲಪುರಾಣಗಳಿಗೆ ಅನ್ವಯಿಸಿಕೊಳ್ಳಬಹುದಾದ ಮಾತುಗಳು. ಅಷ್ಟೇ ಅಲ್ಲ, ಈ ಹೊಸ ಕಾವ್ಯ ಮಾರ್ಗದ ಚಲನೆಯನ್ನು ಸೂಚಿಸುವ ಈ ಮಾತುಗಳು ಸಮಕಾಲೀನ ಕಾವ್ಯದ ಓದಿಗೆ ಪ್ರವೇಶಿಕೆಯಂತಿವೆ.

ಜನಪದ ಸಾಹಿತ್ಯದಲ್ಲಿ ಪ್ರಸಿದ್ಧಿ ಪಡೆದಿರುವ ಶ್ರೀ ಬಾಲಗೌರಿ(ಮಾರಮ್ಮನ ಕಥಾಕಾವ್ಯದ ಹಂದರದಲ್ಲಿ ಪುನಃ ಸೃಷ್ಟಿಗೊಂಡು ಹೊಸ ಮೈ ಪಡೆದಿರುವ ವಿನೂತನ ಖಂಡಕಾವ್ಯ. ಬ್ರಾಹ್ಮಣ ಕನ್ಯೆ ಶ್ರೀ ಬಾಲಗೌರಿಯು ಮಾದಿಗ ಗಂಡನಿಂದ ಐದು ಜನ ಗಂಡುಮಕ್ಕಳ ಪುತ್ರ ಫಲವನ್ನು ಪಡೆದ ವರ್ಣಸಂಕರದ ಸುದ್ದಿ ಕಾಲಾನಂತರದಲ್ಲಿ ತಿಳಿದು ಕೆಂಡಾಮಂಡಲಳಾಗಿ ಉಪಾಯವಿಲ್ಲದೆ ತನ್ನ ಗಂಡನಿಗೂ ಮಕ್ಕಳಿಗೂ ಶಾಪವಿಕ್ಕುತ್ತಾಳೆ. ಮುಂದೆ ಅವಳು ಮಾರಿದೇವತೆಯಾಗಿ ಅವತರಿಸಿದಾಗ ತನ್ನ ಗಂಡನು ಪಟ್ಟದ ಕೋಣನಾಗಿ ತನಗೆ ಬಲಿಯಾಗುವಂತೆಯೂ, ಮೊದಲ ನಾಲ್ಕು ಜನ ಗಂಡುಮಕ್ಕಳು ವಲಮರಿ, ಧೂಳೀಮರಿ, ದ್ರಿಷ್ಟೀಮರಿ ಮತ್ತು ಬಾನದ ಮರಿ ಕೋಣಗಳಾಗಿ ಕಡಿಸಿಕೊಳ್ಳುವಂತೆಯೂ ಶಾಪ ಕೊಟ್ಟ ಬಳಿಕ ಐದನೇ ಕಿರಿ ಮಗನು 'ತನಗೇನು ಶಾಪ?'ವೆಂದು ಕೇಳಲಾಗಿ ಕಿರಿ ಮಗನ ಮೇಲೆ ಕೊಂಚ ಕರುಣೆ ತೋರಿ "ನೀನು ಆಸೆ ಆದಿ. ಆಸೆ ಆದ ಮಗ ನನಗೆ ಆಸೆಯಾದೋನು,

ಆದ್ದರಿಂದ ನೀನು ಆಸೆ ಆದ ಮಗನಾಗಿ ಲೋಕದ ಮೇಲೆ ನನ್ನ ಕತೆ ಹೇಳುತ್ತಾ ತಿರಿದುಂಡು ಬದುಕು"[೩] ಎಂದು ಹೇಳಿದ ಬಳಿಕ ಈ ಆಸಾದಿಯು ಊರೂರು ಅಲೆಯುತ್ತಾ, ತನ್ನ ಹೆತ್ತಪ್ಪ ಮತ್ತು ತನ್ನ ಅಣ್ಣಂದಿರನ್ನು ನುಂಗಿ ನೀರು ಕುಡಿದುಕೊಂಡ ತಾಯಿ ಶ್ರೀ ಬಾಲಗೌರಿ(ಮಾರಿ)ಯ ಕತೆಯನ್ನು ಹಾಡಿ(ಉಗುಳುತ್ತಾ) ತಿಂದುಂಡು ಬದುಕುವುದನ್ನೇ ಹಾಸಿ ಹೊದ್ದುಕೊಂಡಿರುವ ಅವನ ಪಾಡನ್ನು ಈ ಕಾವ್ಯ ಪುನರ್‌ಸೃಷ್ಟಿಸುತ್ತಿದೆ.

ಅಭೌತಿಕವಾದ ಸಾಂಪ್ರದಾಯಿಕ ನೆಲೆಯ ಸೃಷ್ಟಿ ಕಲ್ಪನೆಯನ್ನು ಮತ್ತು ಜೀವವಿರೋಧಿ ತತ್ವಗಳನ್ನು ಅಸ್ಪೃಶ್ಯರ ಭೌತವಾದಿ ಮಾತೃತ್ವಗಳೊಂದಿಗೆ ತೂಗಿ ನೋಡುವ ಈ ಕಾವ್ಯ ಸಾಹಿತ್ಯ ಮೀಮಾಂಸೆಯ ಸಿದ್ಧ ಮಾದರಿಗಳನ್ನು ಮೀರಿ ತನ್ನ ಅರ್ಥಸಾಧ್ಯತೆಗಳನ್ನು ವಿಸ್ತರಿಸಿಕೊಂಡಿದೆ.

"ಆ ನಿನ್ನ ಆನಂದದಘೀಮಿನ ಕಣಜದ
ಮಠದ ಮೇಲೆ ಕೂಗುವ ಸೀಳುನಾಯಿಗಳು
ಗುಡೀ ಕಲ್ಲಿಗೊರಗಿದ ಕಜ್ಜಿ ನಾಯಿಗಳು
ತುರಿಕಜ್ಜಿ ಅಂಟಿಸಿಕೊಂಡು
ಗುರುತಿಗೆ ದಾರ ಬಿಗಿದ ತೀಟೆ ನಾಯಿಗಳು
ಆಸಾದಿಯ ಅನ್ನದ ಬೆವರಿನ
ಅಗೇವನ್ನು ಬರಿದು ಮಾಡಿ ಬಸಿಯುವ
ಒಂಟಿ ನಾಮದ ಮೂಗಿಲಿಗಳು
ಮೂರು ನಾಮದ ಸೊಂಡಿಲಿಗಳು
ಅಡ್ಡ ನಾಮದ ಕೊಕ್ಕಿಲಿಗಳು
ಉದ್ದನಾಮದ ಬೆಳ್ಳಿಲಿಗಳು
ನಾಮವಿಲ್ಲದೆ ನಾಮರಿದ ಚಿಟ್ಟಿಲಿಗಳು
ದಿಕ್ಕು ದಿಕ್ಕಿಗೂ ಹಂಚಿಕೊಂಡು ಹೀರಿ
ಓಪ್ಪೆ ಮಾಡಿದವಲ್ಲೇ...!"[೪]

ದಲಿತ ಕಾವ್ಯಕ್ಕೆ ಅದರದೇ ಆದ ದೇಸಿಯತೆ ಇದೆ. ದಲಿತ ಕಾವ್ಯ ಹೆಸರೇ ಹೇಳುವಂತೆ ನೊಂದವರ ಅಭಿವ್ಯಕ್ತಿಯ ಸಂಕೇತಗಳಲ್ಲಿ ಗ್ರಾಮೀಣ ಬದುಕಿನ ಚಲನವಲನಗಳಿವೆ. ದುಡಿವ ಜನಗಳ ಲಯಗಳಿವೆ.

ದೇಸಿ ಮೂಲ, ನೆಲದ ಸತ್ವ, ಪರಂಪರೆಯ ವಾರಸುದಾರಿಕೆ, ಜನಪದ ಬದುಕಿನ ಜೀವನಪ್ರೀತಿ ಮುಂತಾದ ವಸ್ತುಗಳ ಮುಖಾಂತರ ತಮ್ಮ ಹಂಬಲಗಳನ್ನು, ತುಡಿತಗಳನ್ನು ವ್ಯಕ್ತಪಡಿಸುವ ಕವಿಗಳ ಪಡೆಯೊಂದು ಈಗ ಕನ್ನಡದಲ್ಲಿ ತಕ್ಕಮಟ್ಟಿಗೆ ಸಿದ್ಧಗೊಂಡಿದೆ ಎಂಬ ಬಂಜಗೆರೆ ಜಯಪ್ರಕಾಶ ಅವರ ಮಾತು ಇಲ್ಲಿ ಗಮನೀಯ.

ಇದೇ ನೆಲೆಯಲ್ಲಿ ಗಮನಿಸಬಹುದಾದ ಸಮಕಾಲೀನ ಸಂದರ್ಭದ ಸಂಕಲನಗಳೆಂದರೆ ಕೆ.ಬಿ. ಸಿದ್ಧಯ್ಯ ಕೃತಿಗಳು.

ಆಧುನಿಕ ಕನ್ನಡ ಕಾವ್ಯಪರಂಪರೆಯಲ್ಲಿ ಅಧ್ಯಾತ್ಮವನ್ನು ವಿವಿಧ ನೆಲೆಗಳಲ್ಲಿ ಶೋಧಿಸುತ್ತಿರುವ ಕವಿಗಳಲ್ಲಿ ಕೆ.ಬಿ. ಸಿದ್ಧಯ್ಯ ಪ್ರಮುಖರು. ಬಕಾಲ, ದಕ್ಲಕಥಾದೇವಿ ಕಾವ್ಯ, ಅನಾತ್ಮ ಇವರ ಮೂರು ಖಂಡಕಾವ್ಯಗಳು. ಇವು ಕನ್ನಡ ಕಾವ್ಯ ಮತ್ತು ಕಾವ್ಯಮೀಮಾಂಸೆಯ ಸಿದ್ಧಮಾದರಿಗಳನ್ನು ಮೀರಿ ಬೆಳೆಯುತ್ತಿರುವ ಕಾವ್ಯಕ್ರಮಗಳಾಗಿ ಓದುಗರಿಗೆ ಮತ್ತು ವಿಮರ್ಶಕರಿಗೆ ಗೋಚರವಾಗಿವೆ. ಅವರೇ ಹೇಳುವಂತೆ ಇವರ ಕಾವ್ಯ "ಬೆನ್ನ ಹಿಂದೆ ಅಂಬೇಡ್ಕರ್ ಕೂಗಿದ ಕೂಗು, ಒಂದು ಅಂಗೈಯಲ್ಲಿ ಗಾಂಧೀಜಿ, ಇನ್ನೊಂದು ಅಂಗೈಯಲ್ಲಿ ಬುದ್ಧ, ಎದುರಿಗೆ ಅಲ್ಲಮ ಪ್ರಭು ಈ ನಾಲ್ಕು ಮಹಾಜ್ಯೋತಿಗಳ ನಡುವೆ ಹಣತೆ ಧ್ಯಾನಿಸುತ್ತದೆ."[೫]

ಹೀಗೆ ಸಮಾಜೋ-ಆಧ್ಯಾತ್ಮಿಕ ಪ್ರಜ್ಞೆಯಾಗಿ ಮೂಡಿರುವ ಕೆ.ಬಿ.ಯವರ ಕಾವ್ಯ ಕಾಜಗದ ದೋಣಿ ಈಜುವ ಸೋಜಿಗದ ರೀತಿಯಲ್ಲಿ ಗೋಚರಿಸುವುದನ್ನು ಈ ಕೆಳಗಿನ ಸಾಲುಗಳ ಮೂಲಕ ನೋಡಬಹುದು.

"ಕಾಜಗದ ದೋಣಿ ಈಜುವ ಸೋಜಿಗ
ಕಾಣಿರೋ ಕಾಣಿರೋ
ಕಣ್ಣಿದ್ದವರು ಕಾಣಿರೋ
ಕಣ್ಣಿಲ್ಲದವರು ಕಣ್ಣು ಧರಿಸಿ ಕಾಣಿರೋ
ಕಾಲಿಲ್ಲದ ದೋಣಿ
ತೇಲುತ್ತದೆ
ಕಣ್ಣಿಲ್ಲದ ದೋಣಿ
ನೋಡುತ್ತದೆ
ಕಿವಿ ಇಲ್ಲದ ದೋಣಿ
ಕೇಳುತ್ತದೆ
ಮೂಗಿಲ್ಲದ ದೋಣಿ
ಮೂಸುತ್ತದೆ.
ರೆಕ್ಕೆ ಇಲ್ಲದ ದೋಣಿ
ಹಾರುತ್ತದೆ
ಬಿರುಗಾಳಿಗೆ ತೂರಿ ಹೋಗುತ್ತದೆ.
ಕಿಚ್ಚಿನ ಕಡ್ಡಿ ಗೀರಿ ಹಚ್ಚಿದರೆ
ಸುಟ್ಟು ಹೋಗುತ್ತದೆ
ಬೂದಿಯಾಗುತ್ತದೆ
ಕಾಣಿರೋ ಕಾಣಿರೋ...."[೬]

ಹೀಗೆ ಕನ್ನಡ ಕಾವ್ಯಪರಂಪರೆಯಲ್ಲಿಯೇ ವಿಶಿಷ್ಟ ಪ್ರಯೋಗಗಳಾಗಿ ಕಂಡುಬರುವ ಇಂಥ ಸ್ಮೃತಿರೂಪದ ಪುರಾಣಕಾವ್ಯಗಳು ನಮ್ಮ ಮುಂದೆ ಅವೈದಿಕ ದರ್ಶನವನ್ನು ಮೂಡಿಸುತ್ತಲೇ ವಿಭಿನ್ನವಾದ ಚಿಂತನಾಕ್ರಮವನ್ನು ಮಂಡಿಸುತ್ತವೆ.

"ಈ ದೇಹ, ನನ್ನ ದೇಹ, ಇಡೀ ದೇಹ
ಭವದ ಸಾಲ
ತೀರಿ ಹೋಗಲೆಂದು ಸಾಲ
ಇಡೀ ದೇಹ ಮಾಡಿಬಿಟ್ಟೆ
ಮೂರು ಕಾಸಿಗೆ
ಕೊಲ್ಲುವವರೂ ಕೊಳ್ಳಲಿಲ್ಲ
ಮುಡಿಯುವವರೂ ಮುಟ್ಟಲಿಲ್ಲ
ಇರಲಿಬಿಡು ಈ ದೇಹ
ಹೋಗಲಿ ಬಿಡು ನನ್ನ ದೇಹ
ಎಂದು ಅರಿತು
ಕಟ್ಟ ಕಡೆಗೆ
ಸುಲಿದು ಸುಲಿದು ಸುಲಿದು
ಚರ್ಮ ಸುಲಿದು
ಮೆಟ್ಟು ಹೊಲೆದು
ಮೆಟ್ಟೀ ಮೆಟ್ಟೀ ಮೆಟ್ಟೀ
ಬಿಟ್ಟು ಬಿಟ್ಟೆ
ಮೆಟ್ಟು ಬಿಡುವ ಜಾಗದಲ್ಲಿ"[೭]

ನಾಗತಿಹಳ್ಳಿ ರಮೇಶ್ ಅವರ 'ಸಮುದ್ರ ಮತ್ತು ಮಳೆ' ಸಂಕಲನದ 'ಸಪ್ಪೆ ಅನ್ಬೇಡ ಒಂದ್ಕಲ್ ಉಪ್ಪಾಕನ್ನು' ಎಂಬ ಮೊದಲ ಕವಿತೆಯೆ Possitive Aprochನ್ನು ಹೇಳುವುದರೊಂದಿಗೆ ಮುಖ್ಯವಾಗಿ ಜೀವನ್ಮುಖಿ ಧೋರಣೆಯನ್ನು ಎಲ್ಲರೆದೆಯಲ್ಲಿ ಬಿತ್ತುವ ಮೂಲಕ ಒಂದು ತಾತ್ವಿಕ ಆಲೋಚನೆಯನ್ನು ಓದುಗರ ಎದುರಿಗಿಡುತ್ತಿದೆ. ಇಂತಹ ಜೀವಪರ ಕಾಳಜಿ ಈ ಮಣ್ಣಿನ ಗುಣ ಮತ್ತು ಅವ್ವ ಕಲಿಸಿದ ಮೊದಲ ಪಾಠದ ಕುರುಹು. ಇದನ್ನವಳು ಕಲಿತದ್ದು ಸಹ ಸರ್ಟಿಫಿಕೇಟ್‌ಗಳನ್ನು ಕೊಡುವ ಶಾಲಾ-ಕಾಲೇಜುಗಳಲ್ಲಲ್ಲ ಎಂಬುದು ಮುಖ್ಯವಾದ ವಿಚಾರ.

ಇಲ್ಲಿನ ಅವ್ವ ಬರೀ ಮಕ್ಕಳನ್ನು ಹಡೆಯುವ ತಾಯಿಯಷ್ಟೇ ಅಲ್ಲ; ಅವಳು 'ಭೂಮಿ ತೂಕದ ಹೆಣ್ಣು.' ಮುಂದುವರಿದು ಸಾಲುಮರದ ತಿಮ್ಮಕ್ಕ, ಸೋಬಾನೆ ಚಿಕ್ಕಮ್ಮ, ಜಾನಪದ ಸಿರಿಯಜ್ಜಿಯಂಥವರನ್ನು ನೆನಪಿಸುವ ಕೂಡುಕುಟುಂಬ(ವಿಶ್ವಕುಟುಂಬ)ದ ಸದಸ್ಯೆ. ಈ ಎಲ್ಲವುಗಳ ಜೊತೆಗೆ ಇವಳದು ಯಾತನಾಮಯ ಬದುಕು, ಇವಳು ಪಟ್ಟ ಪರಿಪಾಟಲು ಅಷ್ಟಿಷ್ಟಲ್ಲ.

"ತೂತು ಕಾಸು
ಒಂದು, ಎರಡು, ಮೂರು... ಪೈಸೆಗಳ
ಹೆಚ್ಚೆಂದರೆ ನಾಲ್ಕಾಣೆ ಎಂಟಾಣೆ ಕಾಲದೊಳಗೆ
ಬಾಳುತ್ತಿದ್ದಳು.

ರೂಪಾಯಿ ಕಾಣುವ ಮುನ್ನ ನನ್ನಜ್ಜ ಸತ್ತಿದ್ದ
ನನ್ನವ್ವ ಊರೂರು ಅಲೆಯುತ್ತಾ ಮಣ್ಣಿನ
ಪದವನ್ನಾಡುತ್ತಿದ್ದಳು
ನಾಣ್ಯದ ಹೊಸ ಕಾಲದೊಳಗೆ
ನನ್ನಜ್ಜಿ ಕಣ್ಮರೆಯಾದಳು ಕಳೆದುಹೋದ ಹಳೆಯ
ಕಾಸುಗಳಂತೆ"[೮]

ಇಲ್ಲಿನ ಕವಿತೆಗಳಿಗೆ ಓದಿಸಿಕೊಳ್ಳುವ ಗುಣವಿದೆ ಹಾಗೂ ವಿಶ್ವಾತ್ಮಕ ದೃಷ್ಟಿಕೋನವನ್ನು ಒಡಲಲ್ಲಿರಿಸಿಕೊಂಡಂತೆ ರಚಿತವಾಗಿವೆ. ಸಣ್ಣ ಸಣ್ಣ ಬಿಡಿ ಕವಿತೆಗಳೂ ಕೂಡ ಗಾದೆ, ಸುಭಾಷಿತ, ನಾಣ್ಣುಡಿಗಳಂತೆ ದಾರ್ಶನಿಕ ಒಳನೋಟಗಳನ್ನು ಕೊಡುತ್ತವೆ.

ಆಧುನಿಕತೆ ಮತ್ತು ಪರಂಪರೆ ಇಲ್ಲಿ ನೇರವಾಗಿ ಸಂಘರ್ಷಕ್ಕಿಳಿದಂತೆ ಕಂಡುಬರುತ್ತದೆ. ಹಳ್ಳಿಯ ಬದುಕಿನ ಸಹಜವಾದಿ ಮುಗ್ಧತೆಯನ್ನು ತನ್ನ ತಾಯಿ, ಅಜ್ಜಿಯರಲ್ಲಿ ಕಾಣುವ ಕವಿ ಅದೇ ಬಳ್ಳಾರಿಯ ರಣರಣ ಬಿಸಿಲಿನಲ್ಲಿ ಹಣಕ್ಕಾಗಿ ಏನನ್ನಬೇಕಾದರೂ ಮಾಡಲು ಸಿದ್ಧರಿರುವ ಹೊಟ್ಟೆಬಾಕ ಸಂಸ್ಕೃತಿಯೆದುರು ಬೀದಿಕಾಳಗಕ್ಕಿಳಿಯುತ್ತಿದ್ದಾರೆ ಮತ್ತು ಇಷ್ಟಾಗಿಯೂ ಅವರ ಆಸೆಗೆ ಕೊನೆಯಿಲ್ಲ ಮಿತಿಯಿಲ್ಲ.

"ಕಾಮಕ್ಕೆ ಚಂಡಿ ಹಿಡಿದ ಮಗನ ತೆವಲು ತಪ್ಪಿಸಲಿಕ್ಕೆ
ಕೋಳಿ ಬಲಿ ಕೊಟ್ಟಂತೆ"[೯]

ಎಂಬಲ್ಲಿನ ಕಾವ್ಯದ ನಡಿಗೆಯು ಈ ಲಜ್ಜೆಗೇಡಿತನದ ಅತಿರೇಕವನ್ನು 'ಗರ್ಭವತಿಯ ಸೆರಗೂ ಕೆಲವು' ಮಾಯವಾಗಿಸುವ ಮಟ್ಟವನ್ನು ತಲುಪಿರುವುದನ್ನು ಧ್ವನಿಸುತ್ತದೆ.

ಜಾಗತೀಕರಣದ ಪ್ರಭಾವದಿಂದ ನಗರಗಳಲ್ಲಿ ಗಗನಚುಂಬಿ ಅಪಾರ್ಟ್‌ಮೆಂಟ್‌ಗಳು ತಲೆಯೆತ್ತುತ್ತಿವೆ. ಅವು ನೆಲೆ ಕಳೆದುಕೊಂಡ ಬೆಳಕಿನ ಕಿಡಿಗಳನ್ನು ಹಿಚುಕುತ್ತಿವೆ. ಹೀಗೆ ಜಾಗತೀಕರಣಕ್ಕೆ ಮುಖಾಮುಖಿಯಾಗುವ ಗುಣ ಇಲ್ಲಿನ ಬಹುತೇಕ ಕವಿತೆಗಳಿಗಿದೆ. ಆದರೂ ಕೆಲವು ಕವಿತೆಗಳು ವಾಚ್ಯದಿಂದ ಕೂಡಿದ್ದು ಬರೀ ಹೇಳಿಕೆಗಳ ಮಟ್ಟದಲ್ಲೆ ನಿಂತುಬಿಡುತ್ತವೆ. ಇದರ ಹೊರತಾಗಿಯೂ ಈ ಕವಿಯ ಮೊದಲ ಪ್ರಯತ್ನವನ್ನು ಅಲ್ಲಗಳೆಯುವಂತಿಲ್ಲ.

ಸಮಸಮಾಜ ನಿರ್ಮಾಣಕ್ಕೆ ಹೊಸ ಭಾಷ್ಯದಂತಿರುವ ವೀರಣ್ಣನವರ ಕವಿತೆಗಳು ಅಖಂಡ ಮನುಕುಲದ ಒಳಿತನ್ನೆ ಬಯಸಲು ಒತ್ತಾಯಿಸುತ್ತವೆ. ಜೊತೆಗೆ ಇಲ್ಲಿಯವರೆಗೂ ತೆರೆದುಕೊಳ್ಳುತ್ತಿದ್ದ ಹೊಸ ಕಾವ್ಯಜಗತ್ತನ್ನು ಹುಡುಕಾಟ ಮಾಡಿದ ಹೆಗ್ಗಳಿಕೆ ವೀರಣ್ಣ ಅವರದ್ದು. ಅದನ್ನು ಜಿ.ಪಿ. ಬಸವರಾಜು ಅವರು ತಮ್ಮ ಮುನ್ನುಡಿಯ ಮಾತುಗಳಲ್ಲಿ ಹೀಗೆ ಹೇಳಿದ್ದಾರೆ.

"ನೆಲದ ಕರುಣೆಯನ್ನೇ ದನಿಯಾಗಿ ಪಡೆದ ವೀರಣ್ಣನ ಕಾವ್ಯದಲ್ಲಿ ಆಕ್ರೋಶ ಪ್ರಧಾನವಾಗಿ ಕಾಣಿಸದೆ, ಯಾತನೆ, ಬಿಕ್ಕು, ವಿಷಾದ, ಅಸಹಾಯಕತೆಗಳೇ ಎದ್ದು ಕಾಣಿಸುತ್ತವೆ. ವೀರಣ್ಣನವರ ಕಾವ್ಯದ ಸ್ಥಾಯಿ ಭಾವವೇ ಇದಾಗಿರುವಂತೆಯೂ ಕಾಣಿಸುತ್ತದೆ."[೧೦]

ಇದನ್ನು ಅವರದೇ ಒಂದು ಕವಿತೆಯ ಮೂಲಕ ನೋಡುವುದಾದರೆ;

“ಊರ ದೇವರ ದಿಬ್ಬಣ
ಬೀದಿಯಲಿ ಬರುವಾಗ
ನಾವೇ ಹಡದಿ ಹಾಸಿಗೆಯಾಗಿ ಬಿದ್ದುಕೊಂಡೆವು
ಮಣ್ಣನಪ್ಪಿದ ಮಡಿಬಟ್ಟೆಯನು
ಪಲ್ಲಕ್ಕಿ ಹೊತ್ತ ನೀವು ತುಳಿದಿರಿ
ನಾವು ಎಷ್ಟೇ ನಲುಗಿದರೂ
ದೇವರು ನಮ್ಮನು ಮುಟ್ಟಲೇ ಇಲ್ಲ”[೧೧]

ಎನ್ನುವ ನೋವಿನ ಹಿಂದೆ ವೀರಣ್ಣನವರ ಕವಿತೆಗಳು ಒಂದು ಜನಾಂಗದ ಸಂವೇದನೆಯಾಗಿ ಮಾತನಾಡುತ್ತಿರುವುದನ್ನು ಕಾಣಬಹುದು.

ಕೆಲವೊಂದು ಕಡೆ ವಾಚ್ಯವೆನಿಸಿದರೂ ಗಂಭೀರವೂ, ಸಂಕೀರ್ಣವೂ ಆದ ಅತ್ಯುತ್ತಮ ಕವಿತೆಗಳನ್ನು ರಚಿಸಿರುವ ವೀರಣ್ಣನವರ ಕವಿತೆಗಳಲ್ಲಿ ಹಸಿವು ಮತ್ತೆ ಮತ್ತೆ ಪ್ರವೇಶ ಪಡೆಯುತ್ತದೆ. ಈ ರೀತಿಯ ಒಡಲ ದಾಹವೆ ಕಾವ್ಯರೂಪವಾಗಿಯೂ ಹೊರಹೊಮ್ಮಿ ಓದುಗರ ಕಣ್ಣಿಗೆ ರಾಚುತ್ತವೆ.

“ನಾನು ಅಕ್ಷರದ ಹಾದಿಯಲ್ಲಿ ನಡೆದಂತೆಲ್ಲಾ ‘ಸ್ವಾತಂತ್ರ್ಯ’ವೆನ್ನುವುದನ್ನು ಕಳೆದುಕೊಂಡಿರುವ ಅರಿವಾಯಿತು. ಅಂತಹ ಸ್ವಾತಂತ್ರ್ಯವನ್ನು ಬರಹದ ಮೂಲಕ ಹುಡುಕಬೇಕೆಂದು ಹೊರಟಾಗ ಹುಟ್ಟಿದ ಕವಿತೆಗಳು ಈ ಸಂಕಲನದಲ್ಲಿವೆ.”[೧೨] ಹೀಗೆ... ತನ್ನ ಅಂತರಂಗದ ವೇದನೆಯನ್ನೆ ಕವಿತೆಯಾಗಿಸುವ ಎನ್ಕೆ ಹನುಮಂತಯ್ಯ ಕನ್ನಡದ ವಿಶಿಷ್ಟ ಕವಿ, ಲೇಖಕ.

‘ಹಿಮದ ಹೆಜ್ಜೆ’ ಕೃತಿಯಲ್ಲಿ ೩೦ ಕವಿತೆಗಳಿವೆ. ಹನುಮಂತಯ್ಯನವರ ಕವಿತೆಗಳು ದಲಿತಲೋಕದ ಆಚೆಗಿನ ಸಾರ್ವತ್ರಿಕ ಸಂಗತಿಗಳನ್ನು ಕವಿತೆಗಳಾಗಿಸುವ ಮೂಲಕ ವಿಶಿಷ್ಟ ಲೋಕಗ್ರಹಿಕೆಯನ್ನು ಓದುಗರ ಗಮನಕ್ಕೆ ತರುತ್ತವೆ. ಊರು-ಕೇರಿ ಮತ್ತು ಹಟ್ಟಿಯ ಬದುಕಿನ ಚಿತ್ರಣವನ್ನು ಆಪ್ತವಾಗಿಸುವ ಇವರ ಕವಿತೆಗಳು ಇಡೀ ಮಾನವ ಜನಾಂಗವನ್ನು ಮತ್ತವರ ನೋವು-ಸಂಕಟಗಳನ್ನು ಇಡಿಯಾಗಿ ಗ್ರಹಿಸುತ್ತವೆ. ಆ ಮೂಲಕ ಕಾವ್ಯಕನ್ನಿಕೆಗೆ ಮಾನವೀಯ ಧೋರಣೆಯನ್ನು ಅವುಗಳ ಒಡಲೊಳಗೆ ತುಂಬುವ ಪ್ರಯತ್ನವನ್ನು ಮಾಡುತ್ತಾರೆ.

‘ಕತ್ತಲೆಗೆ ಕಾಯುವುದಿಲ್ಲ’ ಎಂಬ ನೀಳ್ಗವಿತೆ ಗದ್ಯದಂತೆ ಕಂಡರೂ ಒಂದು ಕವಿತೆಯಲ್ಲಿ ಬೇಕಾದ ವರ್ಣನಾತ್ಮಕ ರೂಪಕ ಜಗತ್ತು ಅಲ್ಲಿರುವುದು ತಿಳಿಯುತ್ತದೆ. ಅಂದರೆ ಈ ಮೂಲಕ ಹನುಮಂತಯ್ಯ ಏನನ್ನೇ ಬರೆದರೂ ಅದಕ್ಕೊಂದು ಸೊಗಸಿದೆ ಎಂಬ ಅಂಶ ವೇದ್ಯವಾಗುತ್ತದೆ.

ವಸ್ತು ಯಾವುದೇ ಆದರೂ ಅದನ್ನು ಕಾವ್ಯವಾಗಿಸುವ ಕಲೆಗಾರಿಕೆ ಹನುಮಂತಯ್ಯನವರಿಗೆ ಸಿದ್ಧಿಸಿದೆ. ಅದನ್ನು ಈ ಕೃತಿಯಲ್ಲಿರುವ ‘ಕತ್ತಲೆಗೆ ಕಾಯುವುದಿಲ್ಲ,’ ‘ಹೊಸ ಸುದ್ದಿ ತರುವೆ,’

‘ಇಳಿದು ಬಾ,’ ‘ಅವ್ವ ಮತ್ತು ಸೀರೆ,’ ‘ರಕ್ತಗಮಲೆ,’ ‘ಹಿಮದ ಹೆಜ್ಜೆ’, ‘ಕವಿತೆಗೆ,’ ‘ಮರೆತಿಲ್ಲ ನನ್ನವಳೆ,’ ‘ರಂಗೋಲಿಯೊಳಗೆ,’ ‘ಸಿಡಿಲ ಕವಿತೆ,’ ‘ಕಥೆಯೊಳಗೆ,’ ‘ಹುಡುಕಾಟ,’ ‘ಮಾತಿಲ್ಲದ ಮೇಲೆ,’ ‘ಮೌನವೇಕೆ,’ ‘ಅಪ್ಪ,’ ‘ಮಲದ ಜಲ,’... ಇನ್ನೂ ಮುಂತಾದ ಕವಿತೆಗಳಲ್ಲಿ ಇವರು ದಕ್ಕಿಸಿಕೊಂಡ ಕಾವ್ಯಸಿದ್ಧಿಯ ಮಹತ್ವ ವ್ಯಕ್ತವಾಗುತ್ತದೆ.

“ಪ್ರತಿ ದಿವಸ ಊರೊಳ್ಳ ಕಸಗುಡಿಸಿ
ಬೀಳುಗಳ ಹೊತ್ತು
ಮಡಕೆಗಟ್ಟಲೆ ಬಾಡ ಕೂಡಿಟ್ಟವನು
ಎಕ್ಕಡದೊಳಗೆ ಬುದ್ಧನ ಹಾಗೆ ಕೂತು
ಅವರಿವರಿತ್ತ ತುತ್ತ ತಿಂದವನು”[೧೩]

ಎಂದು ತನ್ನ ಅಪ್ಪನ ಅಸಹಾಯಕತೆಯನ್ನು ಮತ್ತು ಇಂಥ ಅಸಹಾಯಕತೆಯನ್ನು ಬುದ್ಧಿವಂತಿಕೆಯಿಂದ ಪೋಷಿಸುವ ವರ್ಗಹಿತಾಸಕ್ತಿಯನ್ನು ಪ್ರಶ್ನೆ ಮಾಡುತ್ತಾರೆ. ಹೀಗೆ ಮನುಷ್ಯರೆಲ್ಲರ ನೋವನ್ನು ಮಾನವೀಯ ನೆಲೆಗಟ್ಟಿನಲ್ಲಿ ಕಾಣುವ ಜೀವಚಲನೆಯ ಸಾಲುಗಳಾಗಿ ಇವು ಕಾಣುತ್ತವೆ.

ಎಂ.ಡಿ. ಒಕ್ಕುಂದ ಅವರ ಬಹುತೇಕ ಕವಿತೆಗಳು ಮನುಷ್ಯ ಸಹಜವಾದ ನೆಮ್ಮದಿ, ಸ್ವಾತಂತ್ರ್ಯ, ಮಾನವೀಯ ಪ್ರೀತಿ, ವಿಶ್ವಭ್ರಾತೃತ್ವ, ಇವೇ ಮೊದಲಾದ ಜೀವನ್ಮುಖಿ ಧೋರಣೆಗಳನ್ನು ಒತ್ತಿ ಒತ್ತಿ ಹೇಳುತ್ತಿವೆ.

ಇಂದಿನ ಸಮಕಾಲೀನ ಸಂದರ್ಭದಲ್ಲಿ ಇಡೀ ಮನುಷ್ಯನ ನಿದ್ದೆಗೆಡಿಸಿರುವ ವಿಷಯಗಳೆಂದರೆ ಧರ್ಮ, ಯುದ್ಧ ಮತ್ತು ಸ್ವಾತಂತ್ರ್ಯ. ಈ ಮೂರರ ಬೆನ್ನೇರಿರುವ ಕಾಲ ಎಲ್ಲರಿಗೂ ಎಲ್ಲಾ ಕಾಲಕ್ಕೂ ವಿಸ್ಮಯವೇ.

ಬಹುತೇಕ ಕವಿಗಳನ್ನು ಕಾಡಿರುವ ಈ ಕಾಲವು ಇಲ್ಲಿ ವಿದೂಷಕನು ಮೆಟ್ಟಿರುವ ಚಪ್ಪಲಿಯಾಗಿ ರಚಿತವಾಗಿದೆ.

“ಈ ಕಾಲನಿಗೆ
ಬೇರೆ ಅಂಗಾಂಗಗಳೇ ಇಲ್ಲ
ಕಾಲುಗಳ ಹೊರತಾಗಿ”[೧೪]

ಎಂಬಲ್ಲಿ ಸಮಯದ ಮಹತ್ವವನ್ನು ಅರಿಯಬಹುದು.

“ಬೆಟ್ಟದ ಮೇಲೊಂದು
ಮನೆಯ ಮಾಡಿರುವೆ
ಮೃಗಗಳ ಚಿಂತೆಯಿಲ್ಲ
ಮನುಷ್ಯರದೇ ಅಂಜಿಕೆ”[೧೫]

ಬದಲಾದ ಸಾಂಸ್ಕೃತಿಕ ಸಂದರ್ಭಗಳ ಹಿನ್ನೆಲೆಯಲ್ಲಿ ಮನುಷ್ಯ ಮನುಷ್ಯರ ನಡುವಿನ ಮಾನವೀಯ ಸಂಬಂಧಗಳು ಕೃತಕ ಮತ್ತು ವಿಷಮವಾಗುವ ಅಪಾಯವನ್ನು ಕವಿತೆ ಧ್ವನಿಸುತ್ತಿದೆ. ಮನುಷ್ಯ ಮನುಷ್ಯನನ್ನೇ ಕಿತ್ತು ತಿನ್ನುವ ಮನುಷ್ಯನೊಳಗಣ ಮೃಗೀಯ ಗುಣವನ್ನು ಇದು ವ್ಯಕ್ತಪಡಿಸುತ್ತಿದೆ.

ಇಲ್ಲಿ ಮುಖ್ಯವಾಗಿ ಕವಿಯ ಮನಸ್ಸು ನೆಮ್ಮದಿಯನ್ನರಸುತ್ತಿದೆ. ಆದರೆ ತನ್ನ ಸುತ್ತಣ ಪರಿಸರ ತಾನಂದುಕೊಂಡಷ್ಟು ಸುಲಭವಾಗಿ ಧರ್ಮ ಮತ್ತು ಯುದ್ಧಗಳಿಂದ ಹೊರಬರುತ್ತಿಲ್ಲ

"ಧರ್ಮದ ವಿವರ ಕೇಳದ
ಯುದ್ಧ ಪಾಠ ಹೇಳದ
ಶಾಲೆ ತೆರೆಯಬೇಕು"[೧೬]

ಇಲ್ಲಿ ಕವಿ ನಮ್ಮ ಶಿಕ್ಷಣಕ್ರಮವನ್ನು ನಿಕಷಕ್ಕೊಡ್ಡುವ ಮೂಲಕ ತಾತ್ವಿಕವಾಗಿ ಜಗಳಕ್ಕಿಳಿಯುತ್ತಿದ್ದಾರೆ. ಅಂದರೆ ಇಂದು ಶಿಕ್ಷಣದ ಹೆಸರಿನಲ್ಲಿ ಧಾರ್ಮಿಕ ಗುರುಗಳು ಮತ್ತು ಮಠ-ಮಾನ್ಯಗಳು ಮುಗ್ಧ ಮನಸ್ಸುಗಳಿಗೆ ಬೋಧಿಸುವ ನೈತಿಕ ಪಾಠ ಯಾವ ಸ್ವರೂಪದ್ದು ಎಂಬ ಪ್ರಶ್ನೆ ಎದುರಾಗುತ್ತದೆ. ಈ ಪ್ರಶ್ನೆಗೆ ಉತ್ತರವೆಂಬಂತೆ ಕವಿ ಧರ್ಮ ಮತ್ತು ಯುದ್ಧದಿಂದ ಮುಕ್ತರಾಗಲು ಬಯಸುತ್ತಿದ್ದಾರೆ; ಅಷ್ಟೇ ಅಲ್ಲ, ತನ್ನ ಸುತ್ತಣ ಪರಿಸರಕ್ಕೆ ಧರ್ಮ ಮತ್ತು ಯುದ್ಧದ ಸೋಂಕು ತಗುಲಬಾರದೆಂಬ ಎಚ್ಚರ ಕೂಡಾ ಅವರದಾಗಿದೆ.

'ಮಗು ಮಲಗಿದೆ ಎದೆಯ ಮೇಲೆ' ಎಂಬುದು ಇವರ ಒಳ್ಳೆಯ ಮತ್ತು ಸಂಕೀರ್ಣ ಕವಿತೆಗಳಲ್ಲೊಂದು. ಮಲಗಿರುವ ಮಗುವನ್ನು ನೆಮ್ಮದಿಯಾಗಿ ಮಲಗಲು ಬಿಡದ ಈ ಕ್ರೂರ ಸಮಾಜದ ಮೇಲೆ ತಾಯಿಗೆ ಸಿಟ್ಟಿದೆ, ಆಕ್ರೋಶವಿದೆ. ಆದರೆ ಯಾರನ್ನು ಸುಮ್ಮನಿರಿಸುವುದು? ಇದು ಈ ಸಂಕಲನದ ಮತ್ತು ಮನುಷ್ಯಕುಲದ ಮೂಲಭೂತ ಪ್ರಶ್ನೆ. ಇದು ಯಾವ ರೀತಿ ಆತಂಕ ಹುಟ್ಟಿಸುತ್ತಿದೆ ಎಂದರೆ ದಿನ ಬೆಳಗಾದರೆ ಸಾವು-ನೋವಿನ ಸುದ್ದಿಯ ಹೊರತಾಗಿ ಮತ್ತೊಂದು ಸುದ್ದಿಯಿಲ್ಲವೇನೊ ಎಂಬಂಥ ಭಯದ ಕಲುಷಿತ ವಾತಾವರಣ ನಿರ್ಮಾಣವಾಗಿಬಿಟ್ಟಿದೆ. ಇದನ್ನು ಕಂಡ ಕವಿ ಕೊಡುವ ಉತ್ತರವಂತೂ ತುಂಬಾ ಮಾರ್ಮಿಕವಾಗಿದೆ.

"ಇವರಿಗೆ
ಗಡಿಯ ಆಚೆಯವ ಸತ್ತಿದ್ದಾನೆ
ಈಚೆಯವ ಹುತಾತ್ಮನಾಗಿದ್ದಾನೆ.
ಅವರಿಗೆ
ಗಡಿಯ ಈಚೆಯವ ಸತ್ತಿದ್ದಾನೆ
ಆಚೆಯವ ಹುತಾತ್ಮನಾಗಿದ್ದಾನೆ
ಒಂದಂತೂ ಸತ್ಯ
ಇಬ್ಬರೂ ಹೆಣವಾಗಿದ್ದಾರೆ"[೧೭]

ಎಂಬ ದೇಶಾತೀತವಾದ ನೋವಿನ ಸೂಕ್ಷ್ಮತೆ, ಆದ್ರತೆ ಸಹಜ ಮಾನವೀಯ ನೆಲೆಗಟ್ಟಿನಲ್ಲಿ ಧ್ವನಿಸುತ್ತದೆ. ಇಲ್ಲಿ ಮತ್ತೆ ಮತ್ತೆ ಬುದ್ಧ ನೆನಪಾಗುತ್ತಾನೆ. ಬುದ್ಧನ ಲೋಕದೃಷ್ಟಿ ಕಣ್ಮುಂದೆ ಬಂದು ನಿಲ್ಲುತ್ತದೆ.

"ಸಿದ್ದಾರ್ಥ ಬುದ್ಧನಾದದ್ದು
ಭೋಧಿವೃಕ್ಷದ ಕೆಳಗೆ ತಪಸಿದ್ದಕ್ಕಲ್ಲ
ಕಪಿಲವಸ್ತುವಿನ ಗಡಿಯ ದಾಟಿದ್ದಕ್ಕೆ
ಗಡಿಗಳಿರುವಲ್ಲಿ ಬುದ್ಧನಿಲ್ಲ
ಬುದ್ಧನಿರುವಲ್ಲಿ ಯುದ್ಧವಿಲ್ಲ"[೧೮]

ಈ ಸಂಕಲನದ ಕೊನೆಯ ಕವಿತೆಯಾದ 'ಬಂಧಿಸಬಹುದೆ ಬಯಲ ಆಲಯದೊಳಗೆ' ಎಂಬ ಮಾತು, ಒಟ್ಟಾರೆ ಎಲ್ಲ ಕವಿತೆಗಳ ಆಶಯಕ್ಕೆ ಅನ್ವಯಿಸಬಹುದಾದರೂ ಅನೇಕ ಕವಿತೆಗಳು ಬರೀ ವಾಚ್ಯಪ್ರಧಾನ ನೆಲೆಯಲ್ಲೇ ನಿಂತುಬಿಡುತ್ತವೆ. ಈ ಕೊರತೆಯ ನಡುವೆಯೂ ಇದೊಂದು ಒಳ್ಳೆಯ ಸಂಕಲನವಾಗಿ ಉಳಿಯುತ್ತಿದೆ.

**೬.೧. ಮಾನವೀಯ ಪ್ರೀತಿಯ ಹುಡುಕಾಟ**

"ಬಾ ಗೆಳತಿ
ಚೂರಾದ ಮುಖಗಳನು ಆಯೋಣ
ಎಲ್ಲಾದರೂ
ನಗು ಮೆತ್ತಿಕೊಂಡಿದ್ದರೆ
ನಮ್ಮ ತುಟಿಗಳಿಗೆ ತುಂಬಿಕೊಳ್ಳೋಣ...
ಎಲ್ಲಾದರೂ
ಅಳು ಅಂಟಿಕೊಂಡಿದ್ದರೆ
ನಮ್ಮ ಕಣ್ಣುಗಳಿಗೆ ಬಸಿದುಕೊಳ್ಳೋಣ...
ಬಾ ಗೆಳತಿ
ಚೂರಾದ ಎದೆಗಳನು ಆಯೋಣ
ಎಲ್ಲಾದರೂ ಹದವಿದ್ದರೆ
ಅಲ್ಲಿ ಬೀಜಗಳಾಗಿ ಮೊಳೆಯೋಣ..."[೧೯]

ಮೇಲ್ನೋಟಕ್ಕೆ ಇದು ಪ್ರೇಮ ಕವಿತೆಯಾಗಿ ಕಂಡರೂ, ಆ ಸೀಮಿತ ಪರಿಧಿಯನ್ನು ದಾಟಿ ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ವಿಶ್ವಾತ್ಮಕವಾದ ಪ್ರೇಮತತ್ವ, ಆತ್ಯಂತಿಕ ಪ್ರೀತಿಯ ಹುಡುಕಾಟವಾಗಿ ಕಾಣುತ್ತದೆ. ಜಗತ್ತಿನ ಸುಖ ಮತ್ತು ದುಃಖಗಳೆರಡಕ್ಕೂ ನಾವು ಭಾಗಿಯಾಗೋಣ ಎಂಬ ತುಡಿತ ಇಲ್ಲಿನದು. ಜಗತ್ತಿನಲ್ಲಿ ಎಷ್ಟೆಲ್ಲ ಸಮಸ್ಯೆಗಳಿವೆ; ಆ ಎಲ್ಲ ಸಮಸ್ಯೆಗಳಿಗೆ, ನೋವುಗಳಿಗೆ ಹೆಗಲು ಕೊಟ್ಟು ಪರಿಹರಿಸುವ ಹೊಸ ದಾರಿಯ ಕಡೆ ನಡೆಯೋಣ

ಎಂಬ ಉತ್ಕಟವಾದ ಅಪೇಕ್ಷೆಯೂ ಇದೆ. ಜೊತೆಗೆ ಜಗತ್ತಿನ ದುಃಖ, ಸಂಕಟಗಳಿಗೆ ಸಮಾನ ದುಃಖಿಗಳಾಗುವ ತೀವ್ರ ಹಂಬಲ, ಕರುಣೆ ಇಲ್ಲಿನದು. ಇಂಥ ಮಾನವಪ್ರೀತಿಯ ಹುಡುಕಾಟ ವಿಶ್ವಾತ್ಮಕವೂ, ಆದರ್ಶವೂ ಆದ ಜೀವನಪ್ರೀತಿಯ ಶೋಧವಾಗಿದೆ. ಇದಕ್ಕೆ ಜಾತಿ-ಮತ, ಮೇಲು-ಕೀಳೆಂಬ ಎಲ್ಲೆಕಟ್ಟು ಇಲ್ಲ. ಇಂಥ ನಿರ್ದಿಗಂತವಾದ ಪ್ರೀತಿಯ ಹುಡುಕಾಟವನ್ನು ಒಂದು ಸಣ್ಣ ಕವಿತೆಯಲ್ಲಿ ಕವಿ ಹಿಡಿದಿಟ್ಟಿರುವುದು ಗಮನಾರ್ಹ. ಕವಿತೆಯ ಕೊನೆಯ ಮೂರು ಸಾಲುಗಳಲ್ಲಿ ಧ್ವನಿಸುವ ಅರ್ಥಸಾಧ್ಯತೆಗಳು ಇದನ್ನು ಇನ್ನಷ್ಟು ಪರಿಣಾಮಕಾರಿಯಾಗಿಸಿವೆ. 'ಆಗು'ವ ಕ್ರಿಯೆ ಬರೀ ಪ್ರಕ್ರಿಯೆಯನ್ನಷ್ಟೇ ಸೂಚಿಸದೆ, 'ಚಲನೆ'ಯನ್ನೂ ಎದುರುಗೊಳ್ಳುತ್ತ ಜೀವಚೈತನ್ಯವನ್ನು ತುಂಬುತ್ತಿದೆ.

"ಎನ್.ಕೆ. ಕಾವ್ಯದಲ್ಲಿ ಅಂಬೇಡ್ಕರ್ ವೈಚಾರಿಕ ಎಚ್ಚರ, ಬುದ್ಧನ ತಾಯಿಕರುಣೆ, ಅಲ್ಲಮನ ಅನುಭಾವಿಕ ಬೆಡಗು, ಲಂಕೇಶರ ವೈಯಕ್ತಿಕ ತಳಮಳ ಮತ್ತು ಅಂತರ್ಮುಖತ್ವಗಳೆಲ್ಲವೂ ಸಂಗಮಗೊಂಡು ಹುಟ್ಟಿದ್ದು; ಇಲ್ಲಿ ದಲಿತ ಸಂವೇದನೆಯನ್ನು ಮಾನವ ಸಂವೇದನೆಯ ವಿಶಾಲ ಭಿತ್ತಿಯಲ್ಲಿಟ್ಟು ನೋಡುವ ಅಥವಾ ಸಾಮಾನ್ಯ ಲೋಕಾನುಭವವನ್ನು ದಲಿತ ಭಿತ್ತಿಯಲ್ಲಿಟ್ಟು ನೋಡುವ ವಿಶಿಷ್ಟ ದೃಷ್ಟಿಕೋನವಿದೆ; ಖಾಸಗಿಯಾದ ಒಳಗಿನ ತಲ್ಲಣಗಳನ್ನೇ ದೊಡ್ಡವೆಂದು ಪರಿಭಾವಿಸಿ ತನ್ನ ಅಸ್ತಿತ್ವವನ್ನು ಹುಡುಕುವ ವೈಯಕ್ತಿಕತೆಯಿದೆ; ಹಾಗೆಯೇ ಕಷ್ಟಗಳಲ್ಲಿ ಹುದುಗಿದ ಎಲ್ಲರ ದುಗುಡುಗಳನ್ನು ತನ್ನವೇ ಎಂದು ಪರಿಭಾವಿಸಿ ಮಿಡಿಯುವ ಸಾರ್ವತ್ರಿಕತೆಯೂ ಇದೆ. ಇಲ್ಲಿನ ಕಾವ್ಯದ ಕಸುವೆಂದರೆ, ರೂಪಕಗಳ ನುಡಿಗಟ್ಟು, ಭಾವನಾತ್ಮಕ ತೀವ್ರತೆ, ದಾರ್ಶನಿಕ ಜಗಿತ ಹಾಗೂ ಮೇರೆಯಿಲ್ಲದ ಜೀವನಪ್ರೀತಿ. ಇವು ಎನ್.ಕೆ.ಯನ್ನು ಸಮಕಾಲೀನ ಕವಿಗಳಲ್ಲೇ ವಿಶಿಷ್ಟರನ್ನಾಗಿಸಿದವು."[೨೦]

ಲೋಕದ ದಂದುಗಗಳಿಗೆ ಅಂತರಂಗದಲ್ಲೇ ಮಿಡಿಯುವ, ನುಡಿಯುವ ಈ ಎರಡೂ ಕ್ರಿಯೆಗಳನ್ನು ಕವಿ ಇಲ್ಲಿನ ಕವಿತೆಗಳಲ್ಲಿ ಸಮರ್ಥವಾಗಿ ನಿರ್ವಹಿಸಿದ್ದಾರೆ. ದೇಶ, ಕಾಲ, ಜಾತಿಯನ್ನು ಮೀರಿದ ಇಲ್ಲಿನ ಮಾನವೀಯ ಕರುಣೆ ಸಮಾನತಾತತ್ವದ ಪಾತಳಿಯಲ್ಲಿ ಒಡಮೂಡಿದೆ. ಕೊನೆಯ ಮೂರು ಸಾಲು ಕವಿತೆಯ ತತ್ವ ಮತ್ತು ಆಶಯದ ದೃಷ್ಟಿಯಿಂದ ಮಹತ್ವವಾದವುಗಳು. ಅಷ್ಟೇ ಅಲ್ಲ; ಕವಿತೆಯ ಜೀವಶಕ್ತಿ ಇರುವುದೇ ಈ ಸುಖ, ದುಃಖಗಳನ್ನು ಸಮಾನ ಪಾತಳಿಯಲ್ಲಿ ನೋಡುವ ಕ್ರಮದಲ್ಲಿ. ಹಿಂಸೆಯನ್ನು ಮತ್ತೆ ಮತ್ತೆ ಎದುರುಗೊಳ್ಳುವ 'ಚಿತ್ರದ ಬೆನ್ನು' ಎಂಬ ರೂಪಕವು ಜಗತ್‌ಸೃಷ್ಟಿಯ ವಿವಿಧ ಬಗೆಯ ಪದರುಗಳನ್ನು ಇಲ್ಲಿ ಬಿಚ್ಚಿಡುತ್ತಿದೆ.

"ಈ ಇರುವೆಯ ಮೇಲೆ  
ನನ್ನ ಭಾರದ ಹೆಜ್ಜೆಯನಿಟ್ಟೆ  
ತುಸು ಕಾಲದ ನಂತರ ತೆಗೆದೆ  
ಇರುವೆ ಮತ್ತೆ ಚಲಿಸುತ್ತಿದೆ

ಏ ಸೂಜಿಯ ಗಾತ್ರದ
ಜೀವವೇ
ನನ್ನ ಭಾರ ಹೊರುವ ನಿನ್ನ
ಬೆನ್ನಿಗೆ ಶರಣು"[೨೧]

ಈ ಭೂಮಿಯ ಮೇಲೆ ಬದುಕುವ ಹಕ್ಕು ಪ್ರತಿಯೊಂದು ಜೀವಿಗೂ ಇದೆ. ಯಾರು ಮೇಲೂ ಅಲ್ಲ; ಕೀಳೂ ಅಲ್ಲ. ಪ್ರಕೃತಿಯ ಮಡಿಲಲ್ಲಿ ಎಲ್ಲರೂ ಸರಿಸಮಾನರು ಎಂಬ ಸಮಾನತಾತತ್ವಗಳನ್ನು ಈ ಕವಿತೆ ಲೋಕಕ್ಕೆ ಸಾರುತ್ತಿದೆ. ಈ ಸೂಜಿಯ ಗಾತ್ರದ ಜೀವ ತನ್ನ ಬದುಕಿನ ವಿಸ್ಮಯದಿಂದ ಸುತ್ತಣ ಲೋಕವನ್ನು ಬೆರಗುಗೊಳಿಸುವ ಚಿತ್ರಣ ಅನೂಹ್ಯ ಸಾಧ್ಯತೆಗಳಿಗೆ ಕೊಂಡೊಯ್ಯುತ್ತದೆ.

"ಅಲ್ಲಿ ಆ ಗಿಡದಲ್ಲಿ
ನೂಲಿನ ಗಾತ್ರದ ಕಡ್ಡಿಯ ಮೇಲೆ
ಉಯ್ಯಾಲೆಯಾಡುವ ಹಕ್ಕಿಯೇ
ಕಡ್ಡಿ ಮುರಿಯದೆ ಆಡುವ ನಿನ್ನ
ತೂಕಕ್ಕೆ ಶರಣು"[೨೨]

ಗಿಡ ಮತ್ತು ಹಕ್ಕಿಯ ನಡುವಿನ ಅಂತರ್‌ಸಂಬಂಧದ ಸ್ವರೂಪವನ್ನು ಹುಡುಕಾಟ ಮಾಡುವ ಬಗೆ ಇಲ್ಲಿ ವಿಶಿಷ್ಟವಾಗಿದೆ.

"ಅಗ್ನಿಮಾಂಸದ ಕುಲುಮೆಯಲಿ
ನನ್ನ ಕಾಯಿಸಿ ಬಣ್ಣವ ಮಾಡಿ
ಮರಳಿ ನನ್ನ ರೂಪನೇ ಕಡೆವ
ಏ ನನ್ನಾಳದ ಅಳುವೇ
ನನ್ನ ಚಿತ್ರಕ್ಕೇಕೆ ಬೆನ್ನು ಬರೆವೆ?"[೨೩]

ಸೃಷ್ಟಿಯ ವಿಸ್ಮಯ ಮತ್ತು ಸಂಕೀರ್ಣತೆಗಳನ್ನು ಆರ್ದ್ರವಾಗಿ ಚಿತ್ರಿಸುತ್ತಲೇ ಸಮ ಸಮಾಜದ ಕನಸಿನ ಬೀಜವನ್ನು ಎಲ್ಲರೆದೆಯಲ್ಲಿ ಬಿತ್ತುವ ಇಲ್ಲಿನ ರೂಪಕ ಜಗತ್ತು ವೈಶಿಷ್ಟ್ಯಪೂರ್ಣವಾಗಿದೆ.

ಗಾತ್ರದಲ್ಲಿ ಚಿಕ್ಕದೆಂಬ ಕಾರಣಕ್ಕೆ ಕೇವಲವಾಗಿ ಕಾಣುವ ಸಣ್ಣ ಇರುವೆ, ಕವಿಯ ದೃಷ್ಟಿಯಲ್ಲಿ ಬೃಹತ್ ಆಗಿ ಕಾಣಿಸಿದೆ. ಆದ್ದರಿಂದ ಈ 'ಸೂಜಿಯ ಗಾತ್ರದ ಜೀವ'ಕ್ಕೆ ಕವಿ ಶರಣು ಎನ್ನುತ್ತಿದ್ದಾನೆ. ಇರುವೆ, ಬಸವನಹುಳು, 'ಹಕ್ಕಿ ಬದುಕಿನ ಸೋಜಿಗ'ದಂತೆ ನಮ್ಮನ್ನು ಕಾಡುತ್ತವೆ. ಇವುಗಳ ಜೀವನಪ್ರೀತಿ ಮತ್ತು ಮಹತ್ವಾಕಾಂಕ್ಷೆ ನಮ್ಮನ್ನು ಬೆರಗುಗೊಳಿಸುತ್ತದೆ.

ಮೂಡ್ನಾಕೂಡು ಚಿನ್ನಸ್ವಾಮಿ ಅವರ 'ನಾನೊಂದು ಮರವಾಗಿದ್ದರೆ' ಪದ್ಯವು ಇನ್ನೊಂದು ರೀತಿಯ ಹೊಳಹುಗಳನ್ನು ಕೊಡುತ್ತದೆ.

"ನಾನೊಂದು ಮರವಾಗಿದ್ದರೆ
ಹಕ್ಕಿಗೂಡು ಕಟ್ಟುವ ಮುನ್ನ
ಕೇಳುತ್ತಿರಲಿಲ್ಲ ನೀನು ಯಾವ ಕುಲ
ಬಿಸಿಲು ನನ್ನ ಅಪ್ಪಿಕೊಂಡಾಗ
ನೆರಳಿಗಾಗುತ್ತಿರಲಿಲ್ಲ ಮೈಲಿಗೆ
ತಂಬೆಲರ ಕೂಡ ಎಲೆಗಳ ಸ್ನೇಹ
ಮಧುರವಾಗಿರುತ್ತಿತ್ತು.
ಮಳೆ ಹನಿಗಳು ನಾನು ಶ್ವಪಚನೆಂದು
ಹಿಂದೆ ಸರಿಯುತ್ತಿರಲಿಲ್ಲ, ನಾನು
ಬೇರೂರಿ ಕುಡಿಯಿಡುತ್ತಿರುವಾಗ ಭೂದೇವಿ
ಮಡಿ ಮಡಿ ಎಂದು ಓಡುತ್ತಿರಲಿಲ್ಲ
ಪವಿತ್ರ ಗೋವು ತನ್ನ ತೊಗಟೆಗೆ ತನ್ನ ಮೈ ಉಜ್ಜಿ
ತುರಿಕೆ ತೀರಿಸಿಕೊಳ್ಳುವಾಗ ಅದರ ಅಂಗಾಂಗಗಳಲ್ಲಿ
ಅಡರಿಕೊಂಡ ಮುಕ್ಕೋಟಿ ದೇವತೆಗಳು
ನನ್ನನ್ನು ಮುಟ್ಟಿಸಿಕೊಳ್ಳುತ್ತಿದ್ದರು"[೨೪]

ಮರ, ಗಿಡ, ಪ್ರಾಣಿ, ಪಕ್ಷಿಗಳಿಗೆ ಇರುವ ಮಾನವೀಯತೆ ಮನುಷ್ಯಜಾತಿಗೆ ಇಲ್ಲದಿರುವುದು ಒಂದು ದೊಡ್ಡ ವಿಪರ್ಯಾಸ. ಜಾತಿಕೂಪದಲ್ಲಿ ಬೆಂದು ನರಳುತ್ತಿರುವ ಮನುಷ್ಯನ ಬದುಕು ಪ್ರಾಣಿಗಳಿಗಿಂತಲೂ ಕ್ರೂರವಾದುದು.

ಇವು ಪ್ರಕೃತಿಯ ಮಡಿಲಲ್ಲಿ ಒಟ್ಟಿಗೆ ಸೌಹಾರ್ದಯುತವಾಗಿ ಬದುಕುವಂತೆ ಮನುಷ್ಯ ಏಕೆ ಬದುಕಲಾರ ಎಂಬ ಮೂಲಭೂತ ಪ್ರಶ್ನೆ ಇಲ್ಲಿನದು. ಇದರ ಮೂಲಬೇರುಗಳು ವರ್ಗ, ವರ್ಣ, ಜಾತಿ, ಸಂಘರ್ಷಗಳ ನೆಲೆಯಲ್ಲಿ ಅಡಗಿವೆ. ಇಂಥ ಶ್ರೇಣೀಕರಣ ವ್ಯವಸ್ಥೆಯ ಕ್ರೂರ ಸತ್ಯವನ್ನು ಈ ಕವಿತೆ ಅಭಿವ್ಯಕ್ತಿಸುತ್ತಿದೆ.

ಇಲ್ಲಿಯವರೆಗೆ ಅಗೋಚರವಾಗಿದ್ದು, ಆಚರಣೆಯ ರೂಪದಲ್ಲಿದ್ದ ಧಾರ್ಮಿಕ, ಸಾಮಾಜಿಕ ವಾಸ್ತವಗಳನ್ನು ೭೦ರ ದಶಕದಿಂದ ಈಚೆಗೆ ರಚನೆಯಾದ ಬಂಡಾಯ-ದಲಿತ ಸಾಹಿತ್ಯ ಪರಿಚಯಿಸಿತು. ಇದರ ಮುಂದುವರಿಕೆಯ ಭಾಗವಾಗಿ ಮೂಡ್ನಾಕೂಡು ಚಿನ್ನಸ್ವಾಮಿ, ಕೆ.ಬಿ. ಸಿದ್ಧಯ್ಯ, ಎಲ್. ಹನುಮಂತಯ್ಯ, ಎಚ್. ಗೋವಿಂದಯ್ಯ, ವಡ್ಡಗೆರೆ ನಾಗರಾಜಯ್ಯ, ಎನ್.ಕೆ. ಹನುಮಂತಯ್ಯ, ಲಕ್ಕೂರು ಆನಂದ ಮುಂತಾದವರ ಕವಿತೆಗಳು ಕಂಡುಬರುತ್ತವೆ. ೭೦ರ ದಶಕದ ಆರಂಭದಲ್ಲಿ ರಚನೆಯಾದ ಬಂಡಾಯ-ದಲಿತ ಕಾವ್ಯದ ಆಕ್ರೋಶದ ಮಾದರಿಗಿಂತ ಭಿನ್ನವಾದ ಕಾವ್ಯರಚನಾ ಮಾದರಿಗಳನ್ನು ಇವರಲ್ಲಿ ಕಾಣಬಹುದು. ಬಂಡಾಯ ಮತ್ತು ದಲಿತ ಕಾವ್ಯದ ಹೊರಳುದಾರಿಗಳು ಸಮಕಾಲೀನ ಕಾವ್ಯದಲ್ಲಿ ನಿಚ್ಚಳವಾಗಿ ಗೋಚರಿಸುತ್ತಿವೆ.

## ೬.೨. ಸಮಕಾಲೀನ ಕನ್ನಡ ಕಾವ್ಯ: ಹಸಿವು

ಹಸಿವು ಈ ಜಗತ್ತಿನ ಕ್ರೂರ ವಾಸ್ತವ. ಶತಶತಮಾನಗಳಿಂದ ಮನುಷ್ಯನನ್ನು ತೀವ್ರವಾಗಿ ಇದು ಕಾಡಿದೆ. ಜೈವಿಕ ಸರಪಳಿಯಲ್ಲಿ ಹಸಿವಿನ ಪಾತ್ರ ಮಹತ್ವದ್ದು. ಜಗತ್ತಿನ ಮೂಲಭೂತ ಸಮಸ್ಯೆಗಳಲ್ಲಿ ಹಸಿವೂ ಒಂದು. ಇಂಥ ಜಾಗತಿಕ ಸಮಸ್ಯೆಯೊಂದನ್ನು ಕುರಿತು ಬಹುತೇಕ ಬರಹಗಾರರು ತಮ್ಮದೇ ಆದ ನೆಲೆಯಲ್ಲಿ ಚಿತ್ರಿಸಿದ್ದಾರೆ. ಕನ್ನಡದ ಕವಿಗಳಿಗೂ ಹಸಿವು ಪ್ರಧಾನ ಸಮಸ್ಯೆಯಾಗಿ ಕಾಡಿದೆ. ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಪ್ರಶ್ನೆಗಳಲ್ಲಿ ಹಸಿವಿಗೆ ಪ್ರಧಾನ ಸ್ಥಾನವಿದೆ. ಸಮಾಜ ಎದುರಿಸುತ್ತಿರುವ ಈ ಹಸಿವಿನ ಕುರಿತಾದ ಸಮಸ್ಯೆ ಮತ್ತು ಸವಾಲುಗಳಿಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತಿದೆ.

ಮೌಖಿಕ ಸಾಹಿತ್ಯವನ್ನು ಒಳಗೊಂಡಂತೆ ಪ್ರಾಚೀನ, ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಹಸಿವಿನ ಚಿತ್ರಣಗಳು ಕಂಡುಬಂದರೂ ಆಧುನಿಕ ಕನ್ನಡ ಕವಿಗಳನ್ನು ಗಂಭೀರವಾಗಿ ಮತ್ತು ತೀವ್ರವಾಗಿ ಈ ಪ್ರಶ್ನೆ ಕಾಡಿದೆ. ಇದಕ್ಕೆ ಹಲವು ಕಾರಣಗಳಿವೆ. ಧರ್ಮಜಿಜ್ಞಾಸೆ, ಅಧ್ಯಾತ್ಮ, ಪ್ರಕೃತಿವರ್ಣನೆ ಹಾಗೂ ಪ್ರಭುತ್ವಕೇಂದ್ರಿತ ವಸ್ತುವಿಷಯಗಳ ಬಗ್ಗೆಯೇ ಹೆಚ್ಚು ಚಿತ್ರಿಸುತ್ತಿದ್ದ ಸಾಹಿತ್ಯ, ಸಾಮಾನ್ಯ ಮನಷ್ಯನ ಬಗ್ಗೆ ಚಿತ್ರಿಸಿದ್ದು ತುಂಬಾ ವಿರಳ.

ಆಧುನಿಕ ಕನ್ನಡ ಸಾಹಿತ್ಯ ಮನುಷ್ಯಕೇಂದ್ರಿತ ಸಮಸ್ಯೆಗಳ ಕಡೆಗೆ ಹೆಚ್ಚು ಗಮನ ಹರಿಸಿತು. ಆಗ ಹಸಿವು, ಬಡತನ, ಮೇಲು-ಕೀಳು ಇವೇ ಮುಂತಾದ ಸಾಮಾಜಿಕ ಸಮಸ್ಯೆಗಳು ಸಾಹಿತ್ಯದ ವಸ್ತುವಾದವು.

ನವೋದಯ ಸಂದರ್ಭದ ಬರಹಗಾರರಾದ ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ ಮುಂತಾದವರು ಬರಗಾಲ ಮತ್ತು ಹಸಿವಿನ ಬಗ್ಗೆ ತಮ್ಮ ಕೃತಿಗಳಲ್ಲಿ ಬರೆದಿದ್ದಾರೆ. ಪ್ರಗತಿಶೀಲ ಬರಹಗಾರರು ಸಹ ಮನುಷ್ಯಕೇಂದ್ರಿತ ಸಮಸ್ಯೆಗಳ ಬಗೆಗೆ ಚಿಂತಿಸಿದ್ದಾರೆ. ಆದರೆ ಈ ಸಮಸ್ಯೆಗೆ ಇನ್ನಷ್ಟು ತೀವ್ರತೆ ಮತ್ತು ಗಂಭೀರತೆ ಪ್ರಾಪ್ತವಾಗಿದ್ದು ನವ್ಯೋತ್ತರ ಸಂದರ್ಭದಲ್ಲಿ. ದಲಿತ-ಬಂಡಾಯ ಕವಿಗಳ ಮುಖ್ಯ ಕಾಳಜಿ ಹಸಿವು, ಬಡತನ, ಸಾಮಾಜಿಕ ಪಿಡುಗುಗಳಾದ ಧರ್ಮ ಮತ್ತು ಜಾತಿ ಅಸಮಾನತೆಗಳೇ ಆಗಿವೆ. ಇವರು ಹಸಿವಿನ ಹಿಂದಿನ ಕಾರಣಗಳನ್ನು ತಮ್ಮ ಸಾಹಿತ್ಯಕೃತಿಗಳಲ್ಲಿ ಚಿತ್ರಿಸತೊಡಗಿದರು.

"ಭಾರತದ ಸಂದರ್ಭದಲ್ಲಿ ಸಾಮಾಜಿಕ ಸಂರಚನೆಯನ್ನು ಕುರಿತು ಆಲೋಚಿಸುವುದು ಎಂದರೆ ಶ್ರೇಣೀಕರಣದಿಂದಾಗಿ ಉಂಟಾಗಿರುವ ಅಸಮಾನತೆಯನ್ನು ಹಾಗೂ ಅದರ ಮೂಲದ ಹಸಿವು ಅವಮಾನಗಳನ್ನು ಕುರಿತು ವಿವೇಚಿಸುವುದು ಎಂದೇ ಅರ್ಥ. ಸಹಸ್ರಾರು ವರ್ಷಗಳಿಂದ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ವಂಚನೆ ದಬ್ಬಾಳಿಕೆಗಳಿಗೆ ಒಳಗಾಗಿರುವ ಬಹುಸಮುದಾಯಗಳು ಇಂದಿಗೂ ಪೂರ್ಣಪ್ರಮಾಣದಲ್ಲಿ ಅವುಗಳಿಂದ ಬಿಡುಗಡೆ ಪಡೆಯಲಾಗಿಲ್ಲ. ಈ ಸಮುದಾಯಗಳು ತಮ್ಮ ಜಾತಿಯ ಹೆಸರಿನಿಂದಲೇ ಅವಮಾನಕ್ಕೆ ಒಳಗಾಗಿದ್ದವು; ಎಲ್ಲ

ಸಂಪನ್ಮೂಲ ಸವಲತ್ತುಗಳಿಂದ ದೂರ ಇಡಲ್ಪಟ್ಟಿದ್ದವು. ಶೋಷಣೆ ವಂಚನೆಗಳ ಇಬ್ಬಾಯ ಗರಗಸಕ್ಕೆ ಸಿಕ್ಕಿ ಬಳಲಿದವು."[೨೫]

ಈ ಸಮುದಾಯಗಳು ಅಕ್ಷರ ಜಗತ್ತಿಗೆ ತೆರೆದುಕೊಂಡಂತೆ ತಮ್ಮ ಆಂತರ್ಯದಲ್ಲಿ ಹುದುಗಿದ್ದ ಶತಶತಮಾನಗಳ ನೋವು, ಅವಮಾನ ಮತ್ತು ಸಂಕಟಗಳನ್ನು ಹೊರಹಾಕತೊಡಗಿದವು. ಜೊತೆಗೆ ಈ ವ್ಯವಸ್ಥೆಯಲ್ಲಿರುವ ಅಸಮಾನತೆ ಮತ್ತು ಶೋಷಣೆಗಳ ಅರಿವಾಗತೊಡಗಿತು. ಇಂಥ ತೀವ್ರವಾದ ಸಂಕಟ ಮತ್ತು ಅವಮಾನಗಳನ್ನು ಬರಹಗಾರರು ತಮ್ಮ ಬರಹಗಳಲ್ಲಿ ಅಭಿವ್ಯಕ್ತಿಸತೊಡಗಿದರು. ಆದರೆ ಈ ನೋವು, ಅವಮಾನಗಳು ನಿಜವಾದ ಸಾಹಿತ್ಯವೇ ಎಂಬ ಪ್ರಶ್ನೆಗಳು ಎದುರಾದರೂ ಆಗ ರಚಿಸಲ್ಪಟ್ಟ ಸಾಹಿತ್ಯ ಮಾತ್ರ ಮನುಷ್ಯಕೇಂದ್ರಿತ ನೆಲೆಯಲ್ಲಿಯೇ ಅಭಿವ್ಯಕ್ತಗೊಳ್ಳತೊಡಗಿತು. ಆಗ ಮನುಷ್ಯನ ನೋವು, ಸಂಕಟ, ಅವಮಾನ ಮತ್ತು ಹಸಿವು ಸಾಹಿತ್ಯಕೃತಿಗಳಲ್ಲಿ ಕೇಂದ್ರವಸ್ತುವಾಗಿ ಸಶಕ್ತವಾಗಿ ಮೂಡಿಬಂದವು. ಉದಾಹರಣೆಗೆ ಬೇಂದ್ರೆಯವರ 'ತುತ್ತಿನ ಚೀಲ', 'ಅನ್ನಯಜ್ಞ', 'ಅನ್ನಾವತಾರ'; ಕುವೆಂಪು ಅವರ 'ಕಲ್ಕಿ,' ರಂ.ಶ್ರೀ. ಮುಗಳಿ ಅವರ 'ಅನ್ನ'; ದೇವನೂರು ಮಹಾದೇವ ಅವರ 'ಒಡಲಾಳ' ಮತ್ತು ಇತರ ಕತೆಗಳು; ಕುಂ. ವೀರಭದ್ರಪ್ಪ ಅವರ 'ಕತ್ತಲನು ತ್ರಿಶೂಲ ಹಿಡಿದ ಕತೆ' ಮತ್ತು 'ರತ್ನ' ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ'; ಬರಗೂರು ರಾಮಚಂದ್ರಪ್ಪ ಅವರ 'ಕ್ಷಾಮ'; ಬೆಸಗರಹಳ್ಳಿ ರಾಮಣ್ಣ ಅವರ 'ಜೀತ'; ಆರ್.ವಿ. ಭಂಡಾರಿ ಅವರ 'ಮೀನ್ ಪಳ್ದಿ'; ದಿನಕರ ದೇಸಾಯಿ ಅವರ 'ಬಂಗಾಲದ ಬರಗಾಲ'; ಬಿ. ಎಸ್. ಶ್ರೀಧರ ಅವರ 'ಉಪವಾಸ' ಇನ್ನೂ ಮುಂತಾದ ಪಠ್ಯಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ಹಸಿವಿನ ವಿವಿಧ ಆಯಾಮಗಳನ್ನು ಚಿತ್ರಿಸಿದ್ದಾರೆ.

ಜಾಗತೀಕರಣ ಸಂದರ್ಭದಲ್ಲಿ ಹಸಿವಿನ ತೀವ್ರತೆ ಇನ್ನಷ್ಟು ಹೆಚ್ಚಾಗಿದೆ. ಸಮಕಾಲೀನ ಕನ್ನಡ ಕವಿಗಳಿಗೂ ಹಸಿವಿನ ಪ್ರಶ್ನೆ ಪ್ರಧಾನ ವಸ್ತುವಾಗಿ ಕಂಡಿದೆ. ಆದ್ದರಿಂದ ಹಸಿವನ್ನು ಕುರಿತು ಅತಿ ಹೆಚ್ಚು ಕವನಗಳು ಬಂದಿವೆ.

"ನಾವು ತಿನ್ನುವುದಕ್ಕೆ
ಅನ್ನ ಕೇಳಿದೆವು
ಅವರು ಹುಳ ಬಿದ್ದ
ಅಕ್ಕಿ ಕೊಟ್ಟರು
ನಾವು ಹುಳ ದೇವರಿಗೆ ಕೊಟ್ಟು
ಅಕ್ಕಿಯನ್ನು ಕಣ್ಣಿಗೊತ್ತಿಕೊಂಡು
ಅನ್ನ ಮಾಡಿ ಉಂಡೆವು!
ಈಗ
ಅವರು ತಿನ್ನುವ ಅನ್ನಕ್ಕೇ
ಹುಳ ಬಿದ್ದಿದೆ

ಅವರು ಹುಳುಗಳನ್ನು
ನಿಷ್ಕಾರುಣ್ಯವಾಗಿ ಕೊಂದುಬಿಟ್ಟು
ಅನ್ನಕ್ಕಾಗಿ ದೇವರಿಗೇ
ಕೈ ಚಾಚುತ್ತಿದ್ದಾರೆ!"[೨೬]

ಈ ವ್ಯವಸ್ಥೆ ಸೃಷ್ಟಿ ಮಾಡಿರುವ ಶ್ರೇಣೀಕರಣ ವ್ಯವಸ್ಥೆ ಮತ್ತು ಅಸಮಾನತೆಗಳನ್ನು ಇಲ್ಲಿ ವಿಡಂಬಿಸಲಾಗುತ್ತಿದೆ. ಹಸಿವು ಈ ಕವಿತೆಯ ಕೇಂದ್ರಸ್ಥಾಯಿ. ಇಲ್ಲಿ ಎರಡು ಬಗೆಯ ವೈರುಧ್ಯಗಳ ಚಿತ್ರಣಗಳಿವೆ. ಒಂದು ತಿನ್ನುವುದಕ್ಕೆ ಅನ್ನ ಮತ್ತು ಉಡುವುದಕ್ಕೆ ಬಟ್ಟೆ ಇಲ್ಲದವರು; ಎರಡು ಎಲ್ಲಾ ಇದ್ದೂ ಇಲ್ಲದಂತೆ ಇರುವವರು. ಏನೂ ಇಲ್ಲದವರಿಗೆ ಇರುವ ಮಾನವೀಯತೆ, ಉಳ್ಳವರಿಗೆ ಇಲ್ಲವಾಗಿದೆ.

ಕೌಟುಂಬಿಕ ವಿಘಟನೆಯ ಚಿತ್ರಣವನ್ನು ಈ ಕವಿತೆಯಲ್ಲಿ ಕಾಣಬಹುದು. ಅಷ್ಟೇ ಅಲ್ಲ, ಈ ಕೌಟುಂಬಿಕ ಬಿರುಕು ಸಾಮಾಜಿಕ ಶ್ರೇಣೀಕರಣದ ನೈತಿಕ ವೈಫಲ್ಯವನ್ನು ಕೂಡ ಕಾಣಿಸುತ್ತದೆ. ಆದ್ದರಿಂದ ಇಲ್ಲಿ ಸಾಮಾಜಿಕ ಬಿಡುಗಡೆಗೆ ಈ ಕವಿತೆ ಹಾತೊರೆಯುತ್ತದೆ.

"ನಮಗೇನಾದರೂ ಕೊಡುತ್ತಲೇ
ನಮ್ಮಗಳ
ಜೀವ, ಮಾನ, ಪ್ರಾಣಗಳ
ಉಳಿಸಿದ ಅವರ
ನಾವು ಶಪಿಸುವುದೂ ತರವಲ್ಲ!"[೨೭]

ಎಂಬ ತಾಯ್ತನದ ಪ್ರೀತಿ ಅನನ್ಯವಾದದ್ದು. ಅಸಮಾನತೆ, ಶೋಷಣೆಯ ನಡುವೆಯೂ ಮಾನವೀಯತೆ ಇಂಥಲ್ಲಿ ಉಕ್ಕಿ ಹರಿಯುತ್ತಿದೆ. ಈ ಕವಿತೆ ಕೇವಲ ಸ್ವಮರುಕವನ್ನಷ್ಟೇ ವ್ಯಕ್ತಪಡಿಸಿದೆ.

ಹಸಿವಿನ ದೈನೇನಿ ಸ್ಥಿತಿಯನ್ನು ಮತ್ತೊಂದು ಕವಿತೆಯಲ್ಲಿ ತೀವ್ರವಾಗಿ ಕಾಣಿಸುತ್ತದೆ. ಇಲ್ಲಿ ಗಂಡಿನ ಅಸಹಾಯಕ ಸ್ಥಿತಿ, ಹೆಣ್ಣಿನ ನೋವು, ಯಾತನೆ ಎಲ್ಲವೂ ಇಲ್ಲಿ ಒಮ್ಮೆಲೆ ಕಣ್ಣಿಗೆ ರಾಚುತ್ತವೆ.

"ನನ್ನೂರಿನ ಗುಡಿಸಲುಗಳಲ್ಲಿ
ಒಲೆಯ ಮೇಲಿನ ಗಂಜಿ
ತಪ-ಪಕ ಕುಣಿಯುತ್ತದೆ
ಹಸಿದ ಜೀವಗಳು ಆಶ್ವಾಸನೆಗಳ
ತಂಗಾಳಿಯಲ್ಲಿ ಉಸಿರಾಡುತ್ತವೆ.

ಗಂಡ ನಿರ್ವೀರ್ಯನಾಗುತ್ತಾನೆ
ಹೆಂಡತಿ ಮುಗಿಲೆತ್ತರದ ಮಹಲುಗಳ ಕಡೆಗೆ

ಕತ್ತಲೊಡನೆ ಕರ್‍ರಗೆ ಕರಗಿ
ಕತ್ತಲಲ್ಲಿ ಕತ್ತಲಾಗುತ್ತಾಳೆ

ಮಗಳಿಗೆ ಮೊಲೆ ಮೂಡುತ್ತಿರುವಾಗಲೇ
ತಾಯಿ ಸೀರೆಯುಡಿಸುತ್ತಾಳೆ
ಹೆಂಡದಂಗಡಿಯ ಸಂದಿಗಳಲ್ಲಿ
ಹುಡುಗಿ ಕಾಣೆಯಾಗುತ್ತಾಳೆ”[೨೮]

ಈ ಮೂರು ಪಾತ್ರಗಳು ಒಂದೊಂದು ರೀತಿಯ ವ್ಯಥೆಯಾಗಿ ಚಿತ್ರಣಗೊಂಡಿವೆ. ಗಂಡನ ಅಸಹಾಯಕತೆಯು ಹೆಂಡತಿ ಮತ್ತು ಮಗಳ ಮೇಲೆ ಆಗುವ ಶೋಷಣೆಗೆ ಕಾರಣವಾಗಿದೆ. ಆದ್ದರಿಂದ ತಾಯಿ ಮಗಳಿಬ್ಬರೂ ಇದ್ದಕ್ಕಿದ್ದಂತೆ ಕಾಣೆಯಾಗುತ್ತಾರೆ.

ಹಸಿವು ಏನೆಲ್ಲವನ್ನು ಮಾಡಿಸುತ್ತದೆ ಎಂಬುದಕ್ಕೆ ಈ ಕವಿತೆ ಉದಾಹರಣೆ. ಮಾನ–ಮರ್ಯಾದೆ, ಸಮಾಜದ ನೀತಿ–ನಿಯಮಗಳಿಗಿಂತ ಹಸಿವು ನೀಗಿಸಿಕೊಳ್ಳುವುದು, ಹಸಿವಿನ ತೀವ್ರತೆ ತಾಳಲಾರದೆ ಕಳ್ಳತನ ಮಾಡಿರುವ, ಮೈಮಾರಿಕೊಂಡಿರುವ ಚಿತ್ರಣಗಳನ್ನು ಸಾಹಿತ್ಯ ಕೃತಿಗಳಲ್ಲಿ ಕಾಣಬಹುದಾಗಿದೆ. ದೇವನೂರರ ‘ಒಡಲಾಳ’, ಲಂಕೇಶರ ‘ರೊಟ್ಟಿ’, ನಿರಂಜನರ ‘ಕೊನೆಯ ಗಿರಾಕಿ’ಯ ನಿಲುವುಗಳೇ ಈ ಕವಿತೆಯ ಧೋರಣೆ ಕೂಡ ಆಗಿದೆ.

ಅನ್ನವಿಲ್ಲದೆ ಸಾಯುತ್ತಿರುವ ಮನುಷ್ಯರು ಒಂದು ಕಡೆಯಾದರೆ, ಅನ್ನವನ್ನು ತಿನ್ನುವುದಕ್ಕೆ ಆಗದೆ ಚೆಲ್ಲುತ್ತಿರುವ ಜನರು ಇನ್ನೊಂದು ಕಡೆ ಇದ್ದಾರೆ. ಇವರಿಬ್ಬರ ನಡುವಿನ ಸಾಮಾಜಿಕ ಅಸಮಾನತೆ ಮತ್ತು ಆರ್ಥಿಕ ಅಸಮಾನತೆಯ ನೆಲೆಗಳನ್ನು ಕಾಣುತ್ತಿದ್ದೇವೆ. ಹಸಿವಿನ ಕಲ್ಪನೆಯೇ ಇಲ್ಲದ ಜನರಿಗೆ ಊಟವಿಲ್ಲದೆ ಸಾಯುತ್ತಿರುವವರ ನೋವು, ಸಂಕಟ ಕಾಣುವುದಿಲ್ಲ. ಬಗೆ ಬಗೆಯ ಅಡುಗೆಗಳನ್ನು ಮಾಡಿಸಿ ಹೊಟ್ಟೆ ತುಂಬಿದವರಿಗಾಗಿಯೇ ಔತಣಕೂಟವನ್ನು ಶ್ರೀಮಂತ ವರ್ಗದ ಜನ ಏರ್ಪಡಿಸುತ್ತಾರೆ.

ಹಸಿವಿಲ್ಲದವರಿಗೆ ಊಟ ಕೊಟ್ಟರೆ ಏನು ಪ್ರಯೋಜನ? ಹಸಿವನ್ನು ನೀಗಿಸಿಕೊಳ್ಳಲಾಗದೆ, ದುಡಿಮೆಯಿಲ್ಲದೆ ಅಸಹಾಯಕತೆಯಿಂದ ಬಳಲುತ್ತಿರುವ ಜೀವಗಳಿಗೆ ಅನ್ನ ಹಾಕಿದರೆ ಪ್ರಯೋಜನವಾದೀತು. ಅನ್ನವನ್ನು ತಿನ್ನಲಾಗದೆ ಚೆಲ್ಲುತ್ತಿರುವ ಮನುಷ್ಯರನ್ನು ಕಂಡು ಸಿದ್ದುಯಾಪಲ ಅವರು ತಮ್ಮ ಕವಿತೆಯಲ್ಲಿ ಚಿತ್ರಿಸಿದ್ದಾರೆ.

“ಕರಳ ಜಗ್ಗಿ ಕಣ್ಣು ಕತ್ತಲಾಗಿ
ಬೀಳುವ ಹೊತ್ತು
ರಸ್ತೆ ಬದಿಯ ಭವ್ಯ ಬಂಗಲೆ
ಚಪ್ಪರದಡಿಯಲಿ ಡೊಳ್ಳು ಹೊಟ್ಟೆಯ

ಸಿರಿವಂತರು ನಯ ನಾಜೂಕಿನಿಂದ
ತಿನ್ನಲು ತಿಣುಕುವ ತಾಕತ್ತು"[೨೯]

ಶ್ರೀಮಂತರು ಔತಣಕೂಟವನ್ನು ಏರ್ಪಡಿಸಿದ ಸಂದರ್ಭದಲ್ಲಿ ಬಗೆ ಬಗೆಯ ಅಡುಗೆಯನ್ನು ಮಾಡಿಸಿ ನಯ ನಾಜೂಕಿನಿಂದ ಅನ್ನವನ್ನು ತಿನ್ನುತ್ತಾರೆ. ಶ್ರೀಮಂತರಿಗೆ ಇದೊಂದು ಬಗೆಯ Passion ಆಗಿದೆ. ಪೂರ್ತಿಯಾಗಿ ಅನ್ನವನ್ನು ತಿನ್ನುವುದು ಪ್ರತಿಷ್ಠೆಗೆ ಅಡ್ಡಿ ಎಂದು ಅವರು ಭಾವಿಸಿದಂತಿದೆ. ಶ್ರೀಮಂತರು ಹೀಗೆ ಅನ್ನವನ್ನು ಕಸಕ್ಕೆ ಹಾಕಿದರೆ, ಬಡವರಿಗೆ ಆ ಕಸವೇ ಸಂಪತ್ತಾಗಿ ಕಾಣಿಸುತ್ತದೆ. ಇದನ್ನು ಕವಿ ಹೀಗೆ ಹೇಳತ್ತಾರೆ.

"ಮನೆಯಂಗಳದ ಮೂಲೆಯಲಿ
ಚಿತ್ತಾರದ ಎಲೆಗಳಲಿ
ತಿಪ್ಪೆಯ ಉಪ್ಪರಿಗೆಯಲಿ
ನರ್ತಿಸುವ ಮೃಷ್ಟಾನ್ನ
ಹಸಿದ ಕಂಗಳ ಸಂಪತ್ತು

ಬೀದಿ ನಾಯಿಗಳು
ಕಾಕಾ ಎನ್ನುವ ಕಾಗೆಗಳು
ಸಂಭ್ರಮಿಸುವ ಅರೆಕ್ಷಣದಿ
ಬಾರಿತು ಕೂಸು ಅರೆಸೊತ್ತಿಗೆಗೆ"[೩೦]

ಹಸಿವೆಂಬ ರಾಕ್ಷಸ ಬಡವರ, ನಿರ್ಗತಿಕರ ಹೊಟ್ಟೆಯಲ್ಲಿ ನರ್ತಿಸುತ್ತಿರುತ್ತಾನೆ. ಶ್ರೀಮಂತರ ಮನೆಯಲ್ಲಿ ಮೃಷ್ಠಾನ್ನದ ದೇವತೆ ನಾಟ್ಯವಾಡುತ್ತಿರುತ್ತದೆ. ಅನ್ನ ಸಿಕ್ಕರೆ ಸಾಕು ಎನ್ನುವ ಬಡಜೀವಿಗಳು, ಶ್ರೀಮಂತರು ತಿಂದು ಎಸೆದ ಎಲೆಗಳನ್ನು ನಾಯಿ, ಕಾಗೆಗಳ ಜೊತೆ ಹಂಚಿಕೊಂಡು ತಿಪ್ಪೆಯಲ್ಲಿ ತಿನ್ನುತ್ತಿರುತ್ತವೆ. ಎಂಜಲಲೆಗಳನ್ನು ತಿನ್ನಲು ಕೆಲವೊಮ್ಮೆ-ನಾಯಿಗಳು ಕೂಡ ಬಿಡುವುದಿಲ್ಲ. ಅದರ ಹಸಿವು ಕೂಡ ಒಂದೇ ಅಲ್ಲವೆ. ಪಕ್ಷಿ-ಪ್ರಾಣಿಗಳಂತೆ ಹಸಿದ ಬಡಜೀವಗಳು, ಜೀವದ ಅನ್ನಕ್ಕಾಗಿ ಕಾಯುತ್ತಿರುತ್ತವೆ. ಹಸಿವಿನ ತೀವ್ರತೆಯನ್ನು ಕವಿ ಅಕ್ಷರದ ಮೂಲಕ ಇಲ್ಲಿ ವ್ಯಕ್ತಪಡಿಸಿದ್ದಾನೆ. ದಲಿತರಿಗೆ ಹಸಿವಿನ ಸಮಸ್ಯೆ ಕೇವಲ ಇಂದು ನೆನ್ನೆಯದಲ್ಲ; ಅದು ತಲಾ ತಲಾಂತರದ ಗೋಳಿನ ಕಥೆ. ಇಂಥ ವೇದನೆ ದಲಿತರನ್ನು ದಿನನಿತ್ಯ ಕಾಡುವ ಸಂಗತಿಯಾಗಿದೆ.

"ಹಸಿವೊಂದೇ ಧರಿಸಿದಾಭರಣ
ಸಾಲವೊಂದೇ ಪಿತ್ರಾರ್ಜಿತ ಆಸ್ತಿ
ಉಳಿಸಿಕೊಂಡೆವದನೆ ನಾವು
ತಲತಲಾಂತರದಿಂದ"[೩೧]

ಹಸಿವು ಮತ್ತು ಬಡತನವನ್ನು ತಮ್ಮ ಶಾಪವೆಂದು ಕರೆಯದೆ, ಸಕಾರಾತ್ಮಕ ನೆಲೆಯಲ್ಲಿ ಪರಿಭಾವಿಸುವ ಕವಿಯ ಮನೋಭಾವ ಇಲ್ಲಿ ಮೆಚ್ಚತಕ್ಕದ್ದು. ಅನಾದಿ ಕಾಲದಿಂದ ತಮ್ಮನ್ನು

ಹಿಂಬಾಲಿಸಿಕೊಂಡು ಬಂದ ಹಸಿವು ಮತ್ತು ಬಡತನಗಳು ದಮನಿತರ ಅಸಹಾಯಕ ಸ್ಥಿತಿಯನ್ನು ಹೇಳುತ್ತವೆ. ಹಾಗಾಗಿ ಕವಿಗೆ ತನ್ನ ಈ ಹಸಿವಿನ ಕ್ರೌರ್ಯ ಸಾಮಾನ್ಯವಾಗಿ ಕಾಣಿಸುತ್ತಿದೆ.

ಯಾರಿಗಾಗಿ ಕಾವ್ಯ ಬರೆಯುತ್ತೇವೆ ಎಂಬ ಪ್ರಶ್ನೆಗಳು ಪಂಪನ ಕಾಲದಿಂದಲೂ ಬಹುತೇಕ ಕವಿಗಳನ್ನು ಕಾಡಿವೆ. ಅದೇ ರೀತಿ ದಲಿತ ಕಾವ್ಯವು ಕಾವ್ಯದ ಉದ್ದೇಶ ಮತ್ತು ಪ್ರಯೋಜನವನ್ನು ಮತ್ತೆ ಮತ್ತೆ ಕೇಳತೊಡಗಿತು. ಹೀಗೆ ಕೇಳಿಕೊಳ್ಳುವುದು ಕವಿಯ ಸಾಮಾಜಿಕ ಜವಾಬ್ದಾರಿಯೂ ಆಗಿದೆ. ನಿಜವಾದ ಕವಿ ತನ್ನ ಕಾವ್ಯದ ಮೂಲಕವೇ ತಾನು ಯಾರಿಗಾಗಿ ಕಾವ್ಯ ಬರೆಯಬೇಕು ಎಂದು ಕೇಳಿಕೊಳ್ಳುತ್ತಾರೆ. ಇಂಥ ಪ್ರಶ್ನೆಗಳಿಗೆ ಬಹುತೇಕ ಕವಿಗಳು ಮುಖಾಮುಖಿಯಾಗಿದ್ದಾರೆ. ೭೦ರ ದಶಕದಿಂದ ಈಚೆಗೆ ಇಂಥ ಕಾವ್ಯಪ್ರಯೋಜನದ ಪ್ರಶ್ನೆಗಳ ತೀವ್ರತೆ ಇನ್ನಷ್ಟು ಹೆಚ್ಚಾಯಿತು. ಅಂಥದ್ದೇ ಒಂದು ಕವಿತೆ ಹೀಗಿದೆ:

"ನಾನು ಕವಿತೆ ಬರೆಯುತ್ತೇನೆ
ಹಸಿದ ಕಂಗಳ ತುಂಬ ಕೊತಕೊತ
ಕುದಿವ ಅನ್ನದ ಮರಿಕೆಯ
ಹೊತ್ತವರ ಬಗ್ಗೆ
ನಾನು ಕವಿತೆ ಬರೆಯುತ್ತೇನೆ
ಮಡಿ ಮೈಲಿಗೆಗಳ ಶಾಪಕ್ಕೆ
ಮನುವೆಂಬ ರಾಕ್ಷಸನ
ಕುರೂಪಗಳಿಗೆ ಖಡ್ಗಗಳಾಗಿ
ನರಳುವ ನಿತ್ಯ ಸುಮಂಗಲಿಯರ ಬಗ್ಗೆ"[೩೨]

ಈ ಮಾತುಗಳು 'ನಾನು ಸದಾ ಬೇಟೆಯ ಜೊತೆಗಿದ್ದೇನೆ, ಬೇಟೆಗಾರನ ಜೊತೆಗಲ್ಲ' ಎಂಬ ಜಂಬಣ್ಣ ಅಮರಚಿಂತ ಅವರ ಕಾವ್ಯದ ಸಾಲುಗಳನ್ನು ನೆನಪಿಗೆ ತರುತ್ತವೆ.

ಅನ್ನಕ್ಕಾಗಿ ನಿವೇದಿಸುವ ಇಲ್ಲಿನ ಮತ್ತೊಂದು ಕವಿತೆ ಆರ್ತನಾದದಿಂದ ಮೊರೆಯಿಡುತ್ತಿದೆ.

"ತುತ್ತು ನೀಡೇ ತಾಯಿ ಇಪ್ಪತ್ತು ದಿನವಾಯ್ತು
ಒಪ್ಪತ್ತಿನೂಟಕ್ಕೆ ಕಪ್ಪವನು ಕೊಟ್ಟೇನು
ಗುಟ್ಟೆಗೆಣಿಯಾಗಿ ಘಟ್ಟ ಬಯಲಾಗಿ
ಕಾಡೆಂಬ ನಾಡಿಗೆ ನೀರು ಬರುವುದು ಎಂತು!

ತುತ್ತು ನೀಡೇ ತಾಯಿ ಇಪ್ಪತ್ತು ದಿನವಾಯ್ತು
ಒಪ್ಪತ್ತಿನೂಟಕ್ಕೆ ಕಪ್ಪವನು ಕೊಟ್ಟೇನು
ಹಸಿವಿನಂಗಳದಲ್ಲೆ ಜೀವ ಬಿಟ್ಟೇನು!"[೩೩]

ಹಸಿವನ್ನು ನೀಗಬೇಕಾದರೆ ಮನುಷ್ಯ ಏನು ಮಾಡಬೇಕು ಎಂದು ಕವಿ ಇಲ್ಲಿ ಶೋಧಿಸಲೆತ್ನಿಸಿದ್ದಾನೆ. ಅದಕ್ಕಾಗಿಯೇ 'ಕಾಡೆಂಬ ನಾಡಿಗೆ ನೀರು ಬರುವುದು ಎಂತು! ಎಂದು

ಶತಶತಮಾನಗಳ ಬಾಯಾರಿಕೆಯ ನೀಗಿಸಲು ಕವಿ ಆಸೆಗಣ್ಣಿನಿಂದ ನಿರೀಕ್ಷೆಯಲ್ಲಿದ್ದಾನೆ. ಬರ ಕವಿಯನ್ನು ತೀವ್ರವಾಗಿ ಕಾಡಿದೆ. ಆದ್ದರಿಂದಲೇ ಎಲ್. ಹನುಮಂತಯ್ಯ ಅವರು ಹಸಿವಿನ ಬಗ್ಗೆ ಈ ಕವಿತೆಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿಸುತ್ತಾರೆ. ಅವ್ವ ಮತ್ತು ಅಪ್ಪನ ಬಗ್ಗೆ ಅವರು ಬರೆದಿರುವ ಕವಿತೆಗಳಲ್ಲಿಯೂ ಬಡತನ ಮತ್ತು ಹಸಿವು ಕೇಂದ್ರಸ್ಥಾಯಿಯಾಗಿದೆ ಎಂಬುದನ್ನು ಇಲ್ಲಿ ನೆನೆಯಬಹುದು.

ಜಾಗತಿಕ ಮಾರುಕಟ್ಟೆಯ ಆರ್ಭಟ ಮತ್ತು ಆತಂಕಗಳ ನಡುವೆ ಕವಿ ವಿಚಿತ್ರವಾದ ತಳಮಳಕ್ಕೆ ಒಳಗಾಗಿದ್ದಾನೆ. ಅದಕ್ಕೆ 'ಕೊಲ್ಲದಿರಿ ಜೀವಗಳನ್ನು ಮಣ್ಣಿನ ಬುತ್ತಿಯಲ್ಲಿ ಎಲ್ಲರಿಗೂ ಅನ್ನವಿದೆ' ಎಂದು ಮೊರೆಯಿಡುತ್ತಿದ್ದಾನೆ. ಅಷ್ಟೇ ಅಲ್ಲ, ಅನ್ನವನ್ನು ಕಸಿಯದಿರಲು ಮಣ್ಣಿಡಿದು ಪ್ರಾರ್ಥಿಸುತ್ತಾನೆ. ಹಸಿವು ಕಿಚ್ಚಿನ ರೀತಿಯಲ್ಲಿ ಮನುಷ್ಯನನ್ನು ಸುಡತೊಡಗುತ್ತದೆ. ಎದೆಯಾಳದ ವೇದನೆ, ಅವಮಾನಗಳನ್ನೂ ಲೆಕ್ಕಿಸದೆ ಅವನ ಒಡಲನ್ನೂ ಹಿಂಡಿಕೊಲ್ಲುತ್ತದೆ. ಇಂಥ ಎದೆಯಾಳದ ನೋವಿನಲ್ಲೂ ಕವಿ 'ಅನ್ನವೆ, ಅಧಿಕಾರಿಯಾಗಬೇಡ' ಎಂದು ಎಚ್ಚರಿಸುತ್ತಲೇ ಇಥಿಯೋಪಿಯಾದ ಮಕ್ಕಳ ಬಗೆಗೆ ಪ್ರೀತಿಯ ಕಣ್ಣೀರುಗರೆಯುತ್ತಾರೆ. ಇಂಥ ಜೀವನಪ್ರೀತಿ, ಮಾನವೀಯ ಅಂತಃಕರಣ ಕವಿ ಹೃದಯಕ್ಕಲ್ಲದೆ ಇನ್ನೊಂದಿಗೆ ಇರಲು ಸಾಧ್ಯವೇ?.

"ಅನ್ನವೆ, ಅಧಿಕಾರಿಯಾಗಬೇಡ
ಮಾರುವ, ಮಾಲೀಕನಾಗಬೇಡ
ಧಣಿಯಾಗಬೇಡ, ದುಡಿಯುವವರ
ಜೀವನಾಡಿಯಾಗು

ಅನ್ನವೆಂಬ ಜೀವವೆ
ನಿನ್ನೆದೆಯ ಮೇಲೆ ಸದಾ
ಹಸಿದವರ ಹೆಸರಿರಲಿ
ಕವಿಯದು ಕೊನೆಯದಾಗಿರಲಿ"[೩೪]

ಕವಿಗೆ ಇಡೀ ಮಾನವಸಂಕುಲದ ಬಗೆಗೆ ಇರುವ ಕಾಳಜಿ ಮತ್ತು ಪ್ರೀತಿ ಮೆಚ್ಚುವಂತದ್ದು. ಇಂದಿನ ಬಿಕ್ಕಟ್ಟು ಮತ್ತು ವ್ಯಕ್ತಿನಿಷ್ಠೆ ಬದುಕಿನ ಸಂದರ್ಭದಲ್ಲಿ ಮಾನವ ಪರವಾದ ಸಮಷ್ಟಿ ಪ್ರಜ್ಞೆಯ ಅವಶ್ಯಕತೆ ತುಂಬಾ ಇದೆ. "ಜಾಗತಿಕ ಮಾರುಕಟ್ಟೆಯ ಮೇಲೆ ಬಂಡವಳಿಗರ ಹಿಡಿತ ಬಿಗಿಯಾದಷ್ಟೂ ಬಡರಾಷ್ಟ್ರಗಳ ಬಡ ಸಮುದಾಯಗಳ ಬಡಜನರ ಗೋಳು ಅರಣ್ಯರೋದನ ವಾಗುತ್ತದೆ. ಹಿಂದೆಂದಿಗಿಂತ ಇನ್ನು ಮುಂದೆ ಹಸಿವಿನಿಂದ ಸಾಯುವವರ ಸಂಖ್ಯೆ ಅಧಿಕ ಆಗುವ ಅಪಾಯ ಕಂಡುಬರುತ್ತಿದೆ. ಈ ಬಗ್ಗೆ ಅರಿವುಳ್ಳವರೆಲ್ಲ ಆಲೋಚಿಸಬೇಕಾದ, ಇದರ ನಿವಾರಣೆಗಾಗಿ ಪ್ರೀತಿ ಮಾರ್ಗಗಳನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ. ಬಂಡವಳಿಗರು ನಡೆಸಲಿರುವ ಹಸಿವೆಂಬ ನರಮೇಧದಿಂದ ಸಂಪದ್ಭರಿತ ಬಡರಾಷ್ಟ್ರಗಳನ್ನು ಬಡಜನತೆಯನ್ನು

ರಕ್ಷಿಸಬೇಕಿದೆ. ಇದಕ್ಕಾಗಿ ದೇಶ ದೇಶಗಳ ನಡುವಿನ ವಿದೇಶಾಂಗ ನೀತಿಗಳಲ್ಲಿ ಎಚ್ಚರದ ಬದಲಾವಣೆಗಳು ಆಗಬೇಕಾದ ತುರ್ತು ಇದೆ."[೨೫]

ವೀರಣ್ಣ ಮಡಿವಾಳರ ಅವರು ಸಹ ಹಸಿದ ಕೊರಳಿಗೆ ಕೊರಳು ಸೇರಿಸಲಿ ಈ ವ್ಯವಸ್ಥೆಯ ಅಸಮಾನತೆಯ ವಿರುದ್ಧ ಪ್ರತಿರೋಧಿಸುವ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. 'ಕೇರಿ ಮರೆತ ಊರಿಗೆ' ಎಂಬ ಕವಿತೆಯಲ್ಲಿ 'ಹಸಿವು ನಮಗೆ ಮಾತ್ರ ತಟ್ಟುವ ಸಹಜ ಸಾಂಕ್ರಾಮಿಕ ರೋಗವೆಂದು ವಿಷಾದಿಸುತ್ತಾರೆ. ಅಷ್ಟೇ ಅಲ್ಲ. ಈ ಹಸಿವಿನ ವಿರುದ್ಧ ಪ್ರತಿರೋಧಿಸುವ ತಂತ್ರದ ಬಗ್ಗೆಯೂ ಯೋಚಿಸುತ್ತಾರೆ.

"ಪ್ರತಿರೋಧದ ಹಾದಿಯಲ್ಲಿ ಹಸಿದಷ್ಟೂ ದನಿ ಏರುತ್ತದೆ.
ಹಾಕಿದಷ್ಟು ಹೆಜ್ಜೆ ಸಮತೆಯ ಗಮ್ಯ ಹತ್ತಿರವಿದೆ
ನಾವು ಪರದಾಡುತ್ತಿರುವುದು ಇಲ್ಲೇ ಎಲ್ಲೋ ಮರೆಯಾದ
ಅಂತಃಸ್ಫೂರ್ತಿಯ ನಮ್ಮದೇ ಹಾಡಿಗೆ
ಆಗ ಕೊರಳಿಗೆ ಕೊರಳು ಸೇರಿ ಕೇಳುತ್ತಿದ್ದವು ಶೋಷಣೆಗೆ
ಈಗ ಕೊರಳಿಗೇ ಕೊರಳು ನರಳುತ್ತಿವೆ ಸ್ವಾರ್ಥಪೋಷಣೆಗೆ
ನಾವು ಮತ್ತೆ ಮತ್ತೆ ಕನಿಕರಿಸುತ್ತೇವೆ
ಸಿಂಹಾಸನವೇರಿ ಕೇರಿ ಮರೆತ ಊರಿಗೆ"[೨೬]

ಊರುಕೇರಿಯ ಈ ಅವಸ್ಥೆಗೆ ಸಿಂಹಾಸನವನ್ನೇರಿ ಅಧಿಕಾರವನ್ನು ನಡೆಸುತ್ತಿರುವ ರಾಜಕಾರಣಿಗಳೇ ಪ್ರಮುಖ ಕಾರಣಕರ್ತರು ಎಂಬುದು ಕವಿಯ ನಿಲುವು. ಊರಿನ ಅಮಾಯಕ ಜನರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಳ್ಳುವ ರಾಜಕಾರಣಿಗಳು ಜನರನ್ನು ಇನ್ನೂ ಹಸಿವು, ಬಡತನದಲ್ಲೇ ಇರಿಸಿದ್ದಾರೆ. ಈ ವ್ಯವಸ್ಥೆಯ ಅಸಮಾನತೆಗಳ ವಿರುದ್ಧ ಪ್ರತಿರೋಧಿಸಲಾಗದ ಅಸಹಾಯಕ ಸ್ಥಿತಿಗೆ ಜನರನ್ನು ದೂಡಲಾಗಿದೆ. ಇದರ ಜೊತೆಗೆ ಇನ್ನೂ ಮುಖ್ಯವಾದ ವಿಷಯದ ಬಗೆಗೆ ಕವಿಗೆ ತೀವ್ರವಾದ ವಿಷಾದ ಮತ್ತು ಸಿಟ್ಟಿದೆ. ಏನೆಂದರೆ ನಮ್ಮ ಚಳವಳಿ ಮತ್ತು ಹೋರಾಟಗಳು ಸ್ವಾರ್ಥ ಪೋಷಣೆಯಲ್ಲಿ ತೃಪ್ತರಾಗಿರುವುದು. ಇದರ ಬಗ್ಗೆ ಕವಿ ಮರುಕಪಡುತ್ತಾನೆ. ಇಂಥ ಕ್ರೂರವಾದ ಹಸಿವಿನ ಬಗ್ಗೆ ಅನೇಕರು ತಮ್ಮ ಕೃತಿಗಳಲ್ಲಿ ಬರೆದಿದ್ದಾರೆ. ಆ ಮೂಲಕ ಹಸಿವಿನ ಕಾರಣಗಳ ಬಗ್ಗೆ ಹುಡುಕಾಟ ಮಾಡಲು ಪ್ರಯತ್ನಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ "ಈ ಕುರಿತು ಅಧ್ಯಯನ ನಡೆಸಿದ ಅಮರ್ತ್ಯ ಸೆನ್ ಹಸಿವಿನ ಕಾರಣವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದಾರೆ. ಕ್ಷಾಮ ಪ್ರಾಕೃತಿಕ ಕಾರಣದಿಂದ ಆಗುವುದಿಲ್ಲ. ಅದು ಮಾನವ ನಿರ್ಮಿತ. ಕ್ಷಾಮದಲ್ಲಿ ಹಸಿವಿನ ಸಾವುಗಳಾಗುವುದು ಸಾಮಾಜಿಕ, ರಾಜಕೀಯ ವೈಫಲ್ಯ ಅಥವಾ ನ್ಯೂನತೆಯಿಂದ ಎಂದು ಅವರು ತೋರಿಸಿದ್ದಾರೆ. ಅಂದರೆ ಹಸಿವನ್ನು ಇಲ್ಲಿ ಉದ್ದೇಶ ಪೂರ್ವಕವಾಗಿ ಸೃಷ್ಟಿಸಲಾಗುತ್ತದೆ. ಆಳುವ ವರ್ಗದ ತಪ್ಪಾದ ಅಭಿವೃದ್ಧಿನೀತಿ, ಕೃಷಿನೀತಿ, ಆಹಾರನೀತಿ ಮತ್ತು ಲಾಭಕೋರತನದಿಂದಾಗಿ ಜನಸಾಮಾನ್ಯರ ಬದುಕು

ದುಸ್ಥರವಾಗಿದೆ"[೨೭] ಈ ಕಾರಣದಿಂದ ಬಡತನ, ಹಸಿವು, ದಾರಿದ್ರ್ಯಗಳು ಹಾಗೆ ಮುಂದುವರಿಯುತ್ತಿದ್ದು, ಬಡವರು ಬಡವರಾಗಿಯೇ ಇರುವ ಸ್ಥಿತಿ ನಿರ್ಮಾಣವಾಗಿದೆ.

ಪ್ರತಿಭಾ ನಂದಕುಮಾರ್ ಅವರ ಬರಹದ ಶೈಲಿಯಲ್ಲಿ ಗದ್ಯವನ್ನು ಮಥಿಸಿ ಕಾವ್ಯ ರೂಪಕ್ಕೆ ತರುವ ಸಂವೇದನಾಶೀಲತೆಯನ್ನು ಕಾಣಬಹುದು. ಅಷ್ಟೇ ಅಲ್ಲ, ಅವರು ಬಳಸುವ ಭಾಷೆ, ಕಾವ್ಯರಚನಾ ಶೈಲಿ ಎರಡೂ ಭಿನ್ನವಾಗಿವೆ. ಕವಿತೆಯನ್ನು ಓದುತ್ತಿರುವಾಗ ಅದು ಗದ್ಯರೂಪದಲ್ಲಿದೆ ಎಂದೆನಿಸಿದರೂ ಕಾವ್ಯದ ಅನುಭವ ಮೇಳೈಸಿರುತ್ತದೆ.

ಪ್ರತಿಭಾ ನಂದಕುಮಾರ್ ಅವರದು ಅತ್ಯಂತ ಭಿನ್ನವಾದ ಹಾಗೂ ಅನನ್ಯವಾದ ಕಾವ್ಯ ಮಾರ್ಗವಾಗಿದೆ. ಇವರು ಮುಖ್ಯವಾಗಿ ಸ್ತ್ರೀವಾದಿ, ಬಂಡಾಯ ಹಾಗೂ ವರ್ತಮಾನದ ಸಮಸ್ಯೆಯನ್ನು ಕಾವ್ಯದ ಮೂಲಕ ಅಭಿವ್ಯಕ್ತಿಸಿದ್ದಾರೆ. ಇವರು ಕಾವ್ಯ ಬರೆಯುವಾಗ ಸಮಾಜದ ಹೊರಗೆ ನಿಂತು ಬರೆಯುವುದಿಲ್ಲ. ಸಮಾಜದಲ್ಲಿ ತಾವು ಒಬ್ಬರಾಗಿ ಅಲ್ಲಿಯ ನೋವುಗಳನ್ನು ಅನುಭವಿಸಿ ಸಂಕಟವನ್ನು ತಮ್ಮದಾಗಿಸಿಕೊಂಡು ಕಾವ್ಯವನ್ನು ರಚನೆ ಮಾಡುತ್ತಾರೆ. ಅದಕ್ಕೆ ಇವರ ಕಾವ್ಯದಲ್ಲಿ ದಟ್ಟವಾದ ಮಾನವಪ್ರಜ್ಞೆ ಸೃಜಿಸಿದೆ.

ಹಸಿವು, ಬಡತನ, ಯುದ್ಧದ ಹಿಂಸೆ, ಅಧಿಕಾರಶಾಹಿಯ ಕ್ರೌರ್ಯ, ಜನಸಾಮಾನ್ಯರು ದಿನನಿತ್ಯ ಅನುಭವಿಸುವ ಯಾತನೆ, ಮಾನಭಂಗ, ಶೋಷಣೆಗಳು, ಪರಿಸರಪ್ರಜ್ಞೆ, ನಗರದ ಆಧುನಿಕ ಸೌಲಭ್ಯಗಳು, ಜಾಗತೀಕರಣ, ಕೋಮುವಾದ, ಧಾರ್ಮಿಕ ಸಂಘರ್ಷಗಳ ನಡುವಿನ ರಾಜಕಾರಣ ಹೀಗೆ ಹಲವಾರು ವಿಷಯಗಳನ್ನು ವಸ್ತುವಾಗಿಸಿಕೊಂಡು ಕಾವ್ಯವನ್ನು ರಚಿಸುವ ಮೂಲಕ ಈ ವ್ಯವಸ್ಥೆಗೆ ಪ್ರತಿಕ್ರಿಯಿಸಿದ್ದಾರೆ. ಅವರೇ ಹೇಳುವ ಹಾಗೆ–

"ನಾವು ಎಷ್ಟೋ ಸಲ ಮನಸ್ಸಿನಲ್ಲಿರುವುದನ್ನು ಬಿಚ್ಚಿಡುವುದಿಲ್ಲ. ಮುಚ್ಚಿಡುವುದಕ್ಕೆ ಭಾಷೆಯನ್ನು ಬಳಸುತ್ತಿರುತ್ತೇವೆ. ದೇಹದ ಅಂಗಾಂಗಗಳ ಹೆಸರು ಹೇಳಲು ಭಯ; ಅದನ್ನು ಕನ್ನಡದಲ್ಲಿ ಹೇಳಲು ಸಂಕೋಚ, ಸಂಸ್ಕೃತದಲ್ಲಿ ಹೇಳಿದರೆ ಪರವಾಗಿಲ್ಲ."[೩೮] ಸಾಹಿತ್ಯ ಈ ಭಯವನ್ನು ಕಳೆದುಕೊಳ್ಳುವುದಕ್ಕೆ ಸಹಾಯ ಮಾಡಬೇಕು ಎನ್ನುವುದು ಪ್ರತಿಭಾ ನಂದಕುಮಾರ್ ಅವರ ವಾದ. ಅವರ ಈ ನಿಲುವನ್ನು ಅವರದೇ ಕಾವ್ಯ ಭಾಗಶಃ ಕಾರ್ಯಗತಗೊಳಿಸಿದೆ.

ಹೆಣ್ಣಿನ ಅಂಗಾಂಗಗಳನ್ನು ತಮ್ಮ ಕಾವ್ಯದಲ್ಲಿ ಬಳಸುವ ಮೂಲಕ ಅದರ ಎಲ್ಲಾ ಸಂಕೀರ್ಣತೆಗಳೊಂದಿಗೆ ಚಿತ್ರಿಸುವ ರೂಪಕಗಳಾಗಿ ಮರುಹುಟ್ಟು ಪಡೆಯುತ್ತದೆ. ಗಂಡುಹೆಣ್ಣುಗಳ ಸಂಬಂಧ ಮಹಿಳೆಯರ ಸ್ವಾತಂತ್ರ್ಯದ ಬಗ್ಗೆ ಕವಯಿತ್ರಿ ದಿಟ್ಟತನವಾಗಿ ಮಾತನಾಡುತ್ತಾರೆ. ಪ್ರತಿಭಾ ನಂದಕುಮಾರ್ ಅವರ ಕಾವ್ಯದ ನಿರಂತರ ವಸ್ತು ಹೆಣ್ಣಿನ ಬದುಕು ಮತ್ತು ವ್ಯಕ್ತಿತ್ವಗಳೆರಡನ್ನು ಆವರಿಸಿರುವ ಹಿಂಸೆಯ ಹುಡುಕಾಟಗಳಿಂದ ಕೂಡಿದೆ. ಜೊತೆಗೆ ಆಧುನಿಕ ಹೆಣ್ಣಿನ ಇಕ್ಕಟ್ಟುಗಳು ಹಾಗೂ ಹಿಂಸೆಯನ್ನು ಮಾರ್ಮಿಕವಾಗಿ ತಮ್ಮ ಕವಿತೆಯಲ್ಲಿ ಚಿತ್ರಿಸಿದ್ದಾರೆ. ಪ್ರತಿಭಾ ನಂದಕುಮಾರ್ ಅವರ ಕಾವ್ಯದಲ್ಲಿ ಎಲ್ಲಾ ಸ್ತರದ ಸ್ತ್ರೀಯರನ್ನು ನಾವು ಕಾಣಬಹುದಾಗಿದೆ.

ಪ್ರತಿಭಾ ನಂದಕುಮಾರ್ 'ಗೃಹಿಣಿ ಗೀತೆ' ಎಂಬ ಒಂದು ಕವನ ರಚಿಸಿದ್ದಾರೆ. ವಿಶೇಷವೆಂದರೆ ಅದರ ಹೆಚ್ಚು ಕವನಗಳು ಗೃಹಿಣಿ ಗೀತೆಗಳೇ ಆಗಿವೆ. ಆರಂಭದಿಂದಲೇ ಸ್ತ್ರೀ ಅಸ್ಮಿತೆಯನ್ನು ಕುರಿತು ದಿಟ್ಟವಾಗಿ, ನಿಷ್ಠುರತೆಯಿಂದ ತಮ್ಮ ಕವನಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

"ನಾನೊಬ್ಬನ ಪತ್ನಿ
ಮೂರು ಮಕ್ಕಳ ತಾಯಿ
ಇನ್ನೂ ನನ್ನ ಸೀರೆ ಕುಪ್ಪಸ
ಬಟ್ಟು ಬೈತಲೆ
ಎಲ್ಲ ಅತ್ತೆ ಮಾವರ ಮರ್ಜಿ

ನನಗೆ ಅದೂ ಮನೆಯಲ್ಲ
ನನ್ನದೊಂದು ಮನೆಯೇ ಇಲ್ಲ.
ಆದರೂ ಮನೆ ಬಿಟ್ಟು ಹೋದರೆ
ಮನೆಯ ಮಾನ ಕಳೆಯುವ ಹೆದರಿಕೆ
ಹಾಗಾಗಿ ಇದ್ದಲ್ಲೆ ಇರುತ್ತೇನೆ
ಹಾಗೇ, ಕೆಸರೊಳಗೆ ಮುಳುಗುತ್ತಾ"[೬೯]

'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎನ್ನುವಂತೆ ಹೆಣ್ಣಿಗೆ ತವರುಮನೆಯಲ್ಲಿಯೂ ಜಾಗವಿಲ್ಲದೆ ಗಂಡನ ಮನೆಯಲ್ಲಿಯೂ ತನ್ನ ಅಸ್ತಿತ್ವಕ್ಕಾಗಿ ಪ್ರತಿದಿನ ನಡೆಸುವ ಹೋರಾಟವನ್ನು ಪ್ರಸ್ತುತ ಕವನದಲ್ಲಿ ಚಿತ್ರಿಸಿದ್ದಾರೆ. ಈ ಕವಿತೆಯ ನಾಯಕಿ ತಾನು ಕಾಲಿಟ್ಟ ದಾರಿಯಿಂದ ಹೆಜ್ಜೆ ಹಿಂತೆಗೆಯಲಾಗದ ನೋವುನಲಿವುಗಳ ಜೊತೆಯಲ್ಲಿಯೇ ತನ್ನ ದಾರಿಯನ್ನು ಹುಡುಕಾಟ ಮಾಡಿಕೊಳ್ಳುತ್ತ ಮುನ್ನುಗ್ಗುತ್ತಾಳೆ.

'ಗೃಹಿಣಿ ಗೀತೆ' ಪದ್ಯದಲ್ಲಿ ಹೆಣ್ಣು ವಿವಿಧ ಪಾತ್ರಗಳ ಮೂಲಕ ತನ್ನ ಕೆಲಸವನ್ನು ಪ್ರಬಲವಾಗಿ ನಿರ್ವಹಿಸುವುದನ್ನು ಚಿತ್ರಿಸಿದ್ದಾರೆ. ಗೃಹಿಣಿಯಾದವಳು ತಾಯಿಯಾಗಿ, ಹೆಂಡತಿಯಾಗಿ ಮನೆಯ ಕೆಲಸ ಮತ್ತು ಸಂಸಾರದ ಜವಾಬ್ದಾರಿಯ ಜೊತೆಗೆ ಮಕ್ಕಳ ಲಾಲನೆ ಪಾಲನೆಯನ್ನೂ ಮಾಡಬೇಕಾಗಿದೆ. ಅಂಥ ಹೆಣ್ಣಿನ ಈ ಕವಿತೆಯಲ್ಲಿ ಹೀಗೆ ಚಿತ್ರಣಗೊಂಡಿದೆ.

"ಮನೆಮಂದಿಗೆ ಎಲ್ಲಕ್ಕಿಂತ ಉತ್ತಮ ಹಲ್ಲುಪುಡಿ
ಆರಿಸಿ ಘಮ್ಮೆನ್ನುವ ಸೋಪಿನಲ್ಲಿ ಮಿಂದು
ಹುಬ್ಬೇರುವ ತಾಜಾ ಪೌಡರು ಚಿಮುಕಿಸಿ
ಶೇಕಡಾ ಇಪ್ಪತ್ತು ರಿಯಾಯಿತಿಯ ಸೀರೆ ಉಟ್ಟವಳೇ"[೭೦]

ಇಲ್ಲಿ ಹೆಣ್ಣಿನ ಗೃಹಸ್ಥ ಬದುಕಿನ ಚಿತ್ರಣವಿದೆ. ಎಷ್ಟೇ ನೋವು, ಆಯಾಸ ಒತ್ತಡಗಳಿದ್ದರೂ ತನ್ನ ಕೆಲಸವನ್ನು ನಿಷ್ಠೆಯಿಂದ ಮಾಡುತ್ತ, ಮನೆಯವರನ್ನೆಲ್ಲ ಪ್ರೀತಿಯಿಂದ ಕಾಣುತ್ತ ಸದಾ

ನಗುತ್ತಿರುವವಳು ತನ್ನ ಮನಸ್ಸಿನ ನೋವನ್ನು ಯಾರಿಗೂ ತೋರ್ಪಡಿಸದೆ ನಿಭಾಯಿಸುವ ಕಲೆ ಸ್ತ್ರೀಯರಿಗೆ ಇದೆ. ಎಲ್ಲಕ್ಕಿಂತ ಮುಖ್ಯವಾಗಿ ತಾನೊಬ್ಬ ಕವಯಿತ್ರಿಯಾಗಿ ತನ್ನ ನೋವು, ಸಂಕಟಗಳನ್ನು ಇಲ್ಲಿ ಬಿಚ್ಚಿಡುತ್ತಿದ್ದಾರೆ.

"ನಡುರಾತ್ರಿ ಮಗಳೆದ್ದು
ಹುಡುಕುತ್ತ ಬಂದಾನ
ಕವನ ರಚಿಸುತ್ತಿದ್ದ ಕೈ ಕ್ಷಣ ನಿಂತಿತು
ಮುದ್ದನ್ನಿತ್ತು ರಮಿಸಿ ತಟ್ಟಿ ಮಲಗಿಸಿತು
ಮತ್ತೆ ಬಂದು ಕೂತರೆ
ಕವನ ನಿದ್ದೆ ಹೋಗಿತ್ತು"[೪೧]

ಬೆಳಿಗ್ಗೆಯಿಂದ ಸಂಜೆಯವರೆಗೆ ಸಂಸಾರಕ್ಕಾಗಿ ದುಡಿದು ಕವನ ಗೀಚುತ್ತಿದ್ದಾಗ ಮತ್ತೆ ಸಂಸಾರದ ಗೋಜಲಿಗೆ ಸಿಕ್ಕಿ ಮನೆಗಷ್ಟೇ ಸೀಮಿತವಾಗುತ್ತಾಳೆ ಎಂಬುದು ಈ ಕವಿತೆಯ ಮುಖ್ಯ ಆಶಯವಾಗಿದೆ. ಜೋಗತಿ ಎನ್ನುವ ಕವನದಲ್ಲಿ ಒಂದು ಹೆಣ್ಣಿನ ವಿವಾಹದ ಕನಸುಗಳನ್ನು ತನ್ನ ಬದುಕಿನ ಪ್ರಮುಖ ಘಟ್ಟವಾದ ಮದುವೆ, ಬಳೆ, ಕಾಡಿಗೆ, ಹಲ್ಲು ಮುರಿದ ಬಾಚಣಿಗೆ ಇತ್ಯಾದಿ ಮುತ್ತೈದೆಯರ ಸಂಕೇತಗಳನ್ನು ಹೇಳುವ ಮೂಲಕ ಜೋಗತಿಯರಾಗುವ ಸ್ತ್ರೀಯರನ್ನು ಚಿತ್ರಿಸಿದ್ದಾರೆ. ಜೊತೆಗೆ ಜೋಗತಿಯರ ಮನೋಲೋಕದ ತಲ್ಲಣಗಳನ್ನು ಕುರಿತು ಹೇಳುತ್ತಿದ್ದಾರೆ.

"ಬಿಟ್ಟು ಬಂದೆ
ಒಡೆದೆ ಬಳೆ ಚೂರು
ಮುಗಿದ ಸಾದು ಕಾಡಿಗೆ ಡಬ್ಬಿ
ಹಲ್ಲು ಮುರಿದ ಬಾಚಣಿಕೆ"[೪೨]

"ಮುತ್ತೈದೆ ಹಟ್ಟಿಯ ಮುತ್ತಿನ
ಚಪ್ಪರದಲ್ಲಿ ಪಗಡೆ ಆಡುವ ತಾಯಿ
ಕರೆದು ಕೊಟ್ಟಳು ಕೆನೆ ಹಾಲು
ಒಳಗಿಳಿಯುವಾಗ ಗಂಟಲು ಕಟ್ಟೆ
ಅಲ್ಲೇ ಬಿಟ್ಟು ಬಂದೆ"[೪೩]

"ಜೋಗುಳ ಲಾಲಿ ತೊಟ್ಟಿಲು
ಸವೆದ ಬೆಳ್ಳಿ ಬಳಲೆ."[೪೪]

ಮುತ್ತೈದೆಯನ್ನು ಕಂಡಾಗ ಜೋಗತಿಗಾಗುವ ವೇದನೆಯನ್ನು ಕವಯಿತ್ರಿ ಸೂಕ್ಷ್ಮವಾಗಿ ಗ್ರಹಿಸಿದ್ದಾರೆ, ತನ್ನ ಸ್ಥಿತಿಗೆ ಕಾರಣವಾದ ಈ ವ್ಯವಸ್ಥೆಯ ಬಗ್ಗೆ ಪ್ರತಿರೋಧವನ್ನು ತಾಳುತ್ತ, ವಾಸ್ತವ ಬದುಕಿನ ಕೌಟುಂಬಿಕ ಚಿತ್ರಗಳನ್ನು ತನ್ನಲ್ಲೆ ಅಡಗಿಸಿಕೊಳ್ಳುವ ಜೋಗತಿಯ ಪಾತ್ರ ಮುಗ್ಧವಾಗಿ ಚಿತ್ರಣಗೊಂಡಿದೆ.

ಕಾಫಿಹೌಸ್ ಎಂಬ ಪ್ರತಿಮೆ ಆಧುನಿಕ ಸಂಕೇತವಾಗಿ ಬಳಕೆಯಾಗಿದೆ. ದಿನನಿತ್ಯದ ವಿದ್ಯಮಾನಗಳನ್ನು ಕುರಿತು ಚರ್ಚೆ ಮಾಡುವುದು, ವ್ಯಾಪಾರ, ವ್ಯವಹಾರ, ಪ್ರೇಮಿಗಳ ಪರಸ್ಪರ ಮಾತುಕತೆ ಹೀಗೆ ಹಲವಾರು ಜನರು ತಮ್ಮ ಕೆಲಸಗಳಿಗೆ ಕಾಫಿಹೌಸ್ ಸೇರುವ ತಾಣವಾಗಿದೆ.

ಈ ಕವನಸಂಕಲನದ ಕವಿತೆಗಳು ಕಾವ್ಯದ ಸ್ವರೂಪವನ್ನು ತಿರಸ್ಕರಿಸುವಂತಿವೆ. ಕಾವ್ಯ ಎನಿಸುವುದಿಲ್ಲವಾದರೂ ಓದಿನ ಅನುಭವ ಇದು ಕಾವ್ಯವೇ ಎಂದು ಹೇಳುತ್ತದೆ. ಕಾಫಿಹೌಸ್, ಅಲ್ಲಿ ಜನ ಕುಳಿತು ಗಂಟೆಗಟ್ಟಲೆ ಏನು ಮಾಡುತ್ತಾರೆ ಎಂಬ ಪ್ರಶ್ನೆಗಳ ಮೂಲಕ ಕವಿತೆಗಳಿಗೆ ಪ್ರವೇಶ ಮಾಡಿಸುತ್ತದೆ. ವರ್ತಮಾನದ ಹಲವು ಘಟನೆಗಳು ಇಲ್ಲಿ ಚರ್ಚೆಯಾಗುತ್ತವೆ. ಪ್ರತಿಭಾ ನಂದಕುಮಾರ್ ಅವರ ಕಾವ್ಯದಲ್ಲಿ ಕಾಮವೇ ಕೇಂದ್ರವೆಂಬುದು ಮೇಲ್ನೋಟಕ್ಕೆ ಕಂಡರೂ ಪಾತ್ರಗಳನ್ನು ಚಿತ್ರಿಸುವ ಮೂಲಕ ಸಮಕಾಲೀನ ಯುವ ಮನಸ್ಸುಗಳ ತಲ್ಲಣ, ಸಂಕಟಗಳನ್ನು ಚಿತ್ರಿಸುವಲ್ಲಿಯೇ ತನ್ನ ಅಸ್ತಿತ್ವವನ್ನು ಕಂಡುಕೊಂಡಿದ್ದಾರೆ. ಇಲ್ಲಿ ಸಂದಂಧಗಳು ದೀರ್ಘಕಾಲ ಉಳಿಯದೆ ಇರುವಂತಹ ವೈಮನಸ್ಸುಗಳ ಚಿತ್ರಣವಿದೆ. ಇವರು ಚಿತ್ರಿಸುವ ಹುಡುಗಿಯರ ಪಾತ್ರಗಳು ತುಂಬ ದಿಟ್ಟತನದಿಂದ ಕೂಡಿರುವುದನ್ನು ಕಾಣಬಹುದು. ಹುಡುಗಿಯರು ಸಾಂಪ್ರದಾಯಿಕವಾಗಿ ಇರಬೇಕೆಂದು ಹುಡುಗರು ಬಯಸುತ್ತಾರೆ. ಆದರೆ ಹುಡುಗಿಯರು ಆಧುನಿಕ ಹೊಸತನವನ್ನು ಬಯಸುತ್ತಾರೆ.

'ಸಂಗಾತ' ಕವಿತೆಯಲ್ಲಿ ಸ್ತ್ರೀಲೋಕದ ವಿವಿಧ ಒಳವಿವರಗಳನ್ನು ಅನಾವರಣಗೊಳಿಸಿದ್ದಾರೆ. ಗಂಡ-ಹೆಂಡತಿಯ ನಡುವೆ ಒಮ್ಮೆ ಮನಸ್ತಾಪವುಂಟಾದರೆ ಸಣ್ಣಪುಟ್ಟ ತಪ್ಪಿಗೂ ಇಲ್ಲಿ ಕಾರಣವಲ್ಲದ ಕಾರಣಕ್ಕೆ ಕಲಹಗಳು ಶುರುವಾಗುತ್ತವೆ. ಹೊಂದಾಣಿಕೆ ಇಬ್ಬರಲ್ಲಿಯೂ ಇದ್ದರೆ 'ಮರದ ಕೆಳಗೆ ಮಲಗಿದರೂ ಗರ್ಭ ನಿಲ್ಲುತ್ತದೆ' ಎಂಬ ಇಂಗಿತ ಕವಯಿತ್ರಿಯದು. 'ಸಂಗಾತ' ಪದ್ಯದ ಮೂಲಕ ಸ್ತ್ರೀ-ಪುರುಷನ ನಡುವೆ ಹೊಂದಾಣಿಕೆ ಮುಖ್ಯ; ಇಲ್ಲಿ ಯಾರು ಮೇಲೂ ಅಲ್ಲ, ಕೀಳು ಅಲ್ಲ ಎಂಬುದು ಈ ಕವಿತೆಯ ಆಶಯ.

"ಎಲ್ಲ ಯಶಸ್ಸಿನ ಪುರುಷನ ಹಿಂದೆ
ಒಬ್ಬಳು ಮಹಿಳೆ
ಎಲ್ಲ ಯಶಸ್ವಿ ಮಹಿಳೆಯ ಹಿಂದೆ
ಒಬ್ಬ ಅತೃಪ್ತ ಪುರುಷ."[೪೫]

ಪ್ರತಿ ಪುರುಷನ ಯಶಸ್ಸಿನ ಹಿಂದೆ ಮಹಿಳೆ ಇದ್ದೇ ಇರುತ್ತಾಳೆ. ತಾಯಿಯಾಗಿ, ತಂಗಿಯಾಗಿ, ಹೆಂಡತಿಯಾಗಿ, ಮಗಳಾಗಿ ಪುರುಷನಿಗೆ ಸ್ಫೂರ್ತಿಯಾಗಿರುತ್ತಾಳೆ. ಆದರೆ ಕವಯಿತ್ರಿ ಪ್ರತಿ ಮಹಿಳೆಯ ಯಶಸ್ಸಿನ ಹಿಂದೆ ಒಬ್ಬ 'ಅತೃಪ್ತ ಪುರುಷ'ನಿರುತ್ತಾನೆ ಎಂದು ಹೇಳುವ ಮೂಲಕ ಪುರುಷರು ಮಹಿಳೆಯರ ಯಶಸ್ಸನ್ನು ಸಹಿಸುವುದಿಲ್ಲ ಹಾಗಾಗಿಯೇ ಈ ರೀತಿಯ ಕಲಹಗಳು ಶುರುವಾಗುತ್ತವೆ ಎಂಬ ಅಭಿಪ್ರಾಯಪಡುತ್ತಾರೆ.

ಸುಬ್ಬು ಹೊಲೆಯಾರ್ ಅವರು ಶೋಷಣೆ ಮತ್ತು ಅವಮಾನಗಳನ್ನು ವ್ಯಂಗ್ಯದ ಧಾಟಿಯಲ್ಲಿ ನಿರೂಪಿಸಿರುವ ಬಗೆ ಇಲ್ಲಿ ಗಣನೀಯ. ಜೊತೆಗೆ ತನಗಾದ ನೋವು, ಸಂಕಟಗಳನ್ನು ವಿಷಾದದ ಧ್ವನಿಯಲ್ಲಿ ತನ್ನ ಎದುರಿನ ಸಾಮಾಜಿಕ ಪ್ರಶ್ನೆಗಳ ಜೊತೆ ಮುಖಾಮುಖಿಯಾಗುತ್ತಾರೆ. ಹೀಗೆ ವ್ಯವಸ್ಥೆಯ ಹಲವು ಬಗೆಯ ಘೋರ ಹಿಂಸೆಗಳನ್ನು ಕಾವ್ಯವಾಗಿಸುತ್ತಲೇ ಸಮುದಾಯದ ನೋವುಗಳನ್ನು ದಾಖಲಿಸುತ್ತಾರೆ.

ಯಥಾ ಸ್ಥಿತಿವಾದವನ್ನು ಪೋಷಿಸುತ್ತಿರುವ ಯಜಮಾನಿಕೆಯನ್ನು ವ್ಯಂಗ್ಯಮಾಡುವುದು

ಮರೆಯಲಾರೆ
ಬೊಗಸೆ ಹಿಡಿದು ನೀರು ಕುಡಿದ
ಋಷಿಯನ್ನು
ನಿಮಗೆ ಧನ್ಯವಾದಗಳು
ನನ್ನ ಊರಾಚೆ ಇಟ್ಟಿದ್ದಕ್ಕೆ

ನಾನು ಹೊಡೆಸಿಕೊಂಡದ್ದು
ನಿಮಗೆ ಸಂತೋಷ ಕೊಡುವುದಾದರೆ
ನಾನು ದುಃಖಿಸುವುದಿಲ್ಲ;
ನನ್ನ ಮಾಂಸ ಖಂಡಗಳು
ನಿಮ್ಮವರ ಹಂಗಿಸದಿದ್ದರೆ
ನಾನು ಸಹಜ ಮನುಷ್ಯನಲ್ಲ.

ನನ್ನ ಹಸಿವು ಮಾನ ಜೀವ
ದೊಟ್ಟಿಗೆ ನೀವು ಚೆಲ್ಲಾಟವಾಡಿದ್ದಕ್ಕೆ
ಸಿಟ್ಟಿಲ್ಲ ನನಗೆ

ಅಕಸ್ಮಾತ್ ನೀವು ಬದುಕಿದ್ದರೆ
ಸಮಾಧಿಯ ಮೇಲಿನ
ತುಂಬೆ ಹೂವುಗಳು ನೀವು[೪೭]

ಎಷ್ಟೇ ನೋವು, ಅಪಮಾನವಾದರೂ, ಊರಾಚೆ ಇಟ್ಟಾಗಲೂ ಅದನ್ನು ಪ್ರತಿರೋಧಿಸದೆ ಮೌನವಾಗಿ ಸಹಿಸುವ ಗುಣ ಇಲ್ಲಿ ಕುತೂಹಲವನ್ನು ಉಂಟುಮಾಡುತ್ತದೆ. ಈ ದುಃಖ ಮತ್ತು ವಿಷಾದಗಳು ಕಾವ್ಯದಲ್ಲಿ ಮಾನವೀಯ ಪ್ರೀತಿಯನ್ನು ಉದ್ದೀಪಿಸುತ್ತವೆ. ಅದಕ್ಕೆ ಕವಿ 'ಸಮಾಧಿಯ ಮೇಲಿನ ತುಂಬೆ ಹೂವುಗಳು ನೀವು' ಎಂದು ಮೌನಕ್ಕೆ ಜಾರುತ್ತಾರೆ.

ಎಲ್ಲೆಲ್ಲೂ ನೀವಿರಬೇಕು
ಹಾದಿ ಬೀದಿಗಳಲ್ಲಿ ಧರ್ಮಪೀಠಗಳಲ್ಲಿ

ಚರಿತ್ರೆ ಪುರಾಣಗಳಲ್ಲಿ
ಹಾರಾಡುವ ಬಾವುಟಗಳಲ್ಲಿ... ನೀವೇ

ನಾನು ಈ ನೆಲದ ತೆನೆಗಳೊಂದಿಗೆ
ಹುಲ್ಲು ಗರಿಕೆಗಳೊಂದಿಗೆ
ಹಕ್ಕಿ ಹಾಡಿನೊಟ್ಟಿಗೆ ಮೈಮರೆತವನು

ಧನ್ಯವಾದಗಳು ಧಣಿಗಳೇ
ನಿಮ್ಮ ಕಣ್ಣು ಕಿವಿ ಮುಚ್ಚಿಕೊಂಡಿದ್ದಕ್ಕೆ;
ಕೊನೆಯದಾಗಿ ನಾನು ಇಷ್ಟು ಹೇಳದಿದ್ದರೆ
ನೀವು ಕೊಳೆತು ನಾರುತ್ತೀರೆಂದು
ಬಾಯಿ ಬಿಡಬೇಕಾಯಿತು.[೪೮]

ಈ ಧನ್ಯವಾದಗಳನ್ನು ಅರ್ಪಿಸುವ ಹಿಂದೆ ಕವಿಗೆ ಶೋಷಣೆಯ ಹಳೆಯ ಗಾಯಗಳು ಮಾಗಿದಂತಿಲ್ಲ. ಅದಕ್ಕೆ ಧಣಿಗಳ ಕಣ್ಣು ತೆರೆಸುವುದಕ್ಕೆ ಕವಿ ಮೌನ ಮುರಿಯುತ್ತಿದ್ದಾರೆ. ಇಲ್ಲಿನ ಧನ್ಯತಾಭಾವ ಮತ್ತು ಧ್ಯಾನದ ಗುಣ ನಮ್ಮ ಭಾವನಾ ಪ್ರಪಂಚವನ್ನು ವಿಸ್ತರಿಸುತ್ತಿದೆ. ಇಲ್ಲಿನ ಅಗಾಧವಾದ ಮಾನವೀಯ ತುಡಿತ ಈ ಕವಿತೆಗೆ ಗಂಭೀರತೆಯನ್ನು ತಂದುಕೊಟ್ಟಿದೆ.

ಎದೆಯಲ್ಲಿ ಎಷ್ಟೇ ನೋವು, ಸಂಕಟ, ಆಕ್ರೋಶಗಳು ತುಂಬಿಕೊಂಡಿದ್ದರೂ ಹೊರಗೆ ಸಿಡಿಯದೆ ಎಲ್ಲವೂ ಕರುಣೆ, ಪ್ರೀತಿಗಳಿಂದ ಕರಗಿ ನೀರಾಗಿ ಹರಿಯುತ್ತದೆ. ಅದಕ್ಕೆ ಕವಿ ಹೀಗೆ ಹೇಳುತ್ತಾನೆ.

ನಾನು ಸಂತೋಷಪಡುತ್ತೇನೆ
ಇಲ್ಲಿ ಹುಟ್ಟಿರುವುದಕ್ಕೆ
ಮರಗಿಡ ಪರ್ವತಗಳು

ಇನ್ನೂ ಉಸಿರಾಡುತ್ತಿರುವುದನ್ನು ನೋಡಿಕೊಂಡು;
ಹರಿಯುವ ಝರಿಗಳಲ್ಲಿ ಇಳಿಯುತ್ತ
ಬಯಲು ದಾರಿಯಲ್ಲಿ ಹರಿಯುತ್ತ
ಮಲ ತಿನ್ನಿಸಿಕೊಂಡಾದರೂ
ಮುಟ್ಟಿಸಿಕೊಳ್ಳದೆ
ಪವಿತ್ರನಾಗಿರಬೇಕೆಂದು[೪೯]

ದ್ವೇಷಕ್ಕೆ ದ್ವೇಷವೇ ಉತ್ತರವಲ್ಲ ಎಂಬ ಮಾನವಪರ ಕಾಳಜಿ ಇಲ್ಲಿನದು. ಅದಕ್ಕೆ ಯಾವ ಪ್ರತಿರೋಧವೂ ಇಲ್ಲಿ ವ್ಯಕ್ತವಾಗಿಲ್ಲ. ಮಿಗಿಲಾಗಿ ಕಲ್ಲು ಬಂಡೆಗಳಂತೆ ಸಹನೆಯಿಂದ ಎಲ್ಲ ನೋವನ್ನು ನುಂಗಿಕೊಂಡು ಮುನ್ನಡೆಯುವ ಗುಣ ಇಲ್ಲಿ ಅನನ್ಯವಾದದ್ದು. ಆದರೆ ವ್ಯವಸ್ಥೆಯ

ಕ್ರೌರ್ಯ ಕವಿಯ ಅಂತರ್ಯದ ಆಳದಲ್ಲಿ ಸಾತ್ವಿಕ ಸಿಟ್ಟಾಗಿಯೂ ಕಾಣಿಸುತ್ತದೆ. ಸ್ವಾತಂತ್ರ್ಯ ಬಂದು ಎಪ್ಪತ್ತು ವರ್ಷ ಕಳೆದರೂ ನಮ್ಮನ್ನು ಆಳುವ ಪಕ್ಷಗಳು ಬರೀ ಭರವಸೆಗಳನ್ನು ನೀಡುವುದರಲ್ಲಿಯೇ ಕಾಲ ಸವೆಸುತ್ತಿವೆ. ಯಾವ ಸಮಸ್ಯೆಗಳು ಇತ್ಯರ್ಥವಾಗುವುದಿಲ್ಲ. ಹೊಸ ಹೊಸ ಸುಳ್ಳುಗಳನ್ನು ಹೇಳುತ್ತಾ ನಿತ್ಯ ಜನರನ್ನು ಮೋಸಗೊಳಿಸುವ ಬಗೆಯನ್ನು ಇಲ್ಲಿ ಕಾಣಬಹುದು.

ನಿಮ್ಮರೆ
ನಿಮ್ಮನ್ನು
ಆಶ್ವಾಸನೆಗಳಿಂದ
ಪೋಷಿಸುವುದೇಕೆಂದು
ಬಲ್ಲಿರಾ?
ನೀವು ಮತಗಟ್ಟೆಯಲ್ಲಿ
ಚಲಾವಣೆಯ ನಾಣ್ಯಗಳು
ಎಣಿಕೆಗೆ ದಕ್ಕುವಷ್ಟು
ಗುರುತುಗಳು
ಸಮಗ್ರವಾಗಿ ಹೇಳಬೇಕೆಂದರೆ
'ಇಷ್ಟೆ'
ಪ್ರಜಾಪ್ರಭುತ್ವ
ನಿಮಗಿತ್ತ ಬೆಲೆ[೫೦]

ಪ್ರಜಾಪ್ರಭುತ್ವದ ಹೆಸರಿನಲ್ಲಿ ದುಡಿಯುವ ವರ್ಗವನ್ನು ನಿರಂತರ ಶೋಷಣೆಗೆ ಗುರಿ ಮಾಡಿರುವ ಕ್ರೂರ ಚಿತ್ರಣ ಇಲ್ಲಿದೆ. ಚುನಾವಣೆಯ ಸಂದರ್ಭದಲ್ಲಿ ಬರೀ ಆಶ್ವಾಸನೆಗಳನ್ನು ಕೊಟ್ಟು ಜನರಿಂದ ಓಟು ಪಡೆದು ಅಧಿಕಾರದ ಗದ್ದುಗೆ ಏರುವ ಆಳುವ ವರ್ಗಕ್ಕೆ ಸಾಮಾನ್ಯ ಜನರ ನೋವು, ಸಂಕಟಗಳು ಕಾಣಿಸುವುದೇ ಇಲ್ಲ; ಕಂಡರೂ ಅವರಿಗೆ ಯಾವ ಭಾವನೆಯೂ ಉಂಟಾಗುವುದಿಲ್ಲ. ಅಧಿಕಾರದಾಹವು, ಜನರ ಸಂಕಟ, ವೇದನೆಗಳನ್ನು ಕಾಣಿಸದಂತೆ ಮಾಡಿರುತ್ತದೆ. ಹೀಗೆ ದುಡಿಯುವ ವರ್ಗವನ್ನು ಪ್ರಭುತ್ವದ ದಾಳವನ್ನಾಗಿ ಮಾಡಿಕೊಂಡಿರುವ ಅಸಂಖ್ಯ ಉದಾಹರಣೆಗಳು ನಮಗೆ ಕಾಣಿಸುತ್ತವೆ.

ಮಾನವೀಯ ಪ್ರೀತಿಯನ್ನು ಉದ್ದೀಪಿಸುವ ಈ ಕವಿತೆ ಕಳೆದುಹೋಗುತ್ತಿರುವ ಸಾಮಾಜಿಕ ಸ್ವಾಸ್ಥ್ಯದ ಬಗ್ಗೆ ಚಿಂತನೆಗೆ ಒಳಗುಮಾಡುತ್ತದೆ. ಅಷ್ಟೇ ಅಲ್ಲ, ಜೀವನಪ್ರೀತಿಯನ್ನು ಬಿತ್ತುತ್ತದೆ. ಗಾಯಗೊಂಡ ಸಮಾಜವನ್ನು ಒಗ್ಗೂಡಿಸಲು ಕವಿ ಇಲ್ಲಿ ಹಾತೊರೆಯುತ್ತಾನೆ.

ಒಂದೇ
ಒಂದು ಸೂಜಿಇದ್ದರೆ
ಕೊಡು ಗೆಳೆಯ

ಮುರಿದು ಹೋದ ಹರಿದು ಹೋದ
ಕನಸುಗಳನ್ನು ಮತ್ತೆ ಜೋಡಿಸುತ್ತೇನೆ
ಅದಕ್ಕೆ ಪ್ರೀತಿಯ ಹೊಲಿಗೆ ಹಾಕುತ್ತೇನೆ
ಕತ್ತರಿಸಿ ಹೋದ ರೆಕ್ಕೆಯನ್ನು ಮತ್ತೆ ಹಕ್ಕಿಗೆ ಕಟ್ಟಿ
ಆಕಾಶಕ್ಕೆ ಹಾರಿಬಿಡುತ್ತೇನೆ.
ಮುರಿದ ಮಾತುಗಳನ್ನೆಲ್ಲಾ ಬಾಚಿ
ಮನಸ್ಸಿನೊಳಗೆ ತುಂಬುತ್ತೇನೆ.

ಎಲ್ಲಾ ಒಂದೇ ಒಂದು
ಸೂಜಿಯಿಂದಲೇ[೫೧]

ಸೂಜಿ ಇಲ್ಲಿ ಕೇವಲ ನಿರ್ಜೀವ ವಸ್ತುವಾಗಿ ಚಿತ್ರಣಗೊಂಡಿಲ್ಲ. ಹರಿದುಹೋದ ಕನಸುಗಳನ್ನು ಮತ್ತೆ ಜೋಡಿಸುತ್ತೇನೆ' ಎಂಬ ಉತ್ಕಟ ಪ್ರೀತಿಯನ್ನು ಕವಿ ವ್ಯಕ್ತಪಡಿಸುತ್ತಿದ್ದಾನೆ. ಇಂಥ ನಿಷ್ಕಲ್ಮಷ ಪ್ರೀತಿ ಇಂದಿಗೆ ಅಗತ್ಯವಾಗಿದೆ ಎಂಬುದು ಈ ಕವಿತೆಯ ಅಪೇಕ್ಷೆಯಾಗಿದೆ.

ನಿನ್ನ ಎಲ್ಲಾ ಕಲ್ಪನೆಗಳನ್ನು ಜೀವಂತವಾಗಿಸುತ್ತೇನೆ
ಹೊಲಿದ ಕಣ್ಣ ರೆಪ್ಪೆಗಳನ್ನು ಬಿಡಿಸುತ್ತೇನೆ;
ತುಟಿಗಳೆರಡಾಗಿ ಹೊಡೆದು
ನಗೆಯನ್ನು ಅರಳಿಸುತ್ತೇನೆ
ಎಲ್ಲಾ ಒಂದೇ ಒಂದು ಸೂಜಿಯಿಂದಲೇ

ಹದ ನೆಲದ ತುಂಬ
ಬೀಜ ಬಿತ್ತಲು ಸಣ್ಣ ಗುಣಿಗಳನ್ನು ತೋಡುತ್ತೇನೆ
ಮುನಿದ ಮೋಡವ ಚುಚ್ಚಿ, ಮಳೆಯುದುರಿಸುತ್ತೇನೆ
ನನ್ನ ನಿನ್ನ ನಡುವಿನ ಗೋಡೆಯನು ಉರುಳಿಸುತ್ತೇನೆ.
ಪ್ರೀತಿಯ ಕಟ್ಟೆ ಕಟ್ಟುತ್ತೇನೆ
ಬರಡು ಬಯಲಿನ ತುಂಬ ಹಸಿರಾಗುತ್ತೇನೆ.

ಎಲ್ಲಾ ಒಂದೇ
ಒಂದು ಸೂಜಿಯಿಂದಲೇ![೫೨]

ಹೀಗೆ ಇಂಥ ಅನೇಕ ಪ್ರೀತಿಯ ಒರತೆಗಳು ಕವಿಯ ಭಾವದಲ್ಲಿ ಮೂಡುತ್ತಾ ಹೋಗುತ್ತವೆ. ಅದಕ್ಕೆ 'ಪ್ರೀತಿಯ ಕಟ್ಟೆ ಕಟ್ಟುತ್ತೇನೆ, ಬರಡು ಬಯಲಿನ ತುಂಬ ಹಸಿರಾಗುತ್ತೇನೆ' ಎಂಬ ಜೀವಪರ ನಿಲುವನ್ನು ತಾಳುತ್ತಾರೆ.

## ಕೊನೆ ಟಿಪ್ಪಣಿಗಳು

೧. ಬಂಜಗೆರೆ ಜಯಪ್ರಕಾಶ, **ಜಲಜಂಬೂಕನ್ನೆ**, ಮುನ್ನುಡಿ.

೨. ಕಿ.ರಂ. ನಾಗರಾಜ, **ಆಸಾದಿ**, ಮುನ್ನುಡಿ, ಪುಟ ೬.

೩. ವಡ್ಡಗೆರೆ ನಾಗರಾಜಯ್ಯ, **ಆಸಾದಿ**, ಪುಟ ೩.

೪. ಅದೇ, ಪುಟ ೪೪.

೫. ಪ್ರಕಾಶಕರ ಮಾತು, **ಗಲ್ಲೆಬಾನಿ**.

೬. ಕೆ.ಜಿ. ಸಿದ್ಧಯ್ಯ, **ಗಲ್ಲೆಬಾನಿ**, ಪುಟ ೪೮.

೭. ಅದೇ, ಪುಟ ೨.

೮. ನಾಗತಿಹಳ್ಳಿ ರಮೇಶ, **ಸಮುದ್ರ ಮತ್ತು ಮಳೆ**, ಪುಟ ೧೩.

೯. ಅದೇ, ಪುಟ ೫೯.

೧೦. ಜಿ.ಪಿ. ಬಸವರಾಜ, **ನೆಲದ ಕರುಣೆಯ ದನಿ**, ಮುನ್ನುಡಿ.

೧೧. ವೀರಣ್ಣ ಮಡಿವಾಳರ, **ನೆಲದ ಕರುಣೆಯ ದನಿ**, ಪುಟ ೩೧.

೧೨. ಎನ್.ಕೆ. ಹನುಮಂತಯ್ಯ, **ಹಿಮದ ಹೆಜ್ಜೆ**, ಮುನ್ನುಡಿ.

೧೩. ಅದೇ, ಪುಟ ೩೮.

೧೪. ಎಂ.ಡಿ. ಒಕ್ಕುಂದ, **ಮಗು ಮಲಗಿದೆ ಎದೆಯ ಮೇಲೆ**, ಪುಟ ೨೫.

೧೫. ಅದೇ, ಪುಟ ೧೪.

೧೬. ಅದೇ, ಪುಟ ೫೬.

೧೭. ಅದೇ, ಪುಟ ೭.

೧೮. ಅದೇ ಪುಟ ೫.

೧೯. ಎನ್.ಕೆ. ಹನುಮಂತಯ್ಯ, **ಹಿಮದ ಹೆಜ್ಜೆ**, ಪುಟ ೧.

೨೦. ರಹಮತ್ ತರೀಕೆರೆ, **ಮಾಂಸದಂಗಡಿಯ ನವಿಲು**, ಮುನ್ನುಡಿ.

೨೧. ಎನ್.ಕೆ. ಹನುಮಂತಯ್ಯ, **ಹಿಮದ ಹೆಜ್ಜೆ**, ಪುಟ ೧.

೨೨. ಅದೇ, ಪುಟ ೧–೨.

೨೩. ಅದೇ, ಪುಟ ೨.

೨೪. ಮೂಡ್ನಾಕೂಡು ಚಿನ್ನಸ್ವಾಮಿ, **ನಾನೊಂದು ಮರವಾಗಿದ್ದರೆ**, ಪುಟ ೩.

೨೫. ಎಸ್.ಜಿ. ಸಿದ್ಧರಾಮಯ್ಯ, **ನಿಶ್ಶಬ್ದದ ಜಾಡು**, ಪುಟ ೩೧.

೨೬. ಟಿ. ಯಲ್ಲಪ್ಪ, **ಚಿಟ್ಟೆ ಮತ್ತು ಜೀವಯಾನ**, ಪುಟ ೩೩.

೨೭. ಅದೇ, ಪುಟ ೩೫.

೨೮. ಟಿ. ಯಲ್ಲಪ್ಪ, **ಕಡಲಿಗೆ ಕಳಿಸಿದ ದೀಪ,** ಪುಟ ೧೯.

೨೯. ಸಿದ್ದು ಯಾಪಲ ಪರವಿ, **ಒಡಲ ಬೆಂಕಿ,** ಪುಟ ೭೪.

೩೦. ಅದೇ, ಪುಟ

೩೧. ಅದೇ, ಪುಟ.

೩೨. ವಿ. ಮುನಿವೆಂಕಟಪ್ಪ, **ಸ್ವಾಭಿಮಾನದ ಬೀಡಿಗೆ,** ಪುಟ ೨೧.

೩೩. ಎಲ್. ಹನುಮಂತಯ್ಯ, **ಅಕ್ಷರ ಅಕ್ಷಾರವೇ,** ಪುಟ ೩೭.

೩೪. ಎಲ್. ಹನುಮಂತಯ್ಯ, **ಒಡಲ ಬೆಂಕಿ,** ಪುಟ ೫೬-೬೦.

೩೫. ಸುಬ್ಬು ಹೊಲೆಯಾರ್, **ಎಲ್ಲರ ಬೆರಳಲ್ಲೂ ಅಂಟಿಕೊಂಡು ದುಃಖವೇ...,** ಪುಟ ೩೮.

೩೬. ಎಸ್. ಜಿ. ಸಿದ್ಧರಾಮಯ್ಯ, **ಒಡಲ ಬೆಂಕಿ,** ಮುನ್ನುಡಿ, ಪುಟ ೫.

೩೭. ವೀರಣ್ಣ ಮಡಿವಾಳರ, ನೆಲದ ಕರುಣೆಯ ದನಿ, ಪುಟ ೨೨.

೩೮. ವಿಠ್ಠಲ ಭಂಡಾರಿ, **ಒಡಲ ಬೆಂಕಿ,** ಸಂಪಾದಕರ ಮಾತು, ಪುಟ ೧೧.

೩೯. ಎಸ್.ವಿ. ಪ್ರಭಾವತಿ, **ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂಪುಟ-೧,** ಪುಟ ೬೧೫.

೪೦. ಪ್ರತಿಭಾ ನಂದಕುಮಾರ್, **ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು,** ಪುಟ ೯-೧೦.

೪೧. ಅದೇ, ಪುಟ ೪೧.

೪೨. ಅದೇ, ಪುಟ ೪೩.

೪೩. ಅದೇ, ಪುಟ ೪೦.

೪೪. ಅದೇ.

೪೫. ಅದೇ ಪುಟ ೪೧.

೪೬. ಅದೇ ಪುಟ ೬೧.

೪೭. ಸುಬ್ಬು ಹೊಲೆಯಾರ್, **ಸೂಜಿಗಾತ್ರದ ಕೊಳೆವೆಯಿಂದ ಮನುಷ್ಯನೊಬ್ಬನ ಹಾಡು,** ಪುಟ ೨೪.

೪೮. ಅದೇ.

೪೯. ಅದೇ, ಪುಟ ೩.

೫೦. ಮೂಡ್ನಾಕೂಡು ಚಿನ್ನಸ್ವಾಮಿ, **ಮತ್ತೆ ಮಳೆ ಬರುವ ಮುನ್ನ,** ಪುಟ ೩೪.

೫೧. ಲಕ್ಕೂರು ಆನಂದ, **ಕವಿತೆ-೨೦೦೪,** ಪುಟ ೧೧೨.

೫೨. ಅದೇ.



ಅಧ್ಯಾಯ : ಏಳು

# ಅಂದಂದಿನ ನುಡಿಯ ಅಂದೇ ಅರಿಯಬಾರದು

ಕಾವ್ಯವೆಂಬುದು ಸಾಗರದಂತೆ ವಿಸ್ತಾರವೂ ವಿಸ್ಮಯವೂ ಆದದ್ದು ಎಂದು ಪಂಪ ಹೇಳುತ್ತಾನೆ. ಈ ಹಿನ್ನೆಲೆಯಲ್ಲಿ ತುಂಬಾ ವ್ಯಾಪಕವೂ ಸಂಕೀರ್ಣವೂ ಆದ ಸಮಕಾಲೀನ ಕನ್ನಡ ಕಾವ್ಯವನ್ನು ಮೌಲ್ಯನಿರ್ಧಾರ ಮಾಡುವುದು ದೊಡ್ಡ ಸವಾಲಿನ ಕಾರ್ಯ. ಏಕೆಂದರೆ ಈಗತಾನೆ ರಚಿಸುತ್ತಿರುವ ಸಾಹಿತ್ಯವನ್ನು ಬೆಲೆ ಕಟ್ಟಲು ಹಾಗೂ ಯಾವುದೇ ಹೊಸ ಕೃತಿ ಓದುಗರ ಮನಸ್ಸಿನೊಳಗೆ ಇಳಿಯಲು ಸ್ವಲ್ಪ ಸಮಯ ಬೇಕು. ಆದ್ದರಿಂದ ಈ ಹೊತ್ತು ರೂಪ ತಾಳುತ್ತಿರುವ ಕಾವ್ಯದ ಬಗ್ಗೆ ಚಿಂತಿಸುವುದು ಓದುಗರಿಗೆ ಬಿಕ್ಕಟ್ಟೂ ಹೌದು, ಸವಾಲೂ ಹೌದು. ಅದಕ್ಕೆ ಅಲ್ಲಮಪ್ರಭು 'ಅಂದಂದಿನ ನುಡಿಯ ಅಂದಂದೇ ಅರಿಯಬಾರದು' ಎನ್ನುತ್ತಾನೆ. ಇಲ್ಲಿನ ಸಂದರ್ಭವೂ ಹಾಗೆಯೇ ಇದೆ.

ಅಂದರೆ 'ಭೂತ' ಮತ್ತು 'ಭವಿಷ್ಯ'ದ ಬಗ್ಗೆ ಆಲೋಚಿಸುವುದು, ಮಾತನಾಡುವುದು ಸುಲಭ. ಆದರೆ 'ವರ್ತಮಾನ'ದ ಬಗ್ಗೆ ಮಾತನಾಡುವುದು ಮತ್ತು ಚಿಂತಿಸುವುದು ತುಂಬಾ ಸಮಸ್ಯಾತ್ಮಕ. ಈ ಮಾತು ಬರೀ ಸಮಕಾಲೀನ ಕನ್ನಡ ಕಾವ್ಯಕ್ಕೆ ಮಾತ್ರ ಅನ್ವಯಿಸುವುದಿಲ್ಲ; ಎಲ್ಲಾ ಜ್ಞಾನಶಿಸ್ತುಗಳಿಗೂ ಅನ್ವಯವಾಗುತ್ತದೆ.

ಈ ಹೊತ್ತಿನ ಕಾವ್ಯವನ್ನು ಕುರಿತು ಅಧ್ಯಯನ ಮಾಡುವುದೆಂದರೆ ಕೇವಲ ಕವಿತೆಗಳನ್ನು ಕುರಿತು ಆ ಕ್ಷಣಕ್ಕೆ ಅನ್ನಿಸಿದ್ದನ್ನು ಬರೆಯುವುದಲ್ಲ. ಸಾಹಿತ್ಯ, ಇತಿಹಾಸ ಮತ್ತು ಸಂಸ್ಕೃತಿಯ ಸ್ಥಿತ್ಯಂತರಗಳನ್ನು ವರ್ತಮಾನದ ಜೊತೆಗೆ ಅನುಸಂಧಾನಗೊಳಿಸುತ್ತ, ಅಂತರ್‌ಶಿಸ್ತೀಯ ನೆಲೆಯಲ್ಲಿ ಗ್ರಹಿಸುವುದು. ಇದರ ಜೊತೆಗೆ ಯಾವುದೇ ವಸ್ತು-ವಿಷಯವನ್ನು ತಲಸ್ಪರ್ಶಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಕಾಲದ ನಡುವೆ ಅಂತರವಿರಬೇಕು. ಅಂದರೆ ಕೃತಿಯು ರಚನೆಯಾದ ಕಾಲಕ್ಕೂ ಮತ್ತು ಓದುಗರು ಅಭ್ಯಾಸ ಮಾಡುವ ಕಾಲಕ್ಕೂ ನಡುವೆ ಒಂದು ನಿರ್ದಿಷ್ಟವಾದ ಅಂತರವಿರಬೇಕು. ಇಲ್ಲದೇ ಹೋದರೆ ಅವಸರದ ತೀರ್ಮಾನಗಳಾಗುವ ಅಪಾಯ ಎದುರಾಗುತ್ತದೆ.

ಇಪ್ಪತ್ತೊಂದನೆಯ ಶತಮಾನದ ಆರಂಭದಲ್ಲಿ ರಚನೆಯಾಗುತ್ತಿರುವ ಕನ್ನಡ ಕಾವ್ಯದ ದಿಕ್ಕು ಮತ್ತು ಚಲನೆಗಳನ್ನು ಗುರುತಿಸುವ ಪ್ರಯತ್ನ ಇತ್ತೀಚೆಗೆ ನಡೆಯುತ್ತಿದೆ.

ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಹಾಗೂ ನಗರೀಕರಣಗಳ ಪ್ರಭಾವ ಮತ್ತು ಪರಿಣಾಮಗಳಿಂದ ನಮ್ಮ ಸಮಾಜ, ಸಂಸ್ಕೃತಿ, ಪರಿಸರಗಳು ಕಲುಷಿತಗೊಂಡಿವೆ. ಈ ಜಾಗತೀಕರಣವು ಉನ್ನತ, ಮಧ್ಯಮ ಮತ್ತು ಬಂಡವಾಳಶಾಹಿ ವರ್ಗಗಳ ಹಿತಾಸಕ್ತಿಗಳನ್ನು ಪೂರೈಸುತ್ತಿದೆ. ಅಷ್ಟೇ ಅಲ್ಲ, ಕಾಪಾಡುತ್ತಿದೆ. ಇದರಿಂದ ದಲಿತರು, ಹಿಂದುಳಿದವರು, ಅಲ್ಪಸಂಖ್ಯಾತರು, ಕೂಲಿ ಕಾರ್ಮಿಕರು, ರೈತರು, ಮಹಿಳೆಯರು ಹಾಗೂ ಲೈಂಗಿಕ ಅಲ್ಪಸಂಖ್ಯಾತರ ಬದುಕು ಬಿಕರಿಯಾಗುತ್ತಿದೆ. ಈ ಜಾಗತೀಕರಣದ ಪರಿಣಾಮವು ಸಮಕಾಲೀನ ಸಂದರ್ಭದ ಅಭಿವ್ಯಕ್ತಿ ವಿಧಾನಗಳ ಮೇಲೂ ಆಗುತ್ತಿದೆ.

ಸಾಹಿತ್ಯದ ಮುಖ್ಯ ಕಾಳಜಿಗಳು ಮನುಷ್ಯಕೇಂದ್ರಿತವಾಗಬೇಕು ಎಂಬ ಕೂಗು ಕೇಳಿಬರುತ್ತಿರುವ ಈ ಸಂದರ್ಭದಲ್ಲಿ, ಕನ್ನಡ ಕಾವ್ಯವು ಮನುಷ್ಯನ ನೋವಿಗೆ ಮಿಡಿದು ವಿಷಾದದ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ.

ಸಮಕಾಲೀನ ಕನ್ನಡ ಕಾವ್ಯವನ್ನು ಕುರಿತ ಬಹುತೇಕ ವಿಮರ್ಶೆಗಳು ಈ ಕಾಲದ ಕಾವ್ಯವನ್ನು ಕುರಿತು ಅತೃಪ್ತಿ ವ್ಯಕ್ತಪಡಿಸಿವೆ. ಆದರೆ ಇದರ ನಡುವೆ ಕೆಲವರಾದರೂ ಹೊಸ ಕಾವ್ಯಮಾರ್ಗಗಳನ್ನು ಸೃಷ್ಟಿಸಿರುವುದಂತೂ ನಿಜ. ಸಮಕಾಲೀನ ಕನ್ನಡ ಕಾವ್ಯದಲ್ಲಿ ವಸ್ತುವೈವಿಧ್ಯತೆ, ಹೊಸ ಮಾದರಿಗಳ ಹುಡುಕಾಟ ಇರುವುದನ್ನು ಗುರುತಿಸಬಹುದು. ಇತ್ತೀಚಿನ ಕನ್ನಡ ಕಾವ್ಯ ಬಹುಮುಖ್ಯವಾಗಿ ಎಲ್ಲ ವಲಯಗಳ ಶೋಷಿತರ ನೋವು, ಸಂಕಟ ಮತ್ತು ಸಂವೇದನಾ ನೆಲೆಗಳನ್ನು ಪ್ರಧಾನವಾಗಿ ಅಭಿವ್ಯಕ್ತಿಸಿದೆ. ಇಂಥ ವೇದನೆಗಳ ಜೊತೆಗೆ ದಲಿತರ ಸ್ಥಿತಿಗತಿಗಳು, ಮಹಿಳೆಯರ ಮೇಲೆ ನಡೆಯುವ ಲೈಂಗಿಕ ಅತ್ಯಾಚಾರ, ಶೋಷಣೆಗಳು, ರೈತರ ಆತ್ಮಹತ್ಯೆಗಳು, ಕೂಲಿಕಾರ್ಮಿಕರ ವಲಸೆಗಳು, ನಿರಂತರವಾದ ಬರಗಾಲ, ಪ್ರಾಕೃತಿಕ ವೈಪರೀತ್ಯಗಳು, ಕೋಮುದ್ವೇಷ, ಭ್ರಷ್ಟಾಚಾರ, ನೈತಿಕ ಅಧಃಪತನ, ಕೌಟುಂಬಿಕ ಸಂಘರ್ಷ, ಗ್ರಾಮ-ನಗರಗಳ ಬದುಕಿನ ಪಲ್ಲಟಗಳು, ಪ್ರಭುತ್ವದ ಸರ್ವಾಧಿಕಾರಿ ಮತ್ತು ದಬ್ಬಾಳಿಕೆಯ ರೀತಿ-ನೀತಿಗಳು, ಯುದ್ಧ ಮತ್ತು ಗಡಿ ಸಮಸ್ಯೆ ಹಾಗೂ ಪ್ರೀತಿ–ಪ್ರೇಮದಂಥ ಮಾನವೀಯ ಹುಡುಕಾಟದ ನೆಲೆಗಳನ್ನು ಅನೇಕ ಕವಿಗಳು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ.

ಎಂದಿಗಿಂತಲೂ ಇಂದು ಹೆಚ್ಚು ಜನ ಕವಿಗಳು ಕಾವ್ಯ ರಚನೆಯಲ್ಲಿ ತೊಡಗಿದ್ದಾರೆ. ಅವರಲ್ಲಿ ತರುಣಕವಿಗಳ ಪ್ರಮಾಣವೇ ಜಾಸ್ತಿ ಎಂಬುದು ಖುಷಿಯ ವಿಚಾರ. ಕಾವ್ಯಕ್ಕೆ ಓದುಗರಿಲ್ಲ ಎಂಬ ಮಾತನ್ನು ಇವರು ಸುಳ್ಳಾಗಿಸುತ್ತಿದ್ದಾರೆ. ಸತ್ವಶಾಲಿಯಾದ ಕೃತಿಗಳಿಗೆ ಯಾವತ್ತೂ ಓದುಗರು ಇದ್ದೇ ಇರುತ್ತಾರೆ ಎಂಬ ಮಾತನ್ನು ಇಲ್ಲಿ ನೆನೆಯಬೇಕು. ಮುಖ್ಯವಾದ ವಿಚಾರವೆಂದರೆ, ಇಷ್ಟೆಲ್ಲ ರಚನೆಗಳ ನಡುವೆ ಓದುಗರನ್ನು ಹಿಡಿದು ನಿಲ್ಲಿಸುವ, ಕಾಡುವ ಕವಿತೆಗಳು ಹೆಚ್ಚು ಮೂಡಿಬರುತ್ತಿಲ್ಲ ಎಂಬುದು. 'ಉದ್ಧರಣೆ' ಮತ್ತು 'ಹೇಳಿಕೆ'ಯ ರೂಪದ ಸಾಲುಗಳನ್ನು ಕವಿತೆಯಾಗಿಸುವಲ್ಲಿನ ಜಾಣ್ಮೆ; ಒಂದು ಕವಿತೆಗೆ ಬೇಕಾದ ಅನುಭವ ಜಗತ್ತು,

ಆ ಅನುಭವ ಜಗತ್ತನ್ನು ಕಣ್ಣಿಗೆ ಕಟ್ಟುವಂತೆ ಸೃಷ್ಟಿಸುವ ಚಿತ್ರಕಶಕ್ತಿ ಇವುಗಳ ಜೊತೆಗೆ ಒಂದು ಕವಿತೆಯನ್ನು ಆರಂಭದಿಂದ ಕೊನೆಯವರೆಗೆ ನಾಟಕೀಯವಾಗಿ ಕೊಂಡೊಯ್ಯುವ ಧಾರಣಶಕ್ತಿ ಮತ್ತು ಸಾವಯವಶಿಲ್ಪಗಳು ಇತ್ತೀಚಿನ ಕವಿಗಳಿಗೆ ಹೆಚ್ಚು ದಕ್ಕಿದಂತೆ ಕಾಣುವುದಿಲ್ಲ.

ಅಂದರೆ ವಿಭಿನ್ನ ವೈಚಾರಿಕ ವಿನ್ಯಾಸಗಳಲ್ಲಿ ಕವಿತೆಗಳು ರಚನೆಯಾಗುತ್ತಿರುವುದು ಸ್ವಾಗತಾರ್ಹವಾದರೂ ಕೆಲವೇ ಕೆಲವು ಕವಿಗಳು ಮಾತ್ರ ಕಾವ್ಯರಚನೆಯಲ್ಲಿ ಗಂಭೀರವಾಗಿ ತೊಡಗಿದ್ದಾರೆ. ಬಹುತೇಕ ಕವಿಗಳು ತಾವು ಆಯ್ಕೆ ಮಾಡಿಕೊಂಡ ಕಾವ್ಯದ ವಸ್ತುವನ್ನು ಕಲಾಸೃಷ್ಟಿಯಾಗಿಸುವಲ್ಲಿ ಸಫಲರಾಗಿಲ್ಲ ಎನಿಸುತ್ತದೆ. ಕಾವ್ಯ ಸಂವಹನದ ಸಾಧ್ಯತೆಗಳು ವಿಸ್ತರಿಸಿದಂತೆಲ್ಲ ಕಾವ್ಯದ ಗುಣಮಟ್ಟ ಕುಗ್ಗುತ್ತಿದೆ. ಸಾಮಾಜಿಕ ಜಾಲತಾಣಗಳಲ್ಲಿ ಕವಿತೆಗಳನ್ನು ಪ್ರಕಟಿಸಲು ಅವಕಾಶಗಳು ತುಂಬ ಇರುವುದರಿಂದ ಬರೆದದ್ದೆಲ್ಲವೂ ಕಾವ್ಯವಾಗುತ್ತಿದೆ. ಇಂಥ ರಾಶಿಯಲ್ಲಿ ಗುಣಮಟ್ಟವಾದ ಕಾವ್ಯವನ್ನು ಮೌಲ್ಯೀಕರಿಸಲು ಸೀಮಿತ ಅವಧಿಯಲ್ಲಿ ಸಾಧ್ಯವಾಗುವುದಿಲ್ಲ.

ಎಲ್ಲಾ ಕಾಲದಲ್ಲಿಯೂ ಸತ್ವಶಾಲಿ ಮತ್ತು ಮಹತ್ವಾಕಾಂಕ್ಷೆಯುಳ್ಳ ಸಾಹಿತ್ಯ ಸೃಷ್ಟಿಯಾಗುತ್ತಲೇ ಇರುತ್ತದೆ. ಹೀಗೆ ಪ್ರತಿಯೊಂದು ತಲೆಮಾರಿನಲ್ಲೂ ತುಂಬಾ ಉತ್ಕೃಷ್ಟವಾದ ಸಾಹಿತ್ಯ ರಚನೆಯಾಗುತ್ತದೆಯಾದರೂ, ತುಂಬ ಮಹತ್ವಪೂರ್ಣವಾದ ಸತ್ವಶಾಲಿ ಕೃತಿಗಳೆಂದು ಓದುಗರು ಮತ್ತು ವಿಮರ್ಶಕರಿಂದ ಗುರುತಿಸಿಕೊಳ್ಳಲು ಸ್ವಲ್ಪ ಸಮಯ ಬೇಕಾಗುತ್ತದೆ. ಹಾಗೆಯೇ ಯಾವುದೇ ಬಗೆಯ ಸಾಹಿತ್ಯ ಕೃತಿ ರಚನೆಗೊಳ್ಳಲು ಒಂದು ಬಗೆಯ ಪರಿಪಕ್ವವಾದ ಹಾಗೂ ಹದಗೊಂಡ ಕಾಲವು ಅತ್ಯಗತ್ಯವೆನಿಸುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಇಂತಹವುಗಳನ್ನು ಗುರುತಿಸಲು, ಚರ್ಚೆ ಮಾಡಲು ಆರೋಗ್ಯಪೂರ್ಣವಾದ ಸಾಹಿತ್ಯ-ಸಂಸ್ಕೃತಿ ವಲಯವೂ ಬೇಕೆನಿಸುತ್ತದೆ. ಮೇಲಿನ ಎಲ್ಲಾ ಅಂಶಗಳನ್ನು ಕುರಿತಂತೆ ಪ್ರಸ್ತುತ ಅಧ್ಯಯನದ ಮುಖ್ಯ ಫಲಿತಗಳು ಈ ಕೆಳಗಿನಂತಿವೆ.

*** ಅಧ್ಯಯನದ ಫಲಿತಗಳು**

೧. ಸಮಕಾಲೀನ ಕನ್ನಡ ಕಾವ್ಯ ಹಲವು ಬಗೆಯ ಕಾವ್ಯಧೋರಣೆಗಳನ್ನು ಅನಾವರಣಗೊಳಿಸಿದೆ. ಹೀಗೆ ಅಭಿವ್ಯಕ್ತಗೊಂಡ ಜನಸಾಮಾನ್ಯರ ನೋವು, ಸಂಕಟಗಳನ್ನು ಕಾವ್ಯದಲ್ಲಿ ಹಿಡಿದಿಟ್ಟಿವೆ. ತನ್ನ ಸುತ್ತಲಿನ ಎಲ್ಲ ವಿದ್ಯಮಾನಗಳಿಗೂ ಈ ಕಾಲದ ಕವಿಗಳು ಪ್ರತಿಕ್ರಿಯಿಸುತ್ತಲೇ ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಜವಾಬ್ದಾರಿಯನ್ನು ನಿರ್ವಹಿಸುವ ಪ್ರಯತ್ನವನ್ನು ತಕ್ಕಮಟ್ಟಿಗೆ ಮಾಡಿದ್ದಾರೆ.

೨. ಈಗಿನ ಬಹುತೇಕ ಕವಿಗಳಿಗೆ ಕಂಡಿದ್ದೆಲ್ಲವನ್ನು ಬರಹಕ್ಕಿಳಿಸುವ ಖಯಾಲಿ. ಸಿಕ್ಕ ಸಿಕ್ಕದ್ದನ್ನೆಲ್ಲ ಕಾವ್ಯವಾಗಿಸುವ ಹುಚ್ಚುಹಂಬಲ. ಇಂಥ ಅವಸರದ ಉತ್ಕಟ ಭಾವಗಳು ಮತ್ತು ತೀವ್ರತೆಗಳು ಕಾವ್ಯಬಂಧ, ಆಕೃತಿ ಹಾಗೂ ಕಾವ್ಯಶಿಲ್ಪವನ್ನು ಸಡಿಲಗೊಳಿಸುತ್ತಿವೆ ಅನ್ನಿಸುತ್ತದೆ. ಪರಂಪರೆಯ ಕಾವ್ಯದ ಸತ್ವ ಮತ್ತು ಕಾಣ್ಕೆಗಳು ಹೊಸ ಮಾದರಿಗಳನ್ನು ಸೃಜಿಸುತ್ತಿರುವ ರಚನಾಕಾರರಿಗೆ ಅಷ್ಟಾಗಿ ಸ್ವೀಕಾರವಾಗುತ್ತಿಲ್ಲ.

೩. ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಕನ್ನಡ ಕವಿತೆಗಳಲ್ಲಿ ಹಲವು ಬಗೆಯ ಆವಿಷ್ಕಾರಗಳನ್ನು ಗುರುತಿಸಬಹುದು. ಸದ್ಯದ ಬದುಕಿನ ಒತ್ತಡ, ಉದ್ವಿಗ್ನತೆ, ಕೋಮುದಳ್ಳುರಿ, ಕುಸಿಯುತ್ತಿರುವ ಮೌಲ್ಯಗಳು, ಕೌಟುಂಬಿಕ ಸಂಘರ್ಷ ಇಂಥ ಅನೇಕ ಸಂಗತಿಗಳು ಸಮಕಾಲೀನ ಕನ್ನಡ ಕಾವ್ಯದಲ್ಲಿ ಒಡಮೂಡಿವೆ. ಆದರೆ ಈ ಕಾಲದ ವೇದನೆಗಳನ್ನು ಹೊಸ ಪರಿಭಾಷೆ ಮತ್ತು ಹೊಸ ನುಡಿಗಟ್ಟುಗಳಲ್ಲಿ ಅಭಿವ್ಯಕ್ತಪಡಿಸುವಲ್ಲಿ ಬಹುತೇಕ ಕವಿಗಳು ಹೆಚ್ಚು ಸಫಲರಾಗಿಲ್ಲ.

೪. ಈ ಸಂದರ್ಭದಲ್ಲಿ ಬಹುತೇಕ ಕವಿಗಳು ಕಾವ್ಯರಚನೆಯಲ್ಲಿ ತೊಡಗಿರುವರಾದರೂ ಗಂಭೀರವಾಗಿ ಕಾವ್ಯವನ್ನೇ ಧ್ಯಾನಿಸುವ ಕವಿಗಳ ಸಂಖ್ಯೆ ವಿರಳ. ಕವಿಗಳು ಎರಡು ಮೂರು ಸಂಕಲನಗಳನ್ನು ತರುವಷ್ಟರಲ್ಲಿ ಕಾವ್ಯಕ್ಷೇತ್ರದಿಂದ ನೇಪಥ್ಯಕ್ಕೆ ಸರಿಯುತ್ತಿದ್ದಾರೆ. ಇದರಿಂದ ಸಮಕಾಲೀನ ಕಾವ್ಯ ಹಲವು ಪ್ರಯೋಗಗಳಿಗೆ ತೆರೆದುಕೊಳ್ಳಲು ಹಿನ್ನೆಡೆಯಾಗಿದೆ.

೫. ಕನ್ನಡ ಕಾವ್ಯ ಜಾಗತೀಕರಣ ತಂದೊಡ್ಡಿರುವ ಹಲವು ಬಗೆಯ ಬಿಕ್ಕಟ್ಟುಗಳ ಬಗ್ಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದೆ. ಆ ಮೂಲಕ ಪರಿಸರ ವಿನಾಶ ಮತ್ತು ಬಂಡವಾಳಶಾಹಿ ಆರ್ಥಿಕತೆಯಿಂದಾಗುವ ಅಮಾನವೀಯ ಕ್ರೌರ್ಯಗಳನ್ನು ತೀವ್ರವಾಗಿ ವಿರೋಧಿಸಿದೆ.

೬. ಕೋಮುವಾದ ಮತ್ತು ಮತೀಯ ಸಂಘರ್ಷಗಳಿಗೆ ಪುಷ್ಟಿ ನೀಡುತ್ತ, ಜನರ ಭಾವನೆಗಳನ್ನು ಕೆರಳಿಸಿ ಅವರನ್ನು ಪ್ರಚೋದಿಸುತ್ತಿರುವ ಪ್ರಭುತ್ವಗಳ ಕ್ರಮವನ್ನು ಸಮಕಾಲೀನ ಕಾವ್ಯ ಪ್ರತಿರೋಧ ವ್ಯಕ್ತಪಡಿಸುತ್ತಲೇ ಮಾನವೀಯ ಪ್ರೀತಿಯ ಹುಡುಕಾಟ ಮಾಡಲೆತ್ನಿಸಿದೆ.

*** ಅಧ್ಯಯನದ ಸಾಧ್ಯತೆಗಳು**

೨೧ನೆಯ ಶತಮಾನದ ಕಾವ್ಯವನ್ನು ಆಕರವಾಗಿಟ್ಟುಕೊಂಡು, 'ಸಮಕಾಲೀನ ಕನ್ನಡ ಕಾವ್ಯ: ಸ್ವರೂಪ ಮತ್ತು ಧೋರಣೆಗಳು' ಎಂಬ ಪ್ರಸ್ತುತ ಪ್ರಬಂಧದಲ್ಲಿ ಎಂಬ ಈ ಹೊತ್ತಿನ ಕನ್ನಡ ಕಾವ್ಯದ ಮುಖ್ಯ ಒಲವುಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಹೀಗೆ ಅಧ್ಯಯನ ನಡೆಸುವಾಗ ಕೆಲವು ಕವಿಗಳನ್ನಷ್ಟೇ ಇಲ್ಲಿ ಚರ್ಚಿಸಲಾಗಿದೆ. ಇದರ ಹೊರತಾಗಿಯೂ ಇನ್ನುಳಿದ ಕವಿಗಳನ್ನು ಆನುಷಂಗಿಕವಾಗಿ ಚರ್ಚೆಗೆ ಒಳಗು ಮಾಡಲಾಗಿದೆ. ಆದರೆ ಈ ಕಾಲದ ಎಲ್ಲಾ ಕವಿ ಮತ್ತು ಕೃತಿಗಳನ್ನು ಅಧ್ಯಯನ ಮಾಡಲು ಹೊರಟರೆ ಸಮೀಕ್ಷೆಯ ರೂಪ ತಾಳುವ ಜೊತೆಗೆ ವ್ಯಾಪ್ತಿ ದೊಡ್ಡದಾಗುವ ಅಪಾಯವೂ ಎದುರಾಗುತ್ತದೆ. ಹಾಗಾಗಿ ಮುಖ್ಯವಾಗಿ ಈ ಕಾಲದ ಕನ್ನಡ ಕಾವ್ಯವು ಅನುಸಂಧಾನಗೊಳ್ಳುತ್ತಿರುವ ವಿಷಯಕ್ಕೆ ಈ ಅಧ್ಯಯನದಲ್ಲಿ ಒತ್ತುಕೊಡಲಾಗಿದೆ.

ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಸಮಕಾಲೀನ ಕವಿಗಳೆಲ್ಲರ ಬಗೆಗೆ ಪ್ರತ್ಯೇಕವಾಗಿ ಚರ್ಚೆ ಮಾಡಲು ಆಗಿಲ್ಲ. ಬದಲಾಗಿ ಅಧ್ಯಯನದ ವ್ಯಾಪ್ತಿಗೆ ಒಳಪಡುವ ಕವಿತೆಗಳನ್ನಷ್ಟೇ ವಿವೇಚಿಸಲಾಗಿದೆ. ಆದರೆ ಇಲ್ಲಿ ಸೇರದಿರುವ ಕವಿತೆ ಶ್ರೇಷ್ಠ ಕವಿತೆಯಲ್ಲ ಎಂಬ ಭಾವನೆ

ಇಲ್ಲಿನದ್ದಲ್ಲ. ಅಧ್ಯಯನದ ದೃಷ್ಟಿಕೋನಕ್ಕೆ ಅನುಸಾರವಾಗಿ ಈ ಅಧ್ಯಯನ ಸಾಗಿದೆ. ಈ ದೃಷ್ಟಿಯಿಂದ ಪ್ರಸ್ತುತ ಕಾವ್ಯಕ್ಷೇತ್ರದಲ್ಲಿ ಕೃಷಿ ಮಾಡುತ್ತಿರುವ ಎಲ್ಲರನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲು ಸಾಧ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ೨೧ನೆಯ ಶತಮಾನದ ಕನ್ನಡ ಕಾವ್ಯದ ಬಗೆಗೆ ಬೇರೆ ಬೇರೆ ಪರಿಕಲ್ಪನೆಗಳನ್ನು ಆಧರಿಸಿ ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಿದೆ.

ಇಲ್ಲಿ ಮುಖ್ಯವಾಗಿ ಕವಿತೆ, ಗಜಲ್, ಹೋರಾಟದ ಹಾಡುಗಳು, ದ್ವಿಪದಿ ಸೇರಿದಂತೆ ಕೆಲವು ಪ್ರಕಾರಗಳನ್ನಷ್ಟೇ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಉಳಿದಂತೆ ಎಂ. ವೀರಪ್ಪ ಮೊಯಿಲಿ ಅವರ 'ರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ, ಲತಾ ರಾಜಶೇಖರ್ ಅವರ 'ಬುದ್ಧ ಮಹಾದರ್ಶನ', 'ಶ್ರೀರಾಮ ಮಹಾದರ್ಶನ', 'ಬಸವ ಮಹಾದರ್ಶನ', 'ಮಹಾವೀರ ಮಹಾದರ್ಶನ', 'ಯೇಸು ಮಹಾದರ್ಶನ' ಎಂಬ ಬೃಹತ್ ಗಾತ್ರದ ಮಹಾಕಾವ್ಯಗಳು, ಚೆನ್ನಣ್ಣ ವಾಲೀಕಾರ ಅವರ 'ವ್ಯೋಮಾವ್ಯೋಮ' ಎಂಬ ಗಪದ್ಯ, ಇತರ ಖಂಡಕಾವ್ಯ ಮತ್ತು ಮಕ್ಕಳ ಕಾವ್ಯವನ್ನು ಈ ಅಧ್ಯಯನದಲ್ಲಿ ಬಳಸಿಕೊಂಡಿಲ್ಲ. ಕುತೂಹಲದ ವಿಷಯವೆಂದರೆ ಗಜಲ್ ಮತ್ತು ಖಂಡಕಾವ್ಯಗಳನ್ನು ಇತ್ತೀಚೆಗೆ ಕವಿಗಳು ಹೆಚ್ಚಾಗಿ ಬರೆಯುತ್ತಿದ್ದಾರೆ. ಈ ಎರಡು ಪ್ರಕಾರಗಳನ್ನು ಕುರಿತು ಪ್ರತ್ಯೇಕ ಅಧ್ಯಯನ ಮಾಡಲು ಸಾಧ್ಯವಿದೆ.

ಎಲ್ಲಕ್ಕಿಂತ ಮುಖ್ಯವಾಗಿ ಸಮಕಾಲೀನ ಕನ್ನಡ ಕಾವ್ಯವನ್ನು ಕುರಿತು ಅಧ್ಯಯನ ಮಾಡುವುದು ಮತ್ತು ಅದರ ಸಮಗ್ರ ಚಿತ್ರಣವನ್ನು ಕುರಿತು ಮೌಲ್ಯ ನಿರ್ಧರಿಸುವುದು ತತ್‌ಕ್ಷಣಕ್ಕೆ ತುಂಬಾ ಕಷ್ಟ. ಹಾಗಾಗಿ ಈ ಹೊತ್ತಿನ ಕಾವ್ಯದ ಕೆಲವು ಮುಖ್ಯ ಒಲವುಗಳ ಬಗ್ಗೆ ಪ್ರಸ್ತುತ ಪ್ರಬಂಧದಲ್ಲಿ ಹೆಚ್ಚು ಒತ್ತುಕೊಡಲಾಗಿದೆ.

ಸಮಕಾಲೀನ ಕನ್ನಡ ಕಾವ್ಯದ ವಸ್ತು, ಆಶಯ, ತಂತ್ರ ಹಾಗೂ ಇತ್ತೀಚಿನ ಕಾವ್ಯದಲ್ಲಿ ಬಳಕೆಯಾಗಿರುವ ಕಾವ್ಯಭಾಷೆ ಇತ್ಯಾದಿ ಅಂಶಗಳ ಬಗ್ಗೆ ಹೆಚ್ಚು ಅಧ್ಯಯನಗಳಾಗಬೇಕಿದೆ. ಇವುಗಳ ಜೊತೆಗೆ ಭಿನ್ನ ಭಿನ್ನ ವಸ್ತು, ವಿಷಯಗಳನ್ನು ಆಧರಿಸಿದ ಕವಿ-ಕಾವ್ಯಗಳನ್ನು ತೌಲನಿಕ ವಿಧಾನದಲ್ಲಿ ಅಧ್ಯಯನ ಮಾಡುವ ಸಾಧ್ಯತೆಯೂ ಮುಂದಿನ ಅಧ್ಯಯನಗಳಿಗೆ ಇದೆ.

'ಪರಂಪರೆ ಮತ್ತು ಆಧುನಿಕತೆ' ಇವೆರಡನ್ನೂ ಸಮ್ಮಿಳಿತಗೊಳಿಸಿಕೊಳ್ಳುವ ಹಾಗೂ ಪರಂಪರೆಯ ಕೊಂಡಿಯಾಗಿ ಕಾವ್ಯ ರಚಿಸುವ ಉಮೇದಿನ ಬಗ್ಗೆ ಇತ್ತೀಚಿನ ಕವಿಗಳಿಗೆ ಆಸಕ್ತಿ ಇದ್ದಂತಿಲ್ಲ. ಆದ್ದರಿಂದ ಪರಂಪರೆ ಮತ್ತು ಸಮಕಾಲೀನ ಕನ್ನಡ ಕಾವ್ಯದ ನಡುವೆ ಏರ್ಪಟ್ಟಿರುವ ಅನುಸಂಧಾನದ ಹೊಸ ಹುಡುಕಾಟವನ್ನು ಮಾಡಬಹುದು. ಅಷ್ಟೇ ಅಲ್ಲ, ಇದರ ಜೊತೆಗೆ ಪರಂಪರೆ ಮತ್ತು ಸಮಕಾಲೀನ ಕಾವ್ಯದ ನಡುವಿನ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡುವ ಸಾಧ್ಯತೆ ಮುಂದಿನ ಅಧ್ಯಯನಗಳಿದೆ. ಇದರಿಂದ ಕಾವ್ಯದ ವಸ್ತು, ಆಶಯ, ಪ್ರಕಾರದಲ್ಲಿ ಆಗಿರುವ ಪಲ್ಲಟಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಎಲ್ಲಾ ಅಂಶಗಳು ಮುಂದಿನ ಅಧ್ಯಯನಗಳಿಗೆ ಹೊಸ ಸಾಧ್ಯತೆಗಳನ್ನು ಕಲ್ಪಿಸುತ್ತದೆ.



# ಅನುಬಂಧಗಳು

೧. ಮೂಲ ಆಕರಗಳು

೨. ಪರಾಮರ್ಶನ ಗ್ರಂಥಗಳು

೩. ನಿಯತಕಾಲಿಕೆಗಳು ಮತ್ತು ಪತ್ರಿಕೆಗಳು

# ೧. ಮೂಲ ಆಕರಗಳು

೧. ಅಕ್ಷತಾ ಕೆ., ೨೦೦೭, **ರೆಕ್ಕೆಬಿಚ್ಚಿ ಆಕಾಶ ನೆಚ್ಚಿ**, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೨. ಅಕ್ಷತಾ ಹುಂಚದಕಟ್ಟೆ, ೨೦೧೫, **ನೀರ ಮೇಲಿನ ಚಿತ್ರ**, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೩. ಅನಸೂಯ ಕಾಂಬಳೆ, ೧೯೯೯, **ಮುಳ್ಳು ಕಂಟಿಯ ನಡುವೆ**, ಹೊಸದಿಕ್ಕು ಪ್ರಕಾಶನ, ಬೆಂಗಳೂರು.

೪. ಅನಸೂಯ ಕಾಂಬಳೆ(ಸಂ), ೨೦೧೦, **ಕವಿತೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫. ಅನಸೂಯ ಕಾಂಬಳೆ, ೨೦೧೧, **ಮತ್ಸ್ಯಗಂಧಿಯ ಹಾಡು**, ಕೆಂಗುಲಾಬಿ ಪ್ರಕಾಶನ, ಕೂಡ್ಲಿಗಿ.

೬. ಅನುಪಮ ಎಚ್.ಎಸ್.(ಸಂ), ೨೦೧೫, **ಕಾವ್ಯಬೋಧಿ**, ಕವಿ ಪ್ರಕಾಶನ, ಕವಲಕ್ಕಿ.

೭. ಅನುಪಮ ಎಚ್.ಎಸ್., ೨೦೧೬, **ಬುದ್ಧ ಚರಿತೆ**, ಲಡಾಯಿ ಪ್ರಕಾಶನ, ಗದಗ.

೮. ಆರೀಫ್ ರಾಜಾ, ೨೦೧೩, **ಜಂಗಮ ಫಕೀರನ ಜೋಳಿಗೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೯. ಉಗಮ ಶ್ರೀನಿವಾಸ, ೨೦೦೮, **ಒಂದು ಬಟ್ಟೆಚೂರು**, ಟ್ರೀ ೫ ಪ್ರಕಾಶನ, ವೆಂಕಟಾಲ, ಬೆಂಗಳೂರು.

೧೦. ಉಷಾ ಸ.(ಸಂ), ೨೦೦೧, **ಕವಿತೆ** ೨೦೦೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೧. ಕವಿತಾ ರೈ, ೨೦೧೦, **ನೀರತೇಜಿಯನೇರಿ**, ಸೃಷ್ಟಿ ಪ್ರಕಾಶನ, ಬೆಂಗಳೂರು.

೧೨. ಕವಿತಾ ರೈ, ೨೦೧೩, **ನೀರ ಮಾಡು**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೩. ಕಾರ್ಪೆಂಟರ್ ವಿ.ಆರ್., ೨೦೦೭, **ಸಿಗ್ನಲ್ ಟವರ್**, ಅಕ್ಕ ಪ್ರಕಾಶನ, ಕುಣಿಗಲ್.

೧೪. ಕಾರ್ಪೆಂಟರ್ ವಿ.ಆರ್., ೨೦೧೧, **ಕಾರ್ಪೆಂಟರ್ ಪದ್ಯಗಳು**, ಅಂಕ ಪ್ರಕಾಶನ, ಬೆಂಗಳೂರು.

೧೫. ಕೃಷ್ಣಮೂರ್ತಿ ಬಿಳಿಗೆರೆ, ೨೦೦೮, **ಪದ್ಯದ ಮರ**, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೧೬. ಕೃಷ್ಣಮೂರ್ತಿ ಬಿಳಿಗೆರೆ, ೨೦೧೦, **ಬಿಳಿಗೆರೆಯ ಹಾಡುಗಳು**, ನಮ್ಮ ಪ್ರಕಾಶನ, ಬಿಳಿಗೆರೆ.

೧೭. ಗಣೇಶ ಹೊಸ್ಮನೆ, ೨೦೧೦, **ಯಾರೂ ನೆಡದ ಮರ**, ಲಡಾಯಿ ಪ್ರಕಾಶನ, ಗದಗ.

೧೮. ಗಣೇಶ ಹೊಸ್ಮನೆ, ೨೦೧೪, **ಹರಿದು ಕೂಡುವ ಕಡಲು**, ಲಡಾಯಿ ಪ್ರಕಾಶನ, ಗದಗ.

೧೯. ಚಂದ್ರಶೇಖರ ಕಂಬಾರ, ೨೦೦೯, **ಎಲ್ಲಿದೆ ಶಿವಾಪುರ**, ಅಭಿನವ ಪ್ರಕಾಶನ, ಬೆಂಗಳೂರು.

೨೦. ಚಂದ್ರಿಕಾ ಪಿ., ೧೯೯೮, **ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ**, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೨೧. ಚಂದ್ರಿಕಾ ಪಿ., ೨೦೦೨, **ಸೂರ್ಯಗಂಧೀ ಧರಣಿ**, ಅಕ್ಷರ ಪ್ರಕಾಶನ, ಹೆಗ್ಗೋಡು.

೨೨. ಚಂದ್ರಿಕಾ ಪಿ., ೨೦೧೨, **ತಾಮ್ರ ವರ್ಣದ ತಾಯಿ**, ಅಕ್ಷರ ಪ್ರಕಾಶನ, ಹೆಗ್ಗೋಡು.

೨೩. ಚಿದಾನಂದ ಸಾಲಿ, ೨೦೦೮, **ಕಡಲ ಹಕ್ಕಿಯ ರೆಕ್ಕೆ**, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೨೪. ಚಿದಾನಂದ ಸಾಲಿ(ಸಂ), ೨೦೧೫, **ಕನ್ನಡ ಗಜಲ್**, ಸಾಹಿತ್ಯ ಅಕಾದೆಮಿ, ನವದೆಹಲಿ.

೨೫. ಜಂಬಣ್ಣ ಅಮರಚಿಂತ, ೨೦೦೩, **ಹರಿಯುವ ನದಿಗೆ ಮೈಯೆಲ್ಲ ಕಾಲು**, ನಾಗಶ್ರೀ ಪ್ರಕಾಶನ, ಬೆಂಗಳೂರು.

೨೬. ಜಂಬಣ್ಣ ಅಮರಚಿಂತ, ೨೦೦೫, **ಮುಳ್ಳಿನ ಬಾಯಲ್ಲಿ ಹೂ ನಾಲಗೆ**, ಸುಮುಖ ಪ್ರಕಾಶನ, ಬೆಂಗಳೂರು.

೨೭. ಜಯಪ್ರಕಾಶ ಬಂಜಗೆರೆ, ೨೦೧೫, **ಬಂಜಗೆರೆ: ಈವರೆಗಿನ ಕವಿತೆಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೮. ದಸ್ತಗೀರಸಾಬ್ ದಿನ್ನಿ(ಸಂ), ೨೦೧೦, **ಸೂರ್ಯನ ಬೆಳದಿಂಗಳ ಕನಸು**, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು.

೨೯. ನಟರಾಜ ಬೂದಾಳ್(ಸಂ), ೨೦೧೬, **ಕೋ**, ಶಾಹು ಪ್ರಕಾಶನ, ಮಾಲೂರು.

೩೦. ನರಸಿಂಹಸ್ವಾಮಿ ಕೆ.ಎಸ್., ೨೦೦೩, **ಹಾಡು-ಹಸೆ**, ಅಂಕಿತ ಪುಸ್ತಕ, ಬೆಂಗಳೂರು.

೩೧. ಪ್ರತಿಭಾ ನಂದಕುಮಾರ್, ೨೦೧೦, **ಅಹಾ, ಪುರುಷಾಕಾರಂ!**, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ.

೩೨. ಪೀರ್‌ಬಾಷಾ ಬಿ., ೨೦೦೯, **ದೇವರು ಮನುಷ್ಯರಾದ ದಿನ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೩. ಪೀರ್‌ಬಾಷ ಬಿ., ೨೦೧೦, **ಅಕ್ಕ ಸೀತಾ ನಿನ್ನಂತೆ ನಾನೂ ಶಂಕಿತ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೪. ಪುಷ್ಪ ಎಚ್.ಎಲ್., ೨೦೦೯, **ಲೋಹದ ಕಣ್ಣು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೫. ಬಸವರಾಜ್ ಹೃತ್ಸಾಕ್ಷಿ, ೨೦೧೬, **ಕಸಬಾರಿಗೆ ಪಾದ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೬. ಬಸವರಾಜ ಸೂಳಿಭಾವಿ, ೨೦೧೩, **ದೀಪದ ಗಿಡ,** ಕವಿ ಪ್ರಕಾಶನ, ಕವಲಕ್ಕಿ, ಹೊನ್ನಾವರ.

೩೭. ಮಂಜುನಾಥ ವಿ.ಎಂ, ೨೦೦೫, **ಲೆವೆಲ್ ಕ್ರಾಸಿಂಗ್,** ಅಕ್ಕ ಪ್ರಕಾಶನ, ಕುಣಿಗಲ್.

೩೮. ಮಲ್ಲಿಕಾರ್ಜುನಗೌಡ ತೂಲಹಳ್ಳಿ, ೨೦೧೪, **ತುಂಗಭದ್ರೆಯ ಪಾತ್ರದಲ್ಲಿ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೩೯. ಮೃತ್ಯುಂಜಯ ಹೊರಕೇರಿ(ಸಂ), ೧೯೯೬, **ಕವಿತೆ-೧೯೯೪,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೦. ಮಾಧವಿ ಭಂಡಾರಿ ಕೆರೆಕೋಣ, ೨೦೧೧, **ನೀನುಂಟು ನಿನ್ನ ರೆಕ್ಕೆಗಳುಂಟು,** ಚಿಂತನ ಪುಸ್ತಕ, ಬೆಂಗಳೂರು.

೪೧. ಮಾನಸಯ್ಯ ಆರ್, ೨೦೦೭, **ರಕ್ತದ ರಂಗೋಲಿ,** ದುಡಿಮೆ ಪ್ರಕಾಶನ, ಬೆಂಗಳೂರು.

೪೨. ಮಾಲತಿ ಪಟ್ಟಣಶೆಟ್ಟಿ(ಸಂ), ೧೯೯೭, **ಕವಿತೆ-೧೯೯೬,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೩. ಮಿತಾ ದೇವನೂರು, ೨೦೦೩, **ಮೋಡದಲ್ಲಿ ಒಂದು ಕಣ,** ಸಂಗಾತಿ ಪ್ರಕಾಶನ, ಬೆಂಗಳೂರು.

೪೪. ಮೂಡ್ನಾಕೂಡು ಚಿನ್ನಸ್ವಾಮಿ, ೧೯೯೮, **ನಾನೊಂದು ಮರವಾಗಿದ್ದರೆ,** ವಿಶ್ವಾಲಯ ಪ್ರಕಾಶನ, ಬೆಂಗಳೂರು.

೪೫. ಮೂಡ್ನಾಕೂಡು ಚಿನ್ನಸ್ವಾಮಿ, ೨೦೦೦, **ಮತ್ತೆ ಮಳೆ ಬರುವ ಮುನ್ನ,** ದಲಿತ ಸಾಹಿತ್ಯ ಪರಿಷತ್ತು, ಗದಗ.

೪೬. ಮೂಡ್ನಾಕೂಡು ಚಿನ್ನಸ್ವಾಮಿ, ೨೦೦೧, **ಚಪ್ಪಲಿ ಮತ್ತು ನಾನು,** ಶುಭದ ಪ್ರಕಾಶನ, ಬೆಂಗಳೂರು.

೪೭. ಮೂಡ್ನಾಕೂಡು ಚಿನ್ನಸ್ವಾಮಿ, ೨೦೦೩, **ಕನಕಾಂಬರಿ,** ಅಭಿರುಚಿ ಪ್ರಕಾಶನ, ಮೈಸೂರು.

೪೮. ಮೂಡ್ನಾಕೂಡು ಚನ್ನಸ್ವಾಮಿ, ೨೦೦೪, **ಚಂದಿರನ ಕಣ್ಣು ಇಂಗಲಾರದ ಹುಣ್ಣು,** ಮಾನವಧರ್ಮ ಪೀಠ, ಬೆಂಗಳೂರು.

೪೯. ಮೂಡ್ನಾಕೂಡು ಚಿನ್ನಸ್ವಾಮಿ(ಸಂ), ೨೦೦೬, **ಕವಿತೆ-೨೦೦೬,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೦. ಯಲ್ಲಪ್ಪ ಟಿ, ೨೦೦೮, **ಕಡಲಿಗೆ ಕಳಿಸಿದ ದೀಪ,** ಸಂಚಯ, ಬೆಂಗಳೂರು.

೫೧. ಯಲ್ಲಪ್ಪ ಟಿ, ೨೦೧೨, **ಚಿಟ್ಟೆ ಮತ್ತು ಜೀವಯಾನ,** ಅಭಿನವ ಪ್ರಕಾಶನ, ಬೆಂಗಳೂರು.

೫೨. ರಮೇಶ ಎಚ್.ಆರ್, ೨೦೧೩, **ನಿಜಸ್ವಪ್ನ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೫೩. ರಮೇಶ ಅರೋಲಿ, ೨೦೧೪, **ಜುಲುಮೆ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೫೪. ರಮೇಶ ನಾಗತಿಹಳ್ಳಿ, ೨೦೦೮, **ಸಮುದ್ರ ಮತ್ತು ಮಳೆ,** ಸೃಷ್ಟಿ ಪ್ರಕಾಶನ, ಬೆಂಗಳೂರು.

೫೫. ರವಿಕುಮಾರ ನೀಹ, ೨೦೧೧, **ಜಲಜಂಬೂಕನ್ನೆ,** ಅನ್ನಪೂರ್ಣ ಪ್ರಕಾಶನ, ಬೆಂಗಳೂರು.

೫೬. ರವಿ ಹಂಪಿ, ೨೦೦೭, **ಸಖಿ ಸಖಿ,** ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು.

೫೭. ರವೀಂದ್ರಕುಮಾರ್ ಜಿ.ಕೆ.(ಸಂ), ೨೦೦೨, **ಕವಿತೆ-೨೦೦೧,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೮. ರಾಮಪ್ಪ ಮಾದರ, ೨೦೦೫, **ಕೆರ ಹೊತ್ತ ಬಸವ,** ಜನವಿದ್ಯಾ, ಪ್ರಸಾರಾಂಗ, ಹೂವಿನಹಡಗಲಿ.

೫೯. ಲಕ್ಷ್ಮೀಪತಿ ಕೋಲಾರ(ಸಂ), ೧೯೯೯, **ಕವಿತೆ-೧೯೯೮,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೦. ಲಕ್ಷ್ಮೀಪತಿ ಕೋಲಾರ, ೨೦೦೯, **ನೀಲಿತತ್ತಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೧. ಲಕ್ಕೂರು ಸಿ. ಆನಂದ, ೨೦೦೪, **ಊರಿಂದ ಊರಿಗೆ,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೬೨. ಲಕ್ಕೂರು ಸಿ. ಆನಂದ, ೨೦೦೬, **ಇಪ್ಪತ್ತರ ಕಲ್ಲಿನ ಮೇಲೆ,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೬೩. ಲಕ್ಕೂರು ಸಿ. ಆನಂದ, ೨೦೦೮, **ಬಟವಾಡೆಯಾಗದ ರಶೀದಿ,** ಅಭಿನವ ಪ್ರಕಾಶನ, ಬೆಂಗಳೂರು.

೬೪. ಲಕ್ಕೂರು ಸಿ. ಆನಂದ, ೨೦೧೦, **ಇತಿ ನಿನ್ನ ವಿಧೇಯ,** ಕಣ್ವ ಪ್ರಕಾಶನ, ಬೆಂಗಳೂರು.

೬೫. ಲಕ್ಕೂರು ಆನಂದ, ೨೦೧೩, **ಉರಿವ ಏಕಾಂತ ದೀಪ,** ಲಡಾಯಿ ಪ್ರಕಾಶನ, ಗದಗ.

೬೬. ವಸಂತಕುಮಾರ್ ಪೆರ್ಲ(ಸಂ), ೨೦೧೦, **ಕವಿತೆ-೨೦೦೯,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೭. ವಿಕ್ರಮ ವಿಸಾಜಿ(ಸಂ), ೨೦೧೪, **ಮತ್ತೆ ಬಂತು ಶ್ರಾವಣ,** ಕ್ರೈಸ್ಟ್ ಯೂನಿವರ್ಸಿಟಿ, ಕನ್ನಡ ಸಂಘ, ಬೆಂಗಳೂರು.

೬೮. ವಿಜಯರಾಘವನ್ ಆರ್, ೨೦೧೦, **ಹಳದಿ ಚಿಟ್ಟೆ,** ವಿಹಾ ಪುಸ್ತಕ, ಬೆಂಗಳೂರು.

೬೯. ವಿಜಯರಾಘವನ್ ಆರ್., ೨೦೧೨, **ನೋಟ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೭೦. ವಿಜಯರಾಘವನ್ ಆರ್., ೨೦೧೫, **ಅನುಸಂಧಾನ,** ವಿಹಾ ಪುಸ್ತಕ, ಬೆಂಗಳೂರು.

೭೧. ವಿಭಾ, ೨೦೧೩, **ಜೀವ ಮಿಡಿತದ ಸದ್ದು,** ಲಡಾಯಿ ಪ್ರಕಾಶನ, ಗದಗ.

೭೨. ವಿವಿಧ ಲೇಖಕರು, ೨೦೧೧, **ಹೋರಾಟದ ಹಾಡುಗಳು,** ದಲಿತ ಸಂಘರ್ಷ ಸಮಿತಿ, ಬೆಂಗಳೂರು.

೭೩. ವೀರಣ್ಣ ಮಡಿವಾಳರ, ೨೦೧೦, **ನೆಲದ ಕರುಣೆಯ ದನಿ,** ಕೆಂಗುಲಾಬಿ ಪ್ರಕಾಶನ, ಕೂಡ್ಲಿಗಿ.

೭೪. ಶಂಕರ ಕಟಗಿ(ಸಂ), ೨೦೦೦, **ಕವಿತೆ-೧೯೯೯,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭೫. ಶಾಂತರಸ, ೨೦೦೬, **ಗಜಲ್ ಮತ್ತು ಬಿಡಿ ದ್ವಿಪದಿ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೭೬. ಶಿವಕುಮಾರ್ ಕಂಪ್ಲಿ, ೨೦೦೭, **ಅಗ್ನಿ ಕಿರೀಟ,** ಸಂಸ್ಕೃತಿ ಪ್ರಕಾಶನ, ಬಳ್ಳಾರಿ.

೭೭. ಶಿವಪ್ರಕಾಶ್ ಎಚ್.ಎಸ್, ೨೦೦೮, **ಮಬ್ಬಿನ ಹಾಗೆ ಕಣಿವೆಯಾಸಿ,** ಅಭಿನವ ಪ್ರಕಾಶನ, ಬೆಂಗಳೂರು.

೭೮. ಶ್ರೀಧರ ಪಿಸ್ಸೆ(ಸಂ), ೨೦೦೬, **ಕವಿತೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭೯. ಶ್ರೀನಿವಾಸ ರಾಜು ಮತ್ತು ಇತರರು(ಸಂ), ೨೦೧೨, **ಬಿಡುಗಡೆಯ ಬೆಳಕು,** ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೦. ಶೂದ್ರ ಶ್ರೀನಿವಾಸ, ೨೦೧೫, **ಅವಳು ನಡೆದಂತೆ,** ಲಡಾಯಿ ಪ್ರಕಾಶನ, ಗದಗ.

೮೧. ಷರೀಫಾ ಕೆ.(ಸಂ), **ಹೊಸ ಶತಮಾನದ ಕಾವ್ಯ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೨. ಸಂಧ್ಯಾದೇವಿ, ೨೦೦೫, **ಮಾತು-ಚಿಟ್ಟೆ ಬೆಂಕಿ-ಬೆರಳು ಮುರಿದ ಮುಳ್ಳಿನಂತೆ ಜ್ಞಾನ,** ಅಧ್ಯಯನ ಮಂಡಲ, ಬೆಂಗಳೂರು.

೮೩. ಸತ್ಯಾನಂದ ಪಾತ್ರೋಟ, ೨೦೦೪, **ನದಿಗೊಂದು ಕನಸು ಮತ್ತು ಅವಳು,** ಸಮತಾ ಪ್ರಕಾಶನ, ಬಾಗಲಕೋಟೆ.

೮೪. ಸನದಿ ಬಿ.ಎ. ಮತ್ತು ಇತರರು(ಸಂ), ೨೦೦೬, **ಸುವರ್ಣ ಕಾವ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೮೫. ಸರಜೂ ಕಾಟ್ಕರ್, ೨೦೦೭, **ಗಾಂಧಿ ಟು ಗೋದ್ರಾ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೮೬. ಸರಸ್ವತಿ ಚಿಮ್ಮಲಗಿ(ಸಂ), ೧೯೯೯, **ಕವಿತೆ-೧೯೯೫,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೭. ಸರಸ್ವತಿ ದು., ೨೦೦೬, **ಜೀವ ಸಂಪಿಗೆ,** ಅಭಿನವ ಪ್ರಕಾಶನ, ಬೆಂಗಳೂರು.

೮೮. ಸವಿತಾ ನಾಗಭೂಷಣ, ೨೦೧೬, **ಕರುಣಾಳು,** ಅಕ್ಷರ ಪ್ರಕಾಶನ, ಹೆಗ್ಗೋಡು.

೮೯. ಸಿದ್ಧಯ್ಯ ಕೆ.ಬಿ, ೨೦೦೩, **ಅನಾತ್ಮ**, ನೆಲಸಿರಿ ಪ್ರಕಾಶನ, ತುಮಕೂರು.

೯೦. ಸಿದ್ಧಯ್ಯ ಕೆ.ಬಿ, ೨೦೦೯, **ಗಲ್ಲೆಬಾನಿ**, ನಮ್ಮ ಪ್ರಕಾಶನ, ಬಿಳಿಗೆರೆ.

೯೧. ಸಿದ್ಧಲಿಂಗಯ್ಯ, ೨೦೦೫, **ನನ್ನ ಜನಗಳು ಮತ್ತು ಇತರ ಕವಿತೆಗಳು**, ಕ್ರಾಂತಿಸಿರಿ ಪ್ರಕಾಶನ, ಬೆಂಗಳೂರು.

೯೨. ಸಿದ್ಧರಾಮಯ್ಯ ಎಸ್.ಜಿ, ೨೦೧೦, **ಉರಿವ ಬತ್ತಿ ತೈಲ**, ಅಭಿನವ ಪ್ರಕಾಶನ, ಬೆಂಗಳೂರು.

೯೩. ಸಿದ್ಧರಾಮಯ್ಯ ಎಸ್.ಜಿ, ೨೦೧೪, **ಹೊಕ್ಕುಳ ಋತುಗಾನ**, ಪಲ್ಲವ ಪ್ರಕಾಶನ, ಚೆನ್ನಪಟ್ಟಣ.

೯೪. ಸಿದ್ಧಲಿಂಗಯ್ಯ, ೧೯೯೭, **ಆಯ್ದ ಕವಿತೆಗಳು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯೫. ಸಿದ್ಧಲಿಂಗಯ್ಯ, ೨೦೦೦, **ಮೆರವಣಿಗೆ**, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೯೬. ಸುಧೀಂದ್ರಕುಮಾರ್ ಆರ್., ೨೦೦೯, **ಆಕಾವ್ಯಕ್ಕೆ ಅರ್ಥ ಗೊತ್ತಿಲ್ಲ ನನಗೆ**, ಪ್ರಕಿರಣ ಪ್ರಕಾಶನ, ಮೈಸೂರು.

೯೭. ಸುಬ್ಬು ಹೊಲೆಯಾರ್, ೨೦೦೩, **ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು**, ದ್ರಾವಿಡ ಪ್ರಕಾಶನ, ಮೈಸೂರು.

೯೮. ಸುಬ್ಬು ಹೊಲೆಯಾರ್(ಸಂ), ೨೦೧೦, **ಕವಿತೆ-೨೦೦೭**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯೯. ಸುಬ್ಬು ಹೊಲೆಯಾರ್, ೨೦೧೩, **ಎಲ್ಲರ ಬೆರಳಲ್ಲೂ ಅಂಟಿಕೊಂಡ ದುಃಖವೆ**, ಸಂಸ್ಕೃತಿ ಪ್ರಕಾಶನ, ಬಳ್ಳಾರಿ.

೧೦೦. ಹಂಪಣ್ಣ ಎ.ಕೆ, ೨೦೦೯, **ದೀಪವಂಶ**, ಶಾಂತಮ್ಮ ಪ್ರಕಾಶನ, ಚಿತ್ರದುರ್ಗ.

೧೦೧. ಹನುಮಂತಯ್ಯ ಎನ್.ಕೆ., ೧೯೯೮, **ಹಿಮದ ಹೆಜ್ಜೆ**, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೦೨. ಹನುಮಂತಯ್ಯ ಎನ್.ಕೆ., ೨೦೧೫, **ಚಿತ್ರದ ಬೆನ್ನು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦೩. ಹನುಮಂತಯ್ಯ ಎನ್.ಕೆ., ೨೦೧೬, **ಮಾಂಸದಂಗಡಿಯ ನವಿಲು**, ಲಡಾಯಿ ಪ್ರಕಾಶನ, ಗದಗ.

೧೦೪. **ಹೋರಾಟದ ಹಾಡುಗಳು**, ಬೆಳ್ಳಿಚುಕ್ಕಿ ಪುಸ್ತಕಾಲಯ, ಮೈಸೂರು.

೧೦೫. ವಿವಿಧ ಲೇಖಕರು, ೧೯೮೦, **ಹೋರಾಟದ ಹಾಡುಗಳು**, ಕರ್ನಾಟಕ ದಲಿತ ಸಂಘರ್ಷ ಸಮಿತಿ ಪ್ರಕಟಣೆ, ಬೆಂಗಳೂರು.

೧೦೬. ವಿವಿಧ ಲೇಖಕರು, ೧೯೯೨, **ಹೋರಾಟದ ಹಾಡುಗಳು**, ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ, ಬೆಂಗಳೂರು.



## ೨. ಪರಾಮರ್ಶನ ಗ್ರಂಥಗಳು


೧. ಅಂಕುರ್ ಬೆಟಗೇರಿ, ೨೦೦೪, **ಹಿಡಿದ ಉಸಿರು,** ಅಭಿನವ ಪ್ರಕಾಶನ, ಬೆಂಗಳೂರು.

೨. ಅಕ್ಷರ ಕೆ.ವಿ.(ಸಂ), ೨೦೦೬, **ಪದ್ಯದ ಮಾತು ಬೇರೆ,** ಅಕ್ಷರ ಪ್ರಕಾಶನ, ಹೆಗ್ಗೋಡು.

೩. ಅಣ್ಣಯ್ಯಸ್ವಾಮಿ, ೨೦೦೦, **ಸಂಜೆ ತೊಟ್ಟಿಲು,** ಕ್ರಾಂತಿಸಿರಿ ಪ್ರಕಾಶನ, ಬೆಂಗಳೂರು.

೪. ಅನಂತಮೂರ್ತಿ ಯು.ಆರ್, ೧೯೭೧, **ಪ್ರಜ್ಞೆ ಮತ್ತು ಪರಿಸರ,** ಅಂಕಿತ ಪುಸ್ತಕ, ಬೆಂಗಳೂರು.

೫. ಅನಂತಮೂರ್ತಿ ಯು.ಆರ್, ೧೯೭೩, **ಸನ್ನಿವೇಶ,** ಅಕ್ಷರ ಪ್ರಕಾಶನ, ಹೆಗ್ಗೋಡು.

೬. ಅನಂತಮೂರ್ತಿ ಯು.ಆರ್, ೧೯೯೬, **ಪೂರ್ವಾಪರ,** ಅಕ್ಷರ ಪ್ರಕಾಶನ, ಹೆಗ್ಗೋಡು.

೭. ಅನಂತಮೂರ್ತಿ ಯು.ಆರ್, ೧೯೭೩, **ಕನ್ನಡ ಕಾವ್ಯ ಸಂಗ್ರಹ,** ನ್ಯಾಷನಲ್ ಬುಕ್ ಟ್ರಸ್ಟ್, ಹೊಸದೆಹಲಿ.

೮. ಅನಂತಮೂರ್ತಿ ಯು.ಆರ್, ೨೦೦೨, **ಇಲ್ಲಿಯವರೆಗಿನ ಕವಿತೆಗಳು,** ಪ್ರಿಸಮ್ ಬುಕ್ಸ್ ಪ್ರೈ.ಲಿ, ಬೆಂಗಳೂರು.

೯. ಅನಿಕೇತನ ಟಿ.ಎಸ್, ೨೦೧೩, **ಕಿರುನಾಲಿಗೆ,** ಸಮತಾ ಪ್ರಕಾಶನ, ತುಮಕೂರು.

೧೦. ಅನುಪಮ ಎಚ್.ಎಸ್, ೨೦೧೫, **ಸಹಗಮನ,** ಶ್ರೀರಾಘವೇಂದ್ರ ಪ್ರಕಾಶನ, ಅಂಕೋಲ.

೧೧. ಅಬ್ಬಾಸ್ ಮೇಲಿನಮನಿ, ೨೦೦೨, **ಪ್ರೀತಿ ಬದುಕಿನ ಹಾಡು,** ಆಸ್ಮಾ ಪ್ರಕಾಶನ, ಹುಸೇನಪೇಟೆ.

೧೨. ಅರವಿಂದ ಮಾಲಗತ್ತಿ, ೨೦೧೦, **ಸಿಲಿಕಾನ್ ಸಿಟಿ ಮತ್ತು ಕೋಗಿಲೆ,** ಅಭಿರುಚಿ ಪ್ರಕಾಶನ, ಮೈಸೂರು.

೧೩. ಅರುಣ್ ಜೋಳದ ಕೂಡ್ಲಿಗಿ, ೨೦೧೦, **ಅವ್ವನ ಅಂಗನವಾಡಿ,** ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೧೪. ಅಶೋಕ ಟಿ.ಪಿ, ೧೯೮೯, **ಸಾಹಿತ್ಯ ಸಂಪರ್ಕ,** ಅಕ್ಷರ ಪ್ರಕಾಶನ, ಸಾಗರ.

೧೫. ಆನಂದ ಕುಂಚನೂರ, ೨೦೧೬, **ವ್ಯೋಮ ತಂಬೂರಿ ನಾದ,** ಒನ್ ವ್ಹೀಲರ್ ಬೆಂಗಳೂರು.

೧೬. ಆನಂದ ವಿ, ಪಾಟೀಲ ೨೦೦೩, **ನಮನ,** ಅಭಿನವ ಪ್ರಕಾಶನ, ಬೆಂಗಳೂರು.

೧೭. ಆನಂದಮೂರ್ತಿ ಜಿ.ವಿ, ೨೦೦೭, **ನೀರಗಂಧ**, ಬೋಧಿಶ್ರೀ ಪ್ರಕಾಶನ, ಬೆಂಗಳೂರು.

೧೮. ಆರ್ಕೆ ಮಣಿಪಾಲ, ೨೦೦೬, **ವಿಮರ್ಶೆಯ ಸವಾಲು**, ಸಂವಾದ ಪ್ರಕಾಶನ, ಮಣಿಪಾಲ.

೧೯. ಆಶಾದೇವಿ ಎಂ.ಎಸ್, ೨೦೧೬, **ಬೆಳಕಿಗಿಂತ ಬೆಳ್ಳಗೆ**, ಸಾಹಿತ್ಯ ಅಕಾದೆಮಿ.

೨೦. ಆಶಾದೇವಿ ಎಂ.ಎಸ್, ೨೦೧೬, **ನಾರೀಕೇಳಾ**, ಪ್ರಜಾವಾಣಿ ಪ್ರಕಾಶನ, ಬೆಂಗಳೂರು.

೨೧. ಉಷಾ ಸ, ೨೦೧೫, **ಈ ನೆಲದ ಹಾಡು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೨. ಒಕ್ಕುಂದ ಎಂ.ಡಿ, ೨೦೦೨, **ತುಳುಕು**, ಲಡಾಯಿ ಪ್ರಕಾಶನ, ಗದಗ.

೨೩. ಕನಕ ಹಾ.ಮಾ, ೧೯೯೩, **ಹೊಳೆಬಾಗಿಲು**, ಅಕ್ಷರ ಪ್ರಕಾಶನ, ಹೆಗ್ಗೋಡು.

೨೪. ಕನಕ ಹಾ.ಮಾ, ೨೦೦೬, **ಅರಬ್ಬಿ ಎಂಬ ಕಡಲು**, ಅಕ್ಷರ ಪ್ರಕಾಶನ, ಹೆಗ್ಗೋಡು.

೨೫. ಕಮಲಾಕರ ಕಡವೆ, ೨೦೧೦, **ಮುಗಿಯದ ಮಧ್ಯಾಹ್ನ**, ಅಕ್ಷರ ಪ್ರಕಾಶನ, ಹೆಗ್ಗೋಡು.

೨೬. ಕರೀಗೌಡ ಬೀಚನಹಳ್ಳಿ, ೧೯೯೮, **ಏನೋ ಉಳಿಯುವುದು ಮತ್ತೆ**, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೨೭. ಕವಿತಾ ರೈ, ಆನಂದ ಕೋಡಿಂಬಳ(ಸಂ), ೨೦೧೧, **ಕೊಡಗಿನ ಶತಮಾನದ ಕಾವ್ಯ**, ಕ್ರೈಸ್ಟ್ ಯೂನಿವರ್ಸಿಟಿ. ಕನ್ನಡ ಸಂಘ.

೨೮. ಕಾವ್ಯ ಕಡಮೆ, ೨೦೧೩, **ಧ್ಯಾನಕ್ಕೆ ತಾರೀಖಿನ ಹಂಗಿಲ್ಲ**, ಅಹರ್ನಿಸಿ ಪ್ರಕಾಶನ, ಶಿವಮೊಗ್ಗ.

೨೯. ಕಾಳೇಗೌಡ ನಾಗವಾರ, ಆನಂದಮೂರ್ತಿ ಜಿ.ವಿ, ೨೦೦೦, **ಹಲವು ತೋಟದ ಹೂಗಳು**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೩೦. ಕೀರ್ತಿನಾಥ ಕುರ್ತುಕೋಟಿ, ೧೯೮೫, **ಕನ್ನಡ ಸಾಹಿತ್ಯ ಸಂಗಾತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ಕೀರ್ತಿನಾಥ ಕುರ್ತುಕೋಟಿ, ೧೯೯೧, **ಯುಗಧರ್ಮ ಮತ್ತು ಸಾಹಿತ್ಯ ದರ್ಶನ**, ಮನೋಹರ ಗ್ರಂಥಮಾಲಾ, ಧಾರವಾಡ.

೩೨. ಕೀರ್ತಿನಾಥ ಕುರ್ತುಕೋಟಿ, ೧೯೯೨, **ಬಯಲು ಆಲಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ಕೀರ್ತಿನಾಥ ಕುರ್ತುಕೋಟಿ, ೧೯೯೮, **ನೂರು ಮರ ನೂರು ಸ್ವರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಕುಮಾರ್ ಸಮತಳ(ಸಂ), ೨೦೧೪, **ಪ್ರತಿರೋಧದ ಹಾಡುಗಳು**, ಕಲಾಕುಸುಮ ಕ್ರಿಯೇಷನ್ಸ್, ಬೆಂಗಳೂರು.

೩೫. ಕೃಷ್ಣಮೂರ್ತಿ ಕೈದಾಳ, ೨೦೧೩, **ಸಮುದ್ರ**, ಪಲ್ಲವ ಪ್ರಕಾಶನ, ಬೆಂಗಳೂರು.

೩೬. ಕೃಷ್ಣ ಗಿಳಿಯಾರು, ೨೦೧೫, **ಸೂಜಿಗಣ್ಣಿಗೆ ಒಳಹೊರಗಿಲ್ಲ**, ಕವಿ ಪ್ರಕಾಶನ, ಉತ್ತರ ಕನ್ನಡ.

೩೭. ಕೃಷ್ಣಯ್ಯ ಎಂ.ಎಚ್(ಪ್ರ.ಸಂ), ೧೯೯೪, **ಆಧುನಿಕ ಕನ್ನಡ ಕಾವ್ಯ**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೩೮. ಕೃಷ್ಣ ರಾಯಚೂರು, ೨೦೦೮, **ಜೋಳಿಗೆಯಲ್ಲೊಂದು ಅಗುಳು**, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೩೯. ಕೋಟಿಗಾನಹಳ್ಳಿ ರಾಮಯ್ಯ(ಸಂ), ೨೦೦೫, **ತಲಪರಿಗೆ**, ಅಭಿಮಾನಿ ಪ್ರಕಾಶನ, ಬೆಂಗಳೂರು.

೪೦. ಗಂಗಾರಾಂ ಚಂಡಾಳ, ೨೦೦೯, **ಆಕಾಶ-ಭೂಮಿ**, ಅಪರಂಜಿ, ಚಿಕ್ಕಮಗಳೂರು.

೪೧. ಗಣೇಶನ್ ಎಸ್, ೧೯೮೨, **ದಲಿತ ಸಾಹಿತ್ಯ ಚಳುವಳಿ**, ಪಂಚಮ ಪ್ರಕಾಶನ, ಬೆಂಗಳೂರು.

೪೨. ಗೋಪಾಲಕೃಷ್ಣ ಅಡಿಗ, ೧೯೭೭, **ಸಮಗ್ರ ಗದ್ಯ**, ಸಾಕ್ಷಿ ಪ್ರಕಾಶನ, ಬೆಂಗಳೂರು.

೪೩. ಗೋಪಾಲಕೃಷ್ಣ ಅಡಿಗ, ೧೯೮೭, **ಸಮಗ್ರ ಕಾವ್ಯ**, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

೪೪. ಗೋಪಾಲಕೃಷ್ಣ ಅಡಿಗ(ಅನು), ೧೯೯೬, **ಹುಲ್ಲಿನ ದಳಗಳು**, ಸಾಹಿತ್ಯ ಅಕಾದೆಮಿ, ನವದೆಹಲಿ.

೪೫. ಗೋರವಿ ಆಲ್ದೂರು, ೨೦೧೬, **ಮಡಿಲ ನೂಲಿನ ಕೌದಿ**, ಶ್ರೀ ಆದಿಚುಂಚನಗಿರಿ ಪ್ರಕಾಶನ, ಆದಿಚುಂಚನಗಿರಿ.

೪೬. ಚಂದ್ರಶೇಖರ್ ಟಿ.ಆರ್.(ಸಂ), ೨೦೦೫, **ದಲಿತ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ಚಂದ್ರಶೇಖರ ಕಂಬಾರ, ೧೯೯೪, **ಈವರೆಗಿನ ಹೇಳತೇನ ಕೇಳ(ಸಮಗ್ರ ಕಾವ್ಯ ೧೯೬೪-೧೯೯೪)**, ಅಕ್ಷರ ಪ್ರಕಾಶನ, ಹೆಗ್ಗೋಡು.

೪೮. ಚಂದ್ರಶೇಖರ ತಾಳ್ಯ ಮತ್ತು ಇತರರು(ಸಂ), ೨೦೧೫, **ನೆಲದ ತಳಮಳ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೯. ಚಂದ್ರಶೇಖರ ಪಾಟೀಲ(ಸಂ), ೧೯೯೮, **ಗಾಂಧಿ ಎಂಬುವ ಹೆಸರು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೦. ಚಂದ್ರಶೇಖರ ಪಾಟೀಲ ಮತ್ತು ಇತರರು(ಸಂ), ೨೦೧೨, **ಸಂಕ್ರಮಣ ಕಾವ್ಯ**, ಸಪ್ನ ಬುಕ್‌ಹೌಸ್, ಬೆಂಗಳೂರು.

೫೧. ಚಂದ್ರಿಕಾ ಪಿ., ೨೦೧೫, **ಒಬ್ಬಳೇ ಆಡುವ ಆಟ**, ಅಕ್ಷರ ಪ್ರಕಾಶನ, ಹೆಗ್ಗೋಡು.

೫೨. ಚನ್ನಪ್ಪ ಅಂಗಡಿ, ೨೦೧೧, **ಭೂಮಿ ತಿರುಗುವ ಶಬ್ದ**, ಲಡಾಯಿ ಪ್ರಕಾಶನ, ಗದಗ.

೫೩. ಚಾಂದಿನಿ, ೨೦೧೫, **ಮನದ ಕಣ್ಣು,** ಲೆಸ್ಬಿಟ್ ಸಂಸ್ಥೆ, ಬೆಂಗಳೂರು.

೫೪. ಗಿರಡ್ಡಿ ಗೋವಿಂದರಾಜ(ಸಂ), ೨೦೦೦, **ಯುವಕಾವ್ಯ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೫. ಗೀತಾ ವಸಂತ, ೨೦೧೧, **ತುಮಕೂರು ಜಿಲ್ಲೆಯ ಮಹಿಳಾ ಲೇಖಲೋಕ,** ತುಮಕೂರು ವಿಶ್ವವಿದ್ಯಾಲಯ, ತುಮಕೂರು.

೫೬. ಜಂಬಣ್ಣ ಅಮರಚಿಂತ, ೨೦೦೮, **ಪದಗಳು ನಡೆದಾಡುತಿವೆ ಪಾದಗಳಾಗಿ,** ಕನಸು ಪ್ರಕಾಶನ, ರಾಯಚೂರು.

೫೭. ಜಯಂತ ಕಾಯ್ಕಿಣಿ, ೨೦೦೬, **ಒಂದು ಜಿಲೇಬಿ,** ಅಂಕಿತ ಪುಸ್ತಕ ಪ್ರಕಾಸನ, ಬೆಂಗಳೂರು.

೫೮. ಜಯಂತ ಕಾಯ್ಕಿಣಿ, ೨೦೦೮, **ರಂಗದಿಂದೊಂದಿಷ್ಟು ದೂರ,** ಕೋಟಿತೀರ್ಥ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೫೯. ಜಯಂತ ಕಾಯ್ಕಿಣಿ, ೨೦೦೮, **ಜಯಂತ ಕಾಯ್ಕಿಣಿ ಕವಿತೆಗಳು,** ಅಂಕಿತ ಪ್ರಕಾಶನ, ಬೆಂಗಳೂರು.

೬೦. ಜಯಪ್ರಕಾಶ್ ಬಂಜಗೆರೆ, ೨೦೦೫, **ಉಲಿಯ ಉಯ್ಯಾಲೆ,** ಸಿವಿಜಿ ಪಬ್ಲಿಕೇಷನ್, ಬೆಂಗಳೂರು.

೬೧. ಜೋಗಿ, ೨೦೧೨, **ಹಲಗೆ ಬಳಪ,** ಅಂಕಿತ ಪುಸ್ತಕ, ಬೆಂಗಳೂರು.

೬೨. ತಾಜುಮಾ, ೨೦೧೧, **ತಾಜುಮಾ ಕವಿತೆಗಳು,** ಲಂಕೇಶ್ ಪ್ರಕಾಶನ, ಬೆಂಗಳೂರು.

೬೩. ತೀ.ನಂ. ಶ್ರೀಕಂಠಯ್ಯ, ೨೦೦೭, **ಭಾರತೀಯ ಕಾವ್ಯ ಮೀಮಾಂಸೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೬೪. ತೇಜಶ್ರೀ ಜ. ನಾ., ೨೦೧೧, **ಉಸ್ರು ಬುಂಡೆ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೬೫. ದಂಡಪ್ಪ ಹೆಚ್.(ಸಂ), ೨೦೦೧, **ಬಡವರ ನಗುವಿನ ಶಕ್ತಿ,** ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೬೬. ದಂಡಪ್ಪ ಹೆಚ್.(ಸಂ), ೨೦೦೬ **ಸುವರ್ಣ ಸಾಹಿತ್ಯ ವಿಮರ್ಶೆ,** ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು.

೬೭. ದೇವಯ್ಯ ಹರವೆ, ೧೯೯೧, **ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೬೮. ದೊಡ್ಡನಿಂಗಪ್ಪ ಆಲೂರು, ೨೦೦೯, **ಮುಟ್ಟು,** ಪಂಪ ಪ್ರಕಾಶನ, ಮೈಸೂರು.

೬೯. ನಜೀರ್ ಚಂದಾವರ, ೨೦೧೫, **ಕಾತರ,** ಯಾಜಿ ಪ್ರಕಾಶನ, ಹೊಸಪೇಟೆ.

೭೦. ನಟರಾಜ್ ಹುಳಿಯಾರ್, ೧೯೯೯, **ರೂಪಕಗಳ ಸಾವು,** ನಮ್ಮ ಪ್ರಕಾಶನ, ಬಿಳಿಗೆರೆ.

೭೧. ನಟರಾಜ್ ಹುಳಿಯಾರ್, ೨೦೦೪, **ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೨. ನರಸಿಂಹಸ್ವಾಮಿ ಕೆ.ಎಸ್, ೧೯೮೬, **ಮಲ್ಲಿಗೆಯ ಮಾಲೆ(ಸಮಗ್ರ ಕವನ ಸಂಕಲನ),** ಲಿಪಿ ಪ್ರಕಾಸನ, ಬೆಂಗಳೂರು.

೭೩. ನಾಗಭೂಷಣಸ್ವಾಮಿ ಓ.ಎಲ್.(ಸಂ), **ನಮ್ಮ ಕನ್ನಡ ಕಾವ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೪. ನಾಗಭೂಷಣಸ್ವಾಮಿ ಓ.ಎಲ್, ೨೦೦೦, **ಕನ್ನಡಕ್ಕೆ ಬಂದ ಕವಿತೆ,** ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ.

೭೫. ನಾಗಣ್ಣ ಕಿಲಾರಿ, ೨೦೧೫, **ತಪಸ್ಸಿಗಿಳಿದ ಮಳೆ,** ಮೇಷ ಪಬ್ಲಿಕೇಶನ್ಸ್, ಬೆಂಗಳೂರು.

೭೬. ನಾಗರಾಜ್ ಡಿ.ಆರ್., ೧೯೮೭, **ಶಕ್ತಿ ಶಾರದೆಯ ಮೇಳ,** ಅಕ್ಷರ ಪ್ರಕಾಶನ, ಹೆಗ್ಗೋಡು.

೭೭. ನಾಗರಾಜ್ ಡಿ.ಆರ್., ೧೯೯೬, **ಸಾಹಿತ್ಯ ಕಥನ,** ಅಕ್ಷರ ಪ್ರಕಾಶನ, ಹೆಗ್ಗೋಡು.

೭೮. ನಾಗರಾಜ್ ಡಿ.ಆರ್, ೨೦೦೨, **ಉರಿ ಚಮ್ಮಾಳಿಗೆ,** ವಸಂತ ಪ್ರಕಾಶನ, ಬೆಂಗಳೂರು.

೭೯. ನಾಗರಾಜ್ ಡಿ.ಆರ್., ೨೦೧೪, **ಅಲ್ಲಮಪ್ರಭು ಮತ್ತು ಶೈವಪ್ರತಿಭೆ,** ಅಕ್ಷರ ಪ್ರಕಾಶನ, ಹೆಗ್ಗೋಡು.

೮೦. ನಾಗರಾಜ್ ಡಿ.ಆರ್., ೨೦೦೯, **ಅಮೃತ ಮತ್ತು ಗರುಡ,** ಅಕ್ಷರ ಪ್ರಕಾಶನ, ಹೆಗ್ಗೋಡು.

೮೧. ನಾಗರಾಜ್ ಡಿ.ಆರ್., ೨೦೧೫, **ಶಕ್ತಿ ಶಾರದೆಯ ಮೇಳ,** ಅಕ್ಷರ ಪ್ರಕಾಶನ, ಹೆಗ್ಗೋಡು.

೮೨. ನಾಗರಾಜ ಕಿ.ರಂ.(ಸಂ), ೧೯೭೭, **ಆಪತ್ಕಾಲೀನ ಕವಿತೆಗಳು,** ಮುಂಗಾರು ಪ್ರಕಾಶನ, ಬೆಂಗಳೂರು.

೮೩. ನಾಗರಾಜ ಹೆಗಡೆ ಅಪಣಾಲ, ೨೦೦೯, **ಕಣ್ಣಂಚಿನ ಕಡಲು,** ಅಭಿನವ ಪ್ರಕಾಶನ, ಬೆಂಗಳೂರು.

೮೪. ನಾಯಕ ಜಿ.ಎಚ್, ೧೯೭೩, **ಸಮಕಾಲೀನ,** ಅಕ್ಷರ ಪ್ರಕಾಶನ, ಸಾಗರ.

೮೫. ನಾಯಕ ಜಿ.ಎಚ್.(ಸಂ), ೨೦೦೦, **ಶತಮಾನದ ಕನ್ನಡ ಸಾಹಿತ್ಯ–೧,** ರಾಘವೇಂದ್ರ ಪ್ರಕಾಶನ, ಅಂಕೋಲ.

೮೬. ನಾಯಕ ಜಿ.ಎಚ್.(ಸಂ), ೨೦೦೯, **ಶತಮಾನದ ಕನ್ನಡ ಸಾಹಿತ್ಯ–೨,** ರಾಘವೇಂದ್ರ ಪ್ರಕಾಶನ, ಅಂಕೋಲ.

೮೭. ನಾಯಕ ವಿ.ಗ., ೧೯೯೯, **ಕನ್ನಡದಲ್ಲಿ ಹನಿಗವನಗಳು,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ.

೮೮. ನಾಯಕ ಹಾ.ಮ(ಪ್ರ.ಸಂ), ೧೯೮೪, **ಶ್ರೀಕಂಠಿಕೆ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೮೯. ನಾರಾಯಣ ಕೆ.ವಿ, ೧೯೯೭, **ಬೇರು ಕಾಂಡ ಚಿಗುರು,** ವಿವೇಕ ಪ್ರಕಾಶನ ವಿಚಾರ ವೇದಿಕೆ ಕರ್ನಾಟಕ, ಬೆಂಗಳೂರು.

೯೦. ನಿಂಗಪ್ಪ ಮುದೇನೂರು, ೧೯೯೭, **ತಾಯಿ ನೆಲದಲ್ಲಿ,** ಸಮತಾ ಪ್ರಕಾಶನ, ಹೊಸಪೇಟೆ.

೯೧. ನಿಂಗಪ್ಪ ಮುದೇನೂರು, ೨೦೦೫, **ಮಣ್ಣಿನ ಕವಿತೆ,** ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು.

೯೨. ನಿರಂಜನ್ ದಾಸ್ ರಾಜ್ವಾನ್.ಜಿ, ೨೦೦೯, **ಜಾಗರದ ನವಿಲು,** ಎಚ್.ವಿ.ಎಸ್ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೯೩. ಪುಟ್ಟಯ್ಯ ಬಿ.ಎಂ., ೨೦೦೮, **ಮುಖಾಮುಖಿ,** ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

೯೪. ಪುಟ್ಟಯ್ಯ ಬಿ.ಎಂ., ೨೦೦೮, **ದಲಿತರು ಮತ್ತು ಭೂಮಿಯ ಪ್ರಶ್ನೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೯೫. ಪುರುಷೋತ್ತಮ ಬಿಳಿಮಲೆ, ೧೯೯೦, **ಬಂಡಾಯ ದಲಿತ ಸಾಹಿತ್ಯ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯೬. ಪೂರ್ಣಚಂದ್ರ ತೇಜಸ್ವಿ ಕೆ.ಪಿ, ೨೦೦೮, **ಸೋಮುವಿನ ಸ್ವಗತ ಲಹರಿ,** ಪುಸ್ತಕ ಪ್ರಕಾಶನ, ಮೈಸೂರು.

೯೭. ಪ್ರಜ್ಞಾ ಮತ್ತಿಹಳ್ಳಿ, ೨೦೦೬, **ಕಾಲನ ಕಾಲಂದುಗೆ,** ಲಡಾಯಿ ಪ್ರಕಾಶನ, ಗದಗ.

೯೮. ಪ್ರಭುಶಂಕರ, ೧೯೮೧, **ಕನ್ನಡದಲ್ಲಿ ಭಾವಗೀತೆ,** ವೇದಿತಾ ಪ್ರಕಾಶನ, ಮಾನಸ ಗಂಗೋತ್ರಿ ಕ್ವಾರ್ಟರ್ಸ್, ಮೈಸೂರು.

೯೯. ಪ್ರಸಾದಸ್ವಾಮಿ ಎಸ್., ೨೦೦೯, **ಸ್ವಗತ,** ಅವಿರತ ಪುಸ್ತಕ, ಬೆಂಗಳೂರು.

೧೦೦. ಬರಗೂರು ರಾಮಚಂದ್ರಪ್ಪ(ಸಂ), ೧೯೯೦, **ಬಂಡಾಯ ಕಾವ್ಯ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೦೧. ಬರಗೂರು ರಾಮಚಂದ್ರಪ್ಪ, ೧೯೯೨, **ಆಫ್ರಿಕಾದ ಕಪ್ಪು ಸಾಹಿತ್ಯ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦೨. ಬರಗೂರು ರಾಮಚಂದ್ರಪ್ಪ, ೨೦೦೧, **ಕಾಂಟೆಸಾದಲ್ಲಿ ಕಾವ್ಯ,** ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೧೦೩. ಬಸವರಾಜ ಕಲ್ಗುಡಿ(ಸಂ), ೨೦೦೬, **ಸುವರ್ಣ ವಿಚಾರ ಸಾಹಿತ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೦೪. ಬಸವರಾಜ ಕಲ್ಗುಡಿ, ೨೦೧೩, **ಮೈಯೇ ಸೂರು ಮನವೇ ಮಾತು,** ಅಭಿನವ ಪ್ರಕಾಶನ, ಬೆಂಗಳೂರು.

೧೦೫. ಬಸವರಾಜ ಸಬರದ(ಸಂ), ೧೯೯೨, **ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೧೦೬. ಬಸವರಾಜ ಸಬರದ, ೨೦೦೦, **ಹೈದರಾಬಾದ್ ಕರ್ನಾಟಕದ ತತ್ವಪದಗಳು,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೦೭. ಬಸವರಾಜ ಸಬರದ, ೨೦೦೦, **ಸಬರದ ಕವಿತೆಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೦೮. ಬಸವರಾಜ ಸಾದರ(ಸಂ), ೧೯೯೨, **ಆಧುನಿಕ ಕನ್ನಡ ಮಹಾಕಾವ್ಯಗಳು,** ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೦೯. ಬಸವರಾಜ ಸಾದರ(ಸಂ), ೨೦೦೨, **೨೦ನೇ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು,** ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

೧೧೦. ಬಸವರಾಜ ಸೂಳಿಭಾವಿ, ೨೦೧೩, **ಬಟ್ಟೆಯೆಂಬುದು ಬೆಂಕಿಯ ಹಾಗೆ,** ಕವಿ ಪ್ರಕಾಶನ, ಬೆಂಗಳೂರು.

೧೧೧. ಬಸವರಾಜ ಸೂಳಿಭಾವಿ, ೨೦೧೩, **ತೇವ ಕಾಯದ ಬೀಜ,** ಕವಿ ಪ್ರಕಾಶನ, ಹೊನ್ನಾವರ.

೧೧೨. ಬಸವರಾಜು ಜಿ.ಪಿ., ೨೦೦೯, **ಬೊಗಸೆಯಲ್ಲಿ ಕಡಲು,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೧೩. ಬಸವರಾಜ ಹೂಗಾರ, ೨೦೧೩, **ಹಾದಿ ಜಂಗಮ,** ಲಡಾಯಿ ಪ್ರಕಾಶನ, ಗದಗ.

೧೧೪. ಬಾಲಸುಬ್ರಹ್ಮಣ್ಯ ನರಹಳ್ಳಿ, ವೀಣಾ ಶಾಂತೇಶ್ವರ(ಸಂ), ೧೯೯೦, **ಹೊಸ ಹೆಜ್ಜೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧೫. ಬುದ್ದಣ್ಣ ಹಿಂಗಮಿರೆ, ೨೦೦೨, **ಕನ್ನಡ ನವ್ಯಕಾವ್ಯ ಭೂಮಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧೬. ಭಂಡಾರಿ ಆರ್.ವಿ. ಕೆರೆಕೋಣ, ೨೦೧೧, **ಋತುಗೀತಗಳು,** ಬಂಡಾಯ ಪ್ರಕಾಶನ, ಅರೆಅಂಗಡಿ.

೧೧೭. ಮಂಜುನಾಥ್ ಎಸ್., ೨೦೧೨, **ನೆಲದ ಬೇರು ನಭದ ಬಿಳಲು,** ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೧೧೮. ಮಂಜುನಾಥ ಎಸ್., ೨೦೧೫, **ಬೊಗಸೆ ಜಲ ಬೀಜಕ್ಕಾಗಿ,** ಅಭಿರುಚಿ ಪ್ರಕಾಶನ, ಮೈಸೂರು.

೧೧೯. ಮಮತಾಜಿ ಸಾಗರ, ೨೦೦೭, **ಹೀಗೆ ಹಾಳೆಯ ಮೇಲೆ ಹಾಡು,** ಅಭಿನವ ಪ್ರಕಾಶನ, ಬೆಂಗಳೂರು.

೧೨೦. ಮಹದೇವಯ್ಯ ಪಿ.(ಸಂ), ೨೦೦೫, **ದಲಿತರು ಮತ್ತು ಪರ್ಯಾಯ ರಾಜಕಾರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೧. ಮೃತ್ಯುಂಜಯ ಕೆ.ಪಿ., ೨೦೦೦, **ಮರ್ತ್ಯ ಮೀರದ ಮಾತು,** ನೆಲಮನೆ ಪ್ರಕಾಸನ, ಮಂಡ್ಯ.

೧೨೨. ಮೃತ್ಯುಂಜಯ ಕೆ.ಪಿ., ೨೦೦೨, **ಎಲೆ ಎಸೆದ ಮರ,** ಬಾಬುಲಾಲ್ ಮೆಮೋರಿಯಲ್ ಬುಕ್ ಟ್ರಸ್ಟ್, ಮಂಡ್ಯ.

೧೨೩. ಮೃತ್ಯುಂಜಯ ಕೆ.ಪಿ., ೨೦೧೪, **ನನ್ನ ಶಬ್ದ ನಿನ್ನಲಿ ಬಂದು,** ಲಡಾ ಪ್ರಕಶಾನ, ಗದಗ.

೧೨೪. ಮಾಧವ ಪೆರಾಜೆ, ೨೦೦೦, **ಡೆರಿಡಾ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೨೫. ಮಾಲತಿ ಪಟ್ಟಣಶೆಟ್ಟಿ, ೨೦೦೯, **ಎಷ್ಟೊಂದು ನಾವೆಗಳು,** ಸಾಹಿತ್ಯ ಪ್ರಕಾಶನ, ಹುಬ್ಬಳಿ.

೧೨೬. ಮೀನಾಕ್ಷಿ ಡಿ., ೨೦೦೧, **ಪ್ರೀತಿಯ ಸೋನೆ,** ಮಯ ಪ್ರಕಾಶನ, ಕಮಲಾಪುರ.

೧೨೭. ಮೀನಾ ಸದಾಶಿವ, ೧೯೯೭, **ಕೋಗಿಲೆಗೆ ಕಲಿಸಲಾರೆ,** ಸಂಕ್ರಮಣ ಪ್ರಕಾಶನ, ಧಾರವಾಡ-ಬೆಂಗಳೂರು.

೧೨೮. ಮೀನಾ ಸದಾಶಿವ, ೨೦೦೧, **ಹಕ್ಕಿಗೊಂದಿಷ್ಟು ಜಾಗ ಬಿಡು,** ಸಂಕ್ರಮಣ ಪ್ರಕಾಶನ, ಬೆಂಗಳೂರು.

೧೨೯. ಮೀನಾ ಸದಾಶಿವ, ೨೦೦೪, **ಸಂತೆ ಬೆಟ್ಟರುಝರಿ,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೧೩೦. ಮುಕುಂದರಾಜ್ ಎಲ್.ಎನ್, ೨೦೦೪, **ನಿರಂಕುಶ,** ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೧೩೧. ಮುಗಳಿ ರಂ.ಶ್ರೀ., ೧೯೯೬, **ಕನ್ನಡ ಕಾವ್ಯ ಸಂಚಯ,** ಕರ್ನಾಟಕ ಸಾಹಿತ್ಯ ಅಕಾದೆಮಿ.

೧೩೨. ಮುನಿವೆಂಕಟಪ್ಪ ವಿ., ೧೯೯೯, **ಕಾಡು ಕಣಿವೆಯ ಹಕ್ಕಿ,** ವಿಚಾರವಾದಿ ಪ್ರಕಾಶನ, ಮೈಸೂರು.

೧೩೩. ಮುಳ್ಳೂರು ನಾಗರಾಜ, ೧೯೯೨, **ಮರಣ ಮಂಡಲ ಮಧ್ಯದೊಳಗೆ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೩೪. ಮೂಡ್ನಾಕೂಡು ಚಿನ್ನಸ್ವಾಮಿ, ೨೦೦೨, **ನೊಂದವರ ನೋವು,** ಲೋಹಿಯ ಪ್ರಕಾಶನ, ಬಳ್ಳಾರಿ.

೧೩೫. ಮೊಗಸಾಲೆ ನಾ., ೧೯೯೫, **ಸ್ವಂತಕ್ಕೆ ಸ್ವಂತಾವತಾರ,** ಅನನ್ಯ ಪ್ರಕಾಶನ, ಧಾರವಾಡ.

೧೩೬. ಮೊಗಸಾಲೆ ನಾ., ೧೯೯೯, **ನೆಲದ ನೆರಳು,** ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು.

೧೩೭. ಮೊಗಸಾಲೆ ನಾ., ೨೦೦೩, **ಇದಲ್ಲ ಇದಲ್ಲ,** ಅಭಿರುಚಿ ಪ್ರಕಾಶನ, ಮೈಸೂರು.

೧೩೮. ಮೊಗಸಾಲೆ ನಾ., ೨೦೦೩, **ಅರವತ್ತರ ತೇರು,** ಅಭಿರುಚಿ ಪ್ರಕಾಶನ, ಮೈಸೂರು.

೧೩೯. ಮೊಗಸಾಲೆ ನಾ., ೨೦೦೬, **ಇಹಪರದ ಕೊಳ,** ಸುಮುಖ ಪ್ರಕಾಶನ, ಬೆಂಗಳೂರು.

೧೪೦. ಮೊಗಳ್ಳಿ ಗಣೇಶ್, ೧೯೯೯, **ದಲಿತರು ಮತ್ತು ಜಾಗತೀಕರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪೧. ಮೊಗಳ್ಳಿ ಗಣೇಶ್, ೨೦೦೧, **ಸೂರ್ಯನ ಬಚ್ಚಿಡಬಹುದೆ,** ಶುಭದ ಪ್ರಕಾಶನ, ಬೆಂಗಳೂರು.

೧೪೨. ಮೊಗಳ್ಳಿ ಗಣೇಶ್, ೨೦೦೮, **ದೇವ ಸ್ಮಶಾನ,** ಪಲ್ಲವ ಪ್ರಕಾಶನ, ಚೆನ್ನಪಟ್ಟಣ.

೧೪೩. ಮೊಗಳ್ಳಿ ಗಣೇಶ್(ಸಂ), ೨೦೦೯, **ಬಣ್ಣದ ಚಿತ್ತ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪೪. ಮೋಹನ ಕುಂಟಾರ್, ೧೯೯೨, **೧೯೭೦-೮೦ ದಶಕದ ಕನ್ನಡ ಸಣ್ಣಕತೆಗಳು ಒಂದು ಅಧ್ಯಯನ,** ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಮಧುರೈ ಕಾಮರಾಜ ವಿಶ್ವವಿದ್ಯಾಲಯ, ಮಧುರೈ.

೧೪೫. ಮೋಹನ್ ಜಿ.ಎನ್., ೨೦೦೭, **ಪ್ರಶ್ನೆಗಳಿರುವುದು ಷೇಕ್ಸ್‌ಪಿಯರನಿಗೆ,** ಅಭಿನವ ಪ್ರಕಾಶನ, ಬೆಂಗಳೂರು.

೧೪೬. ಮೋಹನ ನಾಗಮ್ಮನವರ ಆರ್., ೧೯೯೬, **ಅಗ್ರಹಾರದ ಒಂದು ಸಂಜೆ,** ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೪೭. ರಂಗನಾಥ ಕಂಟನಕುಂಟೆ, ೨೦೧೧, **ಗೋಡೆಯ ಚಿತ್ರ,** ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೧೪೮. ರಮೇಶ ಎಚ್.ಆರ್., ೨೦೦೯, **ಸಾಸಿವೆ ಹೂವ ಚರಿತ,** ಅಭಿನವ ಬೆಂಗಳೂರು.

೧೪೯. ರಮೇಶ ಎಚ್.ಆರ್, ೨೦೧೦, **ಝುನ್ನದಿ,** ಅಭಿನವ ಪ್ರಕಾಶನ, ಬೆಂಗಳೂರು.

೧೫೦. ರಮೇಶಬಾಬು ಚೀಮನಹಳ್ಳಿ, ೨೦೧೨, ಎರಡು **ಲೋಟಗಳು,** ಅಭಿನವ ಪ್ರಕಾಶನ, ಬೆಂಗಳೂರು.

೧೫೧. ರತಿ ಎಂ.ಟಿ., ೨೦೦೯, **ತಂಪು,** ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು.

೧೫೨. ರವೀಂದ್ರನಾಥ ಸಿ., ೨೦೧೧, **ಒಂದು ಹನಿ ಬೆಳಕು,** ಅಂಕಿತ ಪುಸ್ತಕ, ಬೆಂಗಳೂರು.

೧೫೩. ರವೀಂದ್ರನಾಥ ಸಿ., ೨೦೧೪, **ಹೊಳೆಗುಂಟ ನಡೆದ ಹುಡುಗಿ,** ಪಲ್ಲವ ಪ್ರಕಾಶನ ಚನ್ನಪಟ್ಟಣ.

೧೫೪. ರವೀಂದ್ರ ಸಾಗರ ಎಚ್.ಬಿ., ೨೦೧೧, **ಕವಿತೆಯ ಕನಸು,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೫೫. ರಶ್ಮಿ ಹೆಗಡೆ, ೨೦೦೯, **ಲೆಕ್ಕಕ್ಕೆ ಸಿಗದವರು,** ಅಭಿನವ ಪ್ರಕಾಶನ, ಬೆಂಗಳೂರು.

೧೫೬. ರಹಮತ್ ತರೀಕೆರೆ(ಸಂ), ೨೦೦೮, **ಹೊಸ ತಲೆಮಾರಿನ ತಲ್ಲಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫೭. ರಾಘವೇಂದ್ರರಾವ್ ಎಚ್.ಎಸ್., ೧೯೯೫, **ಹಾಡೇ ಹಾದಿಯ ತೋರಿತು,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೧೫೮. ರಾಘವೇಂದ್ರರಾವ್ ಎಚ್.ಎಸ್.(ಸಂ), ೨೦೦೧, **ಶತಮಾನದ ಸಾಹಿತ್ಯ ವಿಮರ್ಶೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫೯. ರಾಘವೇಂದ್ರರಾವ್ ಎಚ್.ಎಸ್.(ಸಂ), ೨೦೦೪, **ಅರವಿಂದ ಮಾಲಗತ್ತಿ ಅವರ ಆಯ್ದ ಕವಿತೆಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೬೦. ರಾಘವೇಂದ್ರರಾವ್ ಎಚ್.ಎಸ್.(ಸಂ), ೨೦೦೫, **ಸಾಹಿತ್ಯ ಸಂವಾದ,** ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು.

೧೬೧. ರಾಘವೇಂದ್ರರಾವ್ ಎಚ್.ಎಸ್.(ಸಂ), **ಶತಮಾನದ ಸಾಹಿತ್ಯ ವಿಮರ್ಶೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೬೨. ರಾಘವೇಂದ್ರರಾವ್ ಎಚ್.ಎಸ್.(ಅನು), ೨೦೧೩, **ಕಪ್ಪು ಕವಿತೆ,** ಅಭಿನವ, ಬೆಂಗಳೂರು.

೧೬೩. ರಾಜ್ಯಶ್ರೀ ಎಸ್.ಎಚ್., ೨೦೧೧, **ಕಾಡುವ ನೆನಪುಗಳು,** ಅಭಿನವ ಪ್ರಕಾಶನ, ಬೆಂಗಳೂರು.

೧೬೪. ರಾಜೇಂದ್ರ ಚೆನ್ನಿ, ೨೦೧೪, **ಎಂದಿಗೂ ಹೊಸದು,** ಅಭಿರುಚಿ ಪ್ರಕಾಶನ, ಮೈಸೂರು.

೧೬೫. ರಾಜೇಂದ್ರ ಪ್ರಸಾದ, ೨೦೧೪, **ಕೋವಿ ಮತ್ತು ಕೊಳಲು,** ಅನೇಕ ಪ್ರಕಾಶನ, ಮಂಡ್ಯ.

೧೬೬. ರಾಜೇಂದ್ರ ಪ್ರಸಾದ, ೨೦೧೬, **ಲಾವೋನ ಕನಸು,** ಅನೇಕ ಪ್ರಕಾಶನ, ಮಂಡ್ಯ.

೧೬೭. ರಾಮಚಂದ್ರನ್ ಸಿ.ಎನ್., ೨೦೧೧, **ಆಖ್ಯಾನ ವ್ಯಾಖ್ಯಾನ,** ಸಪ್ನ ಬುಕ್ ಹೌಸ್, ಬೆಂಗಳೂರು.

೧೬೮. ರಾಮಚಂದ್ರ ಶರ್ಮಾ, ೨೦೦೭, **ಸಪ್ತಪದಿ,** ಅಭಿನವ ಪ್ರಕಾಶನ, ಬೆಂಗಳೂರು.

೧೬೯. ರಾಮಲಿಂಗಪ್ಪ ಟಿ. ಬೇಗೂರು, ೨೦೦೧, **ಮಾಯಾ ಪಾತಾಳ,** ಅಭಿನವ ಪ್ರಕಾಶನ, ಬೆಂಗಳೂರು.

೧೭೦. ರಾಮಲಿಂಗಪ್ಪ ಟಿ. ಬೇಗೂರು, ೨೦೧೪, **ಮಹಿಳೆ: ಚರಿತ್ರೆ ಪುರಾಣ,** ಅಂಕಿತ ಪುಸ್ತಕ, ಬೆಂಗಳೂರು.

೧೭೧. ರಾಮಸ್ವಾಮಿ ಡಿ.ಎಸ್., ೨೦೧೦, **ತೆರೆದರಷ್ಟೇ ಬಾಗಿಲು,** ಲಡಾಯಿ ಪ್ರಕಾಶನ, ಗದಗ.

೧೭೨. ರುದ್ರೇಶ್ವರಸ್ವಾಮಿ ಎಂ.ಎಸ್., ೨೦೧೨, **ಆ ತೀರದ ಮೋಹ,** ಸಪ್ನ ಬುಕ್ ಹೌಸ್, ಬೆಂಗಳೂರು.

೧೭೩. ರುದ್ರೇಶ್ವರಸ್ವಾಮಿ ಎಂ.ಎಸ್., ೨೦೧೫, **ಅವಳ ಕವಿತೆ,** ಅನೇಕ ಪ್ರಕಾಶನ, ಮಂಡ್ಯ.

೧೭೪. ರೂಪಶ್ರೀ ಕಲ್ಲಿಗನೂರು, ೨೦೧೫, **ಚಿತ್ತ ಭಿತ್ತಿ,** ಲಡಾಯಿ ಪ್ರಕಾಶನ, ಗದಗ.

೧೭೫. ಲಂಕೇಶ್ ಪಿ.(ಸಂ), ೨೦೧೧, **ಅಕ್ಷರ ಹೊಸ ಕಾವ್ಯ,** ಲಂಕೇಶ್ ಪ್ರಕಾಶನ, ಬೆಂಗಳೂರು.

೧೭೬. ಲಂಕೇಶ್ ಪಿ., ೨೦೧೦, **ಸಾಹಿತಿ ಸಾಹಿತ್ಯ ವಿಮರ್ಶೆ,** ಲಂಕೇಶ್ ಪ್ರಕಾಶನ, ಬೆಂಗಳೂರು.

೧೭೭. ಲಕ್ಕಪ್ಪಗೌಡ ಹೆಚ್.ಜೆ.(ಪ್ರ.ಸಂ), ೧೯೯೦, **ಬಂಡಾಯ ಸಾಹಿತ್ಯ ಚಳುವಳಿ ಹತ್ತು ವರ್ಷ,** ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೧೭೮. ಲಕ್ಷ್ಮಣ ಬದಾಮಿ, ೨೦೧೪, **ಮನುಷ್ಯರು ಬೇಕಾಗಿದ್ದಾರೆ,** ಅಭಿಲಾಷ ಪ್ರಕಾಶನ, ಸಿರೂರು.

೧೭೯. ಲಕ್ಷ್ಮೀಪತಿ ಕೋಲಾರ, ೨೦೦೧, **ಕಾಲುದಾರಿ,** ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು.

೧೮೦. ಲಕ್ಷ್ಮೀಪತಿ ಕೋಲಾರ, ೨೦೧೩, **ನೀರ ಚಿಗುರು,** ಕೋ ಪ್ರಕಾಶನ.

೧೮೧. ಲಲಿತಾ ಸಿದ್ಧಬಸವಯ್ಯ, ೨೦೦೨, **ಮೊದಲ ಸಿರಿ,** ಚಿನ್ಮಯ ಪ್ರಕಾಶನ, ತುಮಕೂರು.

೧೮೨. ಲೋಕೇಶ ಅಗಸನಕಟ್ಟೆ, ೨೦೦೩, **ಕನ್ನಡ ಕಾವ್ಯ,** ಆಲೋಕ ಪ್ರಕಾಶನ, ಚಿತ್ರದುರ್ಗ.

೧೮೩. ವಸಂತ ಬನ್ನಾಡಿ, ೨೦೧೧, **ಇಗೋ ಅರಿವೆ,** ತಿಂಗಳ ಬೆಳಕು ಪ್ರಕಾಶನ, ಕುಂದಾಪುರ.

೧೮೪. ವಸು ಮಳಲಿ, ೨೦೧೬, **ಮೊಳಕೆಯೊಡೆಯುವ ಬೀಜ,** ಲಡಾಯಿ ಪ್ರಕಾಶನ, ಗದಗ.

೧೮೫. ವಾಸುದೇವ ನಾಡಿಗ್, ೨೦೧೪, **ನಿನ್ನ ಧ್ಯಾನದ ಹಣತೆ,** ಫಲ್ಗುಣಿ ಪುಸ್ತಕ, ಬೆಂಗಳೂರು.

೧೮೬. ವಿಕ್ರಮ ವಿಸಾಜಿ, ೨೦೦೮, **ನಾದಗಳು ನುಡಿಯಾಗಲೇ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೮೭. ವಿಠಲ ದಳವಾಯಿ, ೨೦೧೨, **ಬೋಧಿ ನೆರಳಿನ ದಾರಿ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೮೮. ವೀರಪ್ಪ ಮೊಯಿಲಿ ಎಂ., ಮಾಲತಿ ವಿ. ಮೊಯಿಲಿ, ೧೯೯೫, **ಜೊತೆಯಾಗಿ ನಡೆಯೋಣ,** ಆಶಾ ಸಾಹಿತ್ಯ ಪ್ರಕಾಶನ, ಬೆಂಗಳೂರು.

೧೮೯. ವೆಂಕಟೇಶಮೂರ್ತಿ ಎಚ್.ಎಸ್.(ಸಂ), ೨೦೦೪, **ಕನ್ನಡ ಸಾನೆಟ್ ಸಂಗ್ರಹ,** ಸಾಹಿತ್ಯ ಅಕಾದೆಮಿ ನವದೆಹಲಿ.

೧೯೦. ಶರೀಫ ಹಸಮಕಲ್, ೨೦೧೫, **ಚಿಲ್ಲರೆಗೆ ಕದಲದ ಜಾಗ,** ಗೌತಮ ಬುಕ್ ಹೌಸ್, ಕಮಲಾಪುರ.

೧೯೧. ಶಾಂತರಸ(ಪ್ರ.ಸಂ), ೧೯೯೬, **ಮೂರು ದಲಿತ ಕಮ್ಮಟಗಳು,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೯೨. ಶಾಂತಲಕ್ಷ್ಮಿ, ೨೦೦೮, **ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು ಒಂದು ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೯೩. ಶಿವರಾಮ ಕಾಡನಕುಪ್ಪೆ(ಸಂ), ೧೯೭೮, **ಆಯ್ದ ಕವನಗಳು (ಚಂಪಾ),** ಪಿ.ಎ.ಎನ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಜೆ.ಸಿ ರಸ್ತೆ, ಬೆಂಗಳೂರು.

೧೯೪. ಶಿವರುದ್ರಪ್ಪ ಜಿ.ಎಸ್., **ಸಾಹಿತ್ಯ ವಾರ್ಷಿಕ-೧೯೭೫, ೧೯೭೭,** ಪ್ರಸಾರಾಂಗ, ಬೆಂಗಳೂರು.

೧೯೫. ಶಿವರುದ್ರಪ್ಪ ಜಿ.ಎಸ್., **ಸಾಹಿತ್ಯ ವಾರ್ಷಿಕ-೧೯೭೭, ೧೯೭೯,** ಪ್ರಸಾರಾಂಗ, ಬೆಂಗಳೂರು.

೧೯೬. ಶಿವರುದ್ರಪ್ಪ ಜಿ.ಎಸ್., **ಸಾಹಿತ್ಯ ವಾರ್ಷಿಕ-೧೯೮೩, ೧೯೮೭,** ಪ್ರಸಾರಾಂಗ, ಬೆಂಗಳೂರು.

೧೯೭. ಶಿವರುದ್ರಪ್ಪ ಜಿ.ಎಸ್., ೧೯೮೯, **ಕನ್ನಡ ಕವಿಗಳ ಕಾವ್ಯ ಕಲ್ಪನೆ,** ಪ್ರಸಾರಾಂಗ, ಮೈಸೂರು.

೧೯೮. ಶಿವರುದ್ರಪ್ಪ ಜಿ.ಎಸ್, ೧೯೯೭, **ಜಿ.ಎಸ್. ಶಿವರುದ್ರಪ್ಪ ಸಮಗ್ರ ಕಾವ್ಯ,** ಕಾಮಧೇನು ಪ್ರಕಾಶನ, ಬೆಂಗಳೂರು.

೧೯೯. ಶಿವರುದ್ರಪ್ಪ ಜಿ.ಎಸ್.(ಸಂ), ೨೦೦೦, **ಎರಡು ದಶಕದ ಕವಿತೆ,** ಸಾಹಿತ್ಯ ಅಕಾದೆಮಿ ನವದೆಹಲಿ.

೨೦೦. ಶಿವರುದ್ರಪ್ಪ ಜಿ.ಎಸ್., ೨೦೦೭, **ಕನ್ನಡ ಕಾವ್ಯತತ್ವ ಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೧. ಶಿವರುದ್ರಪ್ಪ ಜಿ.ಎಸ್., ೨೦೦೯. **ಕಾವ್ಯಾರ್ಥ ಚಿಂತನ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೦೨. ಶಿವರುದ್ರಪ್ಪ ಜಿ.ಎಸ್., ಶ್ರೀನಿವಾಸರಾಜು(ಸಂ), ೧೯೮೦, **ಸಮಕಾಲೀನ ಕನ್ನಡ ಕವಿತೆ-೨,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೦೩. ಶಿವಾರೆಡ್ಡಿ ಕೆ.ಸಿ., ೨೦೦೩, **ಕನ್ನಡದ ಹಾಡು ಪಾಡು,** ಅಧ್ಯಯನ ಮಂಡಲ, ಬೆಂಗಳೂರು.

೨೦೪. ಶೇಷಗಿರಿರಾವ್ ಎಲ್.ಎಸ್.(ಸಂ), ೧೯೯೩, **ಕನ್ನಡ ತಾಯಿಗೆ ನುಡಿನಮನ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೫. ಶ್ರೀಕಂಠಯ್ಯ ತೀ.ನಂ, ೧೯೬೮, **ಭಾರತೀಯ ಕಾವ್ಯ ಮೀಮಾಂಸೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೦೬. ಶ್ರೀನಿವಾಸ ಬಿ., ೨೦೧೨, **ಉರಿವ ಹೊಲೆಯ ಮುಂದೆ,** ಲಡಾಯಿ ಪ್ರಕಾಶನ, ಗದಗ.

೨೦೭. ಶ್ರೀನಿವಾಸರಾಜು ಬಿ., ೨೦೦೨, **ಭಸನಾಲ ಬಂದು,** ಇಳಾ ಪ್ರಕಾಶನ, ಬೆಂಗಳೂರು.

೨೦೮. ಶ್ರೀಪಾದ ಶೆಟ್ಟಿ, ೨೦೧೩, **ಚಿತ್ರಕ್ಕೆ ಬಣ್ಣ ತುಂಬಿದವರು,** ಗೌತಮಿ ಪ್ರಕಾಶನ, ಹೊನ್ನಾವರ.

೨೦೯. ಶೂದ್ರ ಶ್ರೀನಿವಾಸ, ೨೦೧೨, **ಜೀವಕೋಶದ ಕೂಪದಲ್ಲಿ,** ಅಭಿನವ ಪ್ರಕಾಶನ, ಬೆಂಗಳೂರು.

೨೧೦. ಶೇಖರ್ ಎಂ.ಎಸ್.(ಸಂ), ೨೦೦೬, **ಮೊದಲ ತಲೆಮಾರಿನ ದಲಿತ ಸಾಹಿತಗಳು,** ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೧೧. ಶೇಖರ್ ಎಂ.ಎಸ್., ೨೦೧೦, **ಗರಿಕೆ,** ಪಲ್ಲವ ಪ್ರಕಾಶನ, ಚನ್ನಪಟ್ಟಣ.

೨೧೨. ಸಂಗಣ್ಣ ಮುದೇನೂರ, ೨೦೦೦, **ಆ ಅಜ್ಜ–ಈ ಮೊಮ್ಮಗ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೨೧೩. ಸಂಧ್ಯಾದೇವಿ, ೨೦೦೮, **ಅಗ್ನಿದಿವ್ಯ,** ಅಭಿನವ ಪ್ರಕಾಶನ, ಬೆಂಗಳೂರು.

೨೧೪. ಸಂಧ್ಯಾದೇವಿ, ೨೦೧೧, **ಝುಳಕ್ಕೆ ಮುಖ ಬೆಳಗುತ್ತದೆ,** ಅಭಿನವ ಪ್ರಕಾಶನ, ಬೆಂಗಳೂರು.

೨೧೫. ಸಂಪತ್ತು ಕುಮಾರ ಬಿ.ಸಿ.(ಸಂ), ೨೦೧೨, **ಪರಂಪರೆ ಮತ್ತು ಕವಿ ಪ್ರತಿಭೆಯ ಮುಖಾಮುಖಿ,** ಕಾರ್ತಿಕ್ ಎಂಟರ್‌ಪ್ರೈಸರ್ಸ್, ಬೆಂಗಳೂರು.

೨೧೬. ಸಣ್ಣಗುಡ್ಡಯ್ಯ ಎಚ್.ಜಿ., ೧೯೮೨, **ಪಾರಿಜಾತ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೧೭. ಸರಜೂ ಕಾಟ್ಕರ್, ೧೯೯೯, **ಮರಾಠಿ ದಲಿತ ಕಾವ್ಯ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೨೧೮. ಸರಸ್ವತಿ ಗಂಗೊಳ್ಳಿ, ೨೦೦೬, **ಕನಸು ಕನ್ನಡಿ,** ಅಭಿನವ ಪ್ರಕಾಶನ, ಬೆಂಗಳೂರು.

೨೧೯. ಸ್ವಯಂಪ್ರಭಾ, ೨೦೦೭, **ಕನ್ನಡಿಯೊಳಗಿನ ಹುಡಿಗಿಗೆ,** ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ.

೨೨೦. ಸಿದ್ಧಗಂಗಯ್ಯ ಹೊಲತಾಳು ಎಚ್.ಆರ್., ೨೦೦೦, **ಕಾವ್ಯ ಸಂವಹನ,** ನಮ್ಮ ಪ್ರಕಾಶನ, ಬಿಳಿಗೆರೆ.

೨೨೧. ಸಿದ್ಧಗಂಗಯ್ಯ ಹೊಲತಾಳು(ಅನು), ೨೦೧೧, **ಕಾವ್ಯಾಭ್ಯಾಸ,** ಪ್ರಸಾರಾಂಗ, ತುಮಕೂರು ವಿಶ್ವವಿದ್ಯಾಲಯ.

೨೨೨. ಸಿದ್ಧರಾಮ ಪೋಲೀಸ್ ಪಾಟೀಲ್(ಸಂ), ೨೦೦೬, **ಕವಿತೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೨೩. ಸಿದ್ಧರಾಮಯ್ಯ ಎಸ್.ಜಿ., ೧೯೯೭, **ಸೊಲ್ಲು ಫಲವಾಗಿ,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೨೨೪. ಸುದೇಶ್ ಮಹಾನ್, ೨೦೦೫, **ಅಬ್ದುಲ್ಲಾನ ಕೈಲಾಸ**, ಅಭಿನವ ಪ್ರಕಾಶನ, ಬೆಂಗಳೂರು.

೨೨೫. ಸುಮತೀಂದ್ರ ನಾಡಿಗ, ೧೯೯೪, **ಕಾವ್ಯವೆಂದರೇನು?**, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು.

೨೨೬. ಸೈಫ್ ಜಾನ್ಸೆ ಕೊಟ್ಟೂರು, ೨೦೧೧, **ಅಯ್ಯಂಗಾರಿಯ ಹತ್ತು ಪೈಸೆಯ ಬ್ರೆಡ್ಡು**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೨೨೭. ಹಂಪ ನಾಗರಾಜಯ್ಯ(ಪ್ರ.ಸಂ), ೧೯೮೧, **ಕನ್ನಡ ಪ್ರತಿಭಟನೆಯ ಕಾವ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೨೮. ಹಂಪ ನಾಗರಾಜಯ್ಯ, ೨೦೦೬, ರನ್ನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨೯. ಹನುಮಂತಯ್ಯ ಎನ್.ಕೆ., ೨೦೦೮, **ಕ್ರಾಂತಿಯ ವಸಂತ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೨೩೦. ಹನುಮಂತಯ್ಯ ಎಲ್., ೨೦೧೪, **ಕರ್ಣರಾಗ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೩೧. ಹರಿನಾಥ ಬಾಬು. ವಿ, ೨೦೦೯, **ಬೆಳಕ ಹೆಜ್ಜೆಯನರಸಿ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.



## ೩. ನಿಯತಕಾಲಿಕೆಗಳು ಮತ್ತು ಪತ್ರಿಕೆಗಳು

೧. ಅಗ್ನಿ

೨. ಅನಿಕೇತನ

೩. ಅರುಹು ಕುರುಹು

೪. ಕನ್ನಡ ಅಧ್ಯಯನ ಪತ್ರಿಕೆ

೫. ದೇಶಕಾಲ

೬. ಪುಸ್ತಕ ಲೋಕ

೭. ಮಯೂರ

೮. ಲೋಕ ಜಾಣ

೯. ಸಂಕ್ರಮಣ

೧೦. ಸಂಚಯ

೧೧. ಸಂವಾದ

೧೨. ಶಬ್ದಗುಣ

೧೩. ಶೂದ್ರ

೧೪. ಹೊನ್ನಾರು

೧೫. ಹೊಸತು

**ಇಂಗ್ಲಿಷ್ ಪತ್ರಿಕೆ**

Indian Literature

**ಬ್ಲಾಗ್‌ಗಳು**

೧. ಅನಿಕೇತನ

೨. ಅವಧಿ

೩. ಕೆಂಡಸಂಪಿಗೆ

೪. ಲಡಾಯಿ ಪ್ರಕಾಶನ

೫. ಚುಕ್ಕು ಬುಕ್ಕು

**ಕನ್ನಡ ದಿನಪತ್ರಿಕೆಗಳು**

೧. ಕನ್ನಡ ಪ್ರಭ

೨. ಪ್ರಜಾವಾಣಿ

೩. ವಿಜಯ ಕರ್ನಾಟಕ



